# ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ : ಬಳ್ಳಾರಿ ಜಿಲ್ಲೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಸಣ್ಣಪಾಲಯ್ಯ ಬಿ.ಪಿ.

ಮಾರ್ಗದರ್ಶಕರು
ಡಾ. ಸಿ. ಮಹದೇವ
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೭

# ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ : ಬಳ್ಳಾರಿ ಜಿಲ್ಲೆ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ಸಣ್ಣಪಾಲಯ್ಯ ಬಿ.ಪಿ.**



ಮಾರ್ಗದರ್ಶಕರು

**ಡಾ. ಸಿ. ಮಹದೇವ**

ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩೨೭೬

೨೦೧೭

# ಮಾರ್ಗದರ್ಶಕರ ದೃಢೀಕರಣ ಪತ್ರ

**ಸಣ್ಣಪಾಲಯ್ಯ ಬಿ.ಪಿ.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ : ಬಳ್ಳಾರಿ ಜಿಲ್ಲೆ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ದಿನಾಂಕ** : 23/09/2017
**ಸ್ಥಳ** : **ವಿದ್ಯಾರಣ್ಯ**

**ಡಾ. ಸಿ. ಮಹದೇವ**
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

# ಪರಿವಿಡಿ

ಅಧ್ಯಾಯ : ಒಂದು

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩. ಅಧ್ಯಯನದ ಸಮೀಕ್ಷೆ
೧.೪. ಅಧ್ಯಯನದ ವಿಧಾನ
೧.೫. ಅಧ್ಯಯನದ ಸ್ವರೂಪ

## ಅಧ್ಯಾಯ : ಒಂದು

# ಪ್ರಸ್ತಾವನೆ

ಕರ್ನಾಟಕದ ಉಕ್ಕಿನ ನಗರವೆಂದು ಕರೆಯಲ್ಪಡುವ ಬಳ್ಳಾರಿ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಜನವಸತಿ ನೆಲೆಯಾಗಿತ್ತು ಎನ್ನುವುದಕ್ಕೆ ಇಲ್ಲಿ ದೊರೆತ ಪ್ರಾಕ್ತನ ಆಧಾರಗಳು ಪ್ರಚುರಪಡಿಸುತ್ತವೆ. ಮನುಷ್ಯನ ಬೆಳವಣಿಗೆಯಲ್ಲಿ ಪರಿಸರದ ಪಾತ್ರ ಬಹಳ ಹಿರಿದಾದುದು. ಏಕೆಂದರೆ, ಆಹಾರ ಸಂಪಾದನೆ, ಬೇಟೆ ತಂತ್ರ, ಕೃಷಿ, ರಕ್ಷಣೆಗಳ ಹಾಗೆ ನಿವಾಸದ ಕಲ್ಪನೆ ಆತನಿಗೆ ಬಂದುದೂ ನಿಸರ್ಗದ ಇತರ ಪ್ರಾಣಿ-ಪಕ್ಷಿಗಳನ್ನು ನೋಡಿಯೇ ಮಾನವನಿಗೆ ಅಂಥಾ 'ವಸತಿ'ಯು ಕಲ್ಪನೆ ಬಂದುದು ಕ್ರಿ.ಪೂ. ೪೫೦೦ ವರ್ಷಗಳ ಹಿಂದೆ. ಅಂದರೆ, ನೂತನ ಶಿಲಾಯುಗದಲ್ಲಿ ಎಂಬುವುದು ವಿದ್ವಾಂಸರ ಅಭಿಮತವಾಗಿದೆ. ನೂತನ ಶಿಲಾಯುಗದಲ್ಲಿ 'ವ್ಯವಸ್ಥಿತವಾದ ವಾಸದ ಮನೆಗಳ ನಿರ್ಮಾಣದೊಂದಿಗೆ ಒಂದು ರೀತಿಯ ಪರಸ್ಪರ ಅವಲಂಬನೆಯ ಆಧಾರದ ಮೇಲೆ ಒಟ್ಟಾಗಿ ವಾಸಿಸುವ ಜನರು ತಮ್ಮ ದೈನಂದಿನ ಕಾರ್ಯವಿಭಜನೆ ಮಾಡಿಕೊಳ್ಳುತ್ತ ಜೀವಿಸುತ್ತಿದ್ದರು'.[೧] ಇದನ್ನು ಆರಂಭಿಕ ಸಂಘಟಿತ ಸಮಾಜವೆಂದು ಕರೆಯಲಾಗಿದೆ. ಇದಕ್ಕೆ ಕುಡಿತಿನಿ, ಕಪಗಲ್ಲು, ಸಂಗನಕಲ್ಲು, ತೆಕ್ಕಲಕೋಟೆ, ನಿಟ್ಟೂರು, ದರೋಜಿ, ಕುರುಗೋಡು, ತಿಮ್ಮಾಪುರ, ಕಾಕುಬಾಳ ಮೊದಲಾದ ನೆಲೆಗಳು ಕಂಡುಬಂದಿವೆ. 'ನಿಸರ್ಗದ ಕುರಿತು ಮಾನವನಿಗೆ ಗೌರವ, ಭಯ, ಭಕ್ತಿಗಳು ಮೂಡಿದವು. ಈ ದೃಷ್ಟಿಯಿಂದ ಪ್ರಕೃತಿಯ ಎಲ್ಲ ವಸ್ತುಗಳೂ ಅವನಿಗೆ ಪೂಜಾರ್ಹವಾದವು'.[೨] ಈ ಕಾರಣದಿಂದಲೇ ಗಿಡ, ಮರ, ನದಿ ಇತ್ಯಾದಿಗಳು ಅವನಿಗೆ ಪೂಜನೀಯವಾದುವಲ್ಲದೆ, ಪೂಜಾಸ್ಥಾನಗಳೂ ಆದವು. ಈ ಎಲ್ಲ ಸೃಷ್ಟಿಯ ಹಿನ್ನೆಲೆಯಾಗಿ ನಿಂತು ತನ್ನನ್ನು ನಡೆಸುತ್ತಿರುವ ಯಾವುದೋ ಒಂದು ಅನಂತ ಶಕ್ತಿ ಇದೆ ಎಂಬ ಅರಿವು ಉಂಟಾದಾಗ ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದ. ಹೀಗೆ ನೀಡಿದ ಆ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಆರಂಭಿಸಿದ ಇದು ದೇವಾಲಯ ರಚನೆಗೆ ನಾಂದಿಯಾಯಿತು. ತನಗಾಗಿ ಕಟ್ಟಿಕೊಂಡ ಮನೆ 'ಗೃಹವಾಸ್ತುಶಿಲ್ಪ ಎನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು ಧಾರ್ಮಿಕ ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪ ಎನಿಸಿತು. ಆಯಾಯಾ ಧಾರ್ಮಿಕ ಮತಗಳಿಗೆ ಅನುಗುಣವಾಗಿ ಈ ಪೂಜಾಸ್ಥಾನಗಳು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಟ್ಟವು. ಅಂದರೆ, ಹಿಂದೂಗಳು

'ದೇವಾಲಯ' ಎಂದು ಕರೆದರೆ, ಜೈನರು 'ಬಸದಿ' ಎಂದೂ, ಬೌದ್ಧರು 'ಚೈತ್ಯ'ವೆಂದೂ, ಕ್ರೈಸ್ತರು ಚರ್ಚ್ ಎಂದು ಕರೆದರು. ಇವು ಮಾನವನ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತ ಶಿಕ್ಷಣ ಕೇಂದ್ರಗಳಾಗಿ, ನ್ಯಾಯಾಲಯಗಳಾಗಿ, ಹಣಕಾಸಿನ ಭಂಡಾರಗಳನ್ನು ಹೊಂದಿ ಶ್ರೀಮಂತ ಸ್ಥಾನಕ್ಕೇರಿದವು. ಅವುಗಳ ಆಶ್ರಯದಲ್ಲಿ ಸಂಗೀತಕೂಟಗಳೂ, ನಾಟ್ಯ ಸಂಘಗಳೂ ವಿಜಯಗೊಂಡು ಕಲಾಸೃಷ್ಟಿಗೆ ನಾಂದಿಯಾಯಿತು.

ಬಳ್ಳಾರಿ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಚೋಳರು, ಕಲಚೂರ್ಯರು, ಹೊಯ್ಸಳರು, ನೊಳಂಬರು, ವಿಜಯನಗರದ ಅರಸರು ಮತ್ತು ಪಾಳೆಯಗಾರರು ಕಲೆ ಮತ್ತು ವಾಸ್ತುಶಿಲ್ಪಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಇವರ ಕಾಲದಲ್ಲಿ ಅನೇಕ ಅರಮನೆಗಳು, ದೇವಾಲಯಗಳು, ಗೋಪುರಗಳು, ಸಾರ್ವಜನಿಕ ಕಟ್ಟಡಗಳು, ಕಲ್ಯಾಣ ಮಂಟಪಗಳು, ಕೋಟೆ-ಕೊತ್ತಲಗಳು, ಹೊಸ ನಗರಗಳು, ಕೆರೆ-ಕಟ್ಟೆ, ಕಾಲುವೆಗಳು ನಿರ್ಮಾಣವಾದವು. ಈ ಸ್ಮಾರಕಗಳು ಕಾಲಕ್ರಮೇಣ ಜೀರ್ಣೋದ್ಧಾರವಿಲ್ಲದೆ ಅನೇಕ ದೇವಾಲಯಗಳು ಅವಸಾನದ ಅಂಚಿನ ಕಡೆಗೆ ಸಾಗಿದವು. ಇದಕ್ಕೆ ಕಾರಣ ವಿಜಯನಗರ ಸಾಮ್ರಾಜ್ಯದ ಪತನದ ನಂತರ ದೇವಾಲಯಗಳ ನಿರ್ಮಾಣ ಕಾರ್ಯ ಹೆಚ್ಚಾಗಿ ನಡೆದಿರಲಿಲ್ಲ. 'ಆಗ ದಂಗೆ, ನಾಶ, ಪುಂಡರ ಹಾವಳಿಗಳಿಂದ ತನ್ನ ಸಂಸ್ಥಾನಗಳಿಗೆ ಭದ್ರತೆ ನೆಮ್ಮದಿಗಳಿರಲಿಲ್ಲ. ಅಂತಹ ಸನ್ನಿವೇಶದಲ್ಲಿ ಕಲಾವೃದ್ಧಿಗೆ ಅವಕಾಶ ದೊರೆಯುವಂತಿರಲಿಲ್ಲ'.[೩] ಚಿಕ್ಕಪುಟ್ಟ ಪಾಳೆಯಗಾರರು ತಮ್ಮ ಗತವೈಭವವನ್ನು ಪುನಃ ಊರ್ಜಿತಕ್ಕೆ ತರಲು ಹವಣಿಸುತ್ತಿದ್ದ ಸಮಯದಲ್ಲಿ ಹೈದರ್ ಮತ್ತು ಟಿಪ್ಪುವಿನ ಪ್ರಭಾವ ಹಾಗೂ ಈಸ್ಟ್ ಇಂಡಿಯಾ ಕಂಪನಿಯ ರೀತಿ-ನೀತಿಗಳಿಗೆ ಒಳಗಾಗಿ ಸಂಪೂರ್ಣ ಅಧಿಕಾರ ಕಳೆದುಕೊಂಡರು. ನಂತರ ಭಾರತಕ್ಕೆ ಬಂದ ವಿದೇಶಿಯರು ಇಲ್ಲಿನ ವಾಸ್ತುಶಿಲ್ಪಗಳ ಶೈಲಿಗೆ ಆಕರ್ಷಿತರಾದರು. ನಂತರ ಕ್ಷೇತ್ರಕಾರ್ಯದಲ್ಲಿ ಐತಿಹಾಸಿಕ ನೆಲೆಗಳನ್ನು ಪತ್ತೆಹಚ್ಚಿ, ಆ ಮೂಲಕ ತಮ್ಮ ಅನುಭವಗಳನ್ನು ವರದಿ ಮಾಡಿರುವುದು ಗಮನಾರ್ಹ.

'ಕ್ರಿ.ಶ. ೧೮೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಹೈದರಾಬಾದ್ ನಿಜಾಮನೊಡನೆ ಒಪ್ಪಂದದ ಮೂಲಕ ಪಡೆದುಕೊಂಡಿದ್ದ ಪ್ರದೇಶವು ಕೃಷ್ಣ ಮತ್ತು ತುಂಗಭದ್ರಾ ನದಿಗಳ ದಕ್ಷಿಣದ ಎಲ್ಲಾ ಪ್ರದೇಶಗಳನ್ನು ಒಳಗೊಂಡಿತು'.[೪] ಈ ಪರಿಸರವು ಸಂಪದ್ಭರಿತವಾಗಿದ್ದರಿಂದ ಇಲ್ಲಿ ಚಿನ್ನ ಮತ್ತು ಬೆಳ್ಳಿಯನ್ನು ಬಿಟ್ಟು ಉಳಿದೆಲ್ಲಾ ಖನಿಜ ಸಂಪನ್ಮೂಲಗಳ ಹೇರಳವಾಗಿ ದೊರೆಯುತ್ತಿತ್ತು. ಇದನ್ನು ಗಮನಿಸಿದ ಬ್ರಿಟಿಷರು ನಿಜಾಮನೊಂದಿಗೆ ಸಹಾಯಕ ಸೈನ್ಯ ಪದ್ಧತಿ ಒಪ್ಪಂದವನ್ನು ಮಾಡಿಕೊಂಡಿದ್ದರು. ಈ ಒಪ್ಪಂದದ ಪ್ರಕಾರ ಸೈನ್ಯದ ವೆಚ್ಚಕ್ಕಾಗಿ ನಗದು ಹಣದ ಬದಲಿಗೆ ನಿಜಾಮನಿಂದ ಬ್ರಿಟಿಷರು ಆತನ ಪ್ರಾಂತದಲ್ಲಿದ್ದ 'ಬಳ್ಳಾರಿ, ಅನಂತಪುರ, ಕರ್ನೂಲು ಮತ್ತು ಕಡಪ ಜಿಲ್ಲೆಗಳನ್ನು'[೫] ಆಕ್ರಮಿಸಿಕೊಂಡರು. ಹೈದರಾಬಾದ್ ನಿಜಾಮನಿಂದ ಬ್ರಿಟಿಷರಿಗೆ ಪ್ರಾಪ್ತವಾದ ಜಿಲ್ಲೆಗಳನ್ನು 'ಸೀಡೆಡ್ ಡಿಸ್ಟ್ರಿಕ್ಸ್ ಎಂದು ಕರೆಯಲಾಗಿದೆ. ಈ ಜಿಲ್ಲೆಗಳು

ಮದ್ರಾಸ್ ಪ್ರಾಂತಕ್ಕೆ ಒಳಪಟ್ಟು, ಬ್ರಿಟಿಷರ ನೇರ ಆಳ್ವಿಕೆಗೆ ಒಳಗಾದವು. ಆಗ ಮದ್ರಾಸ್ ಪ್ರಾಂತದಲ್ಲಿಯೇ ದೊಡ್ಡ ಜಿಲ್ಲೆಯಾಗಿತ್ತು. ಸರ್. ಥಾಮಸ್ ಮನ್ರೋ ಬಳ್ಳಾರಿ ಜಿಲ್ಲೆಯ ಪ್ರಥಮ ಹಾಗೂ ಅತ್ಯಂತ ಪ್ರಸಿದ್ಧ ಕಲೆಕ್ಟರನಾಗಿದ್ದ. ಪ್ರಥಮ ಸೇನಾ ಮುಖ್ಯಸ್ಥನಾಗಿ ಡುಗ್ಲಡ್ ಕಾಂಪ್ಬೆಲ್ ಕಾರ್ಯನಿರ್ವಹಿಸಿದರು. ಹೀಗೆ ೧೮೦೦ರಿಂದ ೧೯೫೩ರವರೆಗೆ ಒಟ್ಟು ೧೫೩ ವರ್ಷಗಳ ಕಾಲ ೧೧೫ ಕಲೆಕ್ಟರ್‌ಗಳು ಆಳ್ವಿಕೆ ಮಾಡಿದರು. ಈ ಕಾಲಾವಧಿಯಲ್ಲಿ ಪಾಶ್ಚಾತ್ಯರ ಸಂಪರ್ಕ ಹಾಗೂ ಆಡಳಿತದಿಂದ ಭಾರತೀಯ ಸಮಾಜದಲ್ಲಿ ಕಂಡುಬಂದ ಬದಲಾವಣೆಗಳು ಹಾಗೂ ಬೌದ್ಧಿಕ ಚಟುವಟಿಕೆಗಳಲ್ಲಿ ಉಂಟಾದ ಪರಿವರ್ತನೆಗಳನ್ನು ನವೋದಯ ಅಥವಾ ವಸಾಹತುಕಾಲೀನ ಎಂದು ಕರೆಯಲಾಗುತ್ತಿದೆ.

ವಸಾಹತುಶಾಹಿ ಎಂದರೆ ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದಲ್ಲಿ ತನ್ನ ಅಗತ್ಯ ಬೇಡಿಕೆಗಳ ಈಡೇರಿಕೆಗಾಗಿ ನೆಲಸು ನಾಡುಗಳನ್ನು ಸ್ಥಾಪಿಸಿಕೊಂಡು ಅಲ್ಲೇ ನೆಲೆ ನಿಲ್ಲುವಿಕೆಯನ್ನು ವಸಾಹತುಶಾಹಿ ಎಂದು ಕರೆಯಲಾಗಿದೆ. ವ್ಯಾಪಾರಿ ಶಕ್ತಿಯೊಂದು ರಾಜಕೀಯ ಶಕ್ತಿಯಾಗಿ ಬೆಳೆಯುವ ಹಾಗೂ ಆ ಮೂಲಕ ಸಾಮ್ರಾಜ್ಯವೊಂದನ್ನು ಕಟ್ಟುವ ಪ್ರಕ್ರಿಯೆ ಭಾರತದಲ್ಲಿ ಹೇಗೆ ಸಾಧ್ಯವಾಯಿತು ಎನ್ನುವ ಪ್ರಶ್ನೆಗೆ ಅಷ್ಟು ಸುಲಭವಾಗಿ ಉತ್ತರಿಸಲು ಸಾಧ್ಯವಾಗುವುದಿಲ್ಲ. ಭಾರತದಲ್ಲಿ ಬ್ರಿಟಿಷರು ವ್ಯಾಪಾರದ ವಿಸ್ತರಣೆಯ ಮೂಲಕ ಸಾಮ್ರಾಜ್ಯದ ವಿಸ್ತರಣೆಯನ್ನು ಮಾಡುವ ಸಂದರ್ಭದಲ್ಲಿ ಬ್ರಿಟಿಷರು ಭಾರತಾಂಗ್ಲ ಶೈಲಿಯಲ್ಲಿ ತಮ್ಮ ವ್ಯಾಪಾರ ಮತ್ತು ಆಡಳಿತ ಅನುಕೂಲಕ್ಕಾಗಿ ಹಲವು ಮಾದರಿಯ ಕಟ್ಟಡಗಳನ್ನು ಪ್ರಮುಖ ನಗರ ಮತ್ತು ಪಟ್ಟಣಗಳ ಆಯಾಕಟ್ಟಿನ ಪ್ರದೇಶಗಳಲ್ಲಿ ನಿರ್ಮಿಸಿಕೊಂಡರು. ಆದರೆ ಈ ಐರೋಪ್ಯ ವಾಸ್ತುಶಿಲ್ಪದ ಮಾದರಿಯು ಪ್ರಾರಂಭವಾದುದು ೧೮೫೭ರ ಪ್ರಥಮ ಸ್ವಾತಂತ್ರ್ಯ ಸಮರದ ನಂತರ ಅವರ ಆಳ್ವಿಕೆಯು ಭದ್ರವಾಗಿ ನೆಲೆಯೂರಿದ ಮೇಲೆಯೇ ಎನ್ನಬಹುದು. ಇದಕ್ಕೂ ಪೂರ್ವದಲ್ಲಿ ಅವರ ವಾಸ್ತುಶಿಲ್ಪದ ಪ್ರಭಾವ ಇರಲಿಲ್ಲವೆ? ಇತ್ತು. ಅದು ಮೊದಲು ವ್ಯಾಪಾರ ಕೋಠಿಗಳನ್ನು, ಕೈಗಾರಿಕೆಗಳ ಸ್ಥಾಪನೆ ಹಾಗೂ ಧಾರ್ಮಿಕ ವಾಸ್ತುಶಿಲ್ಪ ಪ್ರಭಾವ ಬೀರಿತು. ಇದಕ್ಕೆ ಕಾರಣ ಯುರೋಪಿಯನ್ನರಾದ ಪೋರ್ಚುಗೀಸರು, ಡಚ್ಚರು, ಇಂಗ್ಲಿಷರು ಮತ್ತು ಫ್ರೆಂಚರು ಇವರು ಭಾರತಕ್ಕೆ ಬಂದದ್ದು ವ್ಯಾಪಾರಿಗಳಾಗಿ. ಹಾಗಾಗಿ ಅವರು ಮೊದಲು ಕೈಗಾರಿಕಾ ಕಾರ್ಖಾನೆಗಳನ್ನು ಸ್ಥಾಪಿಸಿ, ಇಲ್ಲಿ ಸಿದ್ಧಪಡಿಸಿದ ವಸ್ತುಗಳಿಗೆ ವ್ಯಾಪಾರ ಮಾರುಕಟ್ಟೆಗಳಿಗಾಗಿ ಪೈಪೋಟಿಯಲ್ಲಿ ನಿರತರಾಗಿದ್ದರು. ಇದನ್ನು ಗಮನಿಸಿದ ಕ್ರೈಸ್ತಮಿಷನರಿಗಳು ಗೋವಾವನ್ನು ಪ್ರಮುಖ ಧಾರ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡು ಆ ಮೂಲಕ ಭಾರತದಾದ್ಯಂತ ಕ್ರೈಸ್ತ ಧರ್ಮವನ್ನು ಪ್ರಸಾರ ಮಾಡಿದರು. ಬಳ್ಳಾರಿ ಜಿಲ್ಲೆಗೆ ಮೊಟ್ಟಮೊದಲು ಪ್ರಾಟೆಸ್ಟೆಂಟ್ ಕ್ರೈಸ್ತ ಮಿಷನರಿಯಾಗಿ ಪಾದಾರ್ಪಣೆ ಮಾಡಿದ ಜಾನ್‌ಹ್ಯಾಂಡ್ಸ್ ಅವರು ಜಿಲ್ಲೆಯಲ್ಲಿ ಧರ್ಮಪ್ರಸಾರ ಮಾಡಿದರು. ಬಳ್ಳಾರಿ ಪರಿಸರವು ದ್ವಿಭಾಷಿಕ ನೆಲೆಯಾಗಿದ್ದ ಕಾರಣಕ್ಕಾಗಿ ಮಿಷನರಿಗಳು ಸ್ಥಳೀಯರಿಗಾಗಿ ಕನ್ನಡ ಮತ್ತು ತೆಲುಗು ಚರ್ಚ್‌ಗಳನ್ನು ತಮಿಳುನಾಡಿನಿಂದ ಬಂದಿದ್ದ ತಮಿಳು ಭಾಷಿಕರಿಗಾಗಿ ತಮಿಳು ಚರ್ಚ್‌ನ್ನು

ಇಂಗ್ಲೆಂಡಿನಿಂದ ಬಂದಿದ್ದ ಇಂಗ್ಲಿಷ್ ಭಾಷಿಕರಿಗಾಗಿ ಇಂಗ್ಲಿಷ್ ಚರ್ಚ್‌ನ್ನು ತಮ್ಮ ಮಾತೃಭೂಮಿಯಲ್ಲಿ ಪ್ರಚಲಿತವಾಗಿದ್ದ ಗಾಥಿಕ್ ಶೈಲಿಯ ಕಟ್ಟಡಗಳ ಮಾದರಿಯನ್ನುನುಸರಿಸಿ ಕಟ್ಟಿದರು.

ಕ್ರಿ.ಶ. ೧೮೫೮ರಲ್ಲಿ ಬ್ರಿಟನ್ನಿನ ಮಹಾರಾಣಿ ವಿಕ್ಟೋರಿಯಾ ಶೋಷಣೆಯ ಆಗರವಾಗಿದ್ದ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ರದ್ದುಗೊಳಿಸಿ, ಭಾರತದ ಆಡಳಿತವನ್ನು ಇಂಗ್ಲೆಂಡಿನ ಚಕ್ರವರ್ತಿಗೆ ಹಸ್ತಾಂತರಿಸಲಾಯಿತು. ಇದರಿಂದ ಬ್ರಿಟಿಷ್ ಆಳ್ವಿಕೆಯು ಭದ್ರವಾಗಿ ನೆಲೆಯೂರಿದ ನಂತರ ಭಾರತದ ವಸಾಹತು ನೆಲೆಗಳಲ್ಲಿ ತಮ್ಮ ಪ್ರಭಾವವನ್ನು ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಅಚ್ಚಳಿಯದಂತೆ ಉಳಿಸಿ ಹೋಗಿದ್ದಾರೆ. ೧೯ನೆಯ ಶತಮಾನದಲ್ಲಿ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿಯೂ ಮಹತ್ವದ ಈ ಪ್ರಭಾವದ ಫಲವಾಗಿ ಯುರೋಪಿನ ಪುರಾತನ ಶೈಲಿಗಳಾದ ಗಾಥಿಕ್, ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳು ದೇಶಿ ಶೈಲಿಯನ್ನು ಕಲಬೆರಕೆ ಮಾಡಿದ ವಾಸ್ತುಶೈಲಿಯು ಬಳಕೆಗೆ ಬರತೊಡಗಿತು. ಮೊದ ಮೊದಲು ಎತ್ತ ಕಡೆ ನೋಡಿದರು. ಪಾಶ್ಚಾತ್ಯರ ಕಲಾ ಶೈಲಿಗಳಲ್ಲಿ ಆಡಳಿತಾತ್ಮಕ ಕಟ್ಟಡಗಳು, ರಕ್ಷಣಾ ಕಟ್ಟಡಗಳು, ಧಾರ್ಮಿಕ ಕಟ್ಟಡಗಳು, ಶಿಕ್ಷಣ ಸಂಸ್ಥೆಗಳು ಮತ್ತು ಸಾರ್ವಜನಿಕ ಕಟ್ಟಡಗಳು ನಿರ್ಮಿತವಾಗತೊಡಗಿದವು. ಇದಕ್ಕೆ ಮುಖ್ಯ ಕಾರಣ ಕಟ್ಟಡಗಳ ವಿನ್ಯಾಸಕಾರರು ಐರೋಪ್ಯರಾಗಿದ್ದುದು, ಇವರು ನಕ್ಷೆ ಮತ್ತು ಕಟ್ಟಡಗಳ ವಿನ್ಯಾಸವನ್ನು ಯುರೋಪಿಯನ್ ಶೈಲಿಯಲ್ಲಿ ತಯಾರಿಸುತ್ತಿದ್ದರು. 'ವಸಾಹತುಶಾಹಿ ಪ್ರಭುತ್ವದ ವಿಸ್ತರಣೆಯಲ್ಲಿ ಕಟ್ಟಡಗಳನ್ನು ಯುರೋಪಿಯನ್ ಶೈಲಿಗಳಲ್ಲಿ ವಿನ್ಯಾಸಗೊಳಿಸಿ, ನಿರ್ಮಿಸಿವುದು ವಸಾಹತುಶಾಹಿಯ ವಿಸ್ತರಣೆಯ ಸಂಕೇತವಾಗಿತ್ತು'.[೬] ಕಾಲ ನಂತರದಲ್ಲಿ ಪಾಶ್ಚಾತ್ಯರ ಅಂಧಾನುಕರಣ ಕಡಿಮೆಯಾಗುತ್ತಾ ಬಂದು, ದೇಶೀಯ ಕಲಾಶೈಲಿಯಲ್ಲಿ ಕಟ್ಟಬೇಕೆಂಬ ಆಸೆ ಮೂಡತೊಡಗಿದ್ದರಿಂದ ಕಲಾಶೈಲಿ ಮಾರ್ಪಾಡುಗೊಂಡಿತು. ಈ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಕಟ್ಟಡಗಳು 'ಪೂರ್ಣವಾಗಿ ಹಿಂದೂ ಶೈಲಿಯಲ್ಲಾಗಲಿ, ಪೂರ್ಣವಾಗಿ ಮಹಮ್ಮದೀಯ ಶೈಲಿಯಲ್ಲಾಗಲಿ ಅಥವಾ ಯುರೋಪಿಯನ್ ಶೈಲಿಯಲ್ಲಾಗಲಿ ಕಟ್ಟುವುದು ಕಾಲ ವಿರುದ್ಧ ದೇಶ ವಿರುದ್ಧಗಳೆಂಬ ದೋಷಕ್ಕೆ ಕಾರಣವಾಗುವುದೆಂಬ ಕಾರಣದಿಂದ ಇವೆಲ್ಲವನ್ನು ಸಮನ್ವಯಿಸಿ ಆಧುನಿಕ ಶೈಲಿ'[೭] ಎಂದು ಕರೆಯಲಾಗಿದೆ.

೧೮ ಮತ್ತು ೧೯ನೆಯ ಶತಮಾನದಲ್ಲಿದ್ದ ಕಲಾವಿದರು ದೇಶಿ ಪರಿಕಲ್ಪನೆಗಳಿಗೆ ಪಾಶ್ಚಾತ್ಯ ಕಲಾವಿಜ್ಞಾನವನ್ನು ಅಳವಡಿಸಿದ್ದಾರೆ. ಇವರ ವಸ್ತುವಿಷಯವು ಭಾರತೀಯದ್ದಾಗಿದ್ದು, ಅವುಗಳಿಗೆ 'ಜಲವರ್ಣ ಚಿತ್ರಗಳಲ್ಲಿ ನೈಪುಣ್ಯತೆ ಪಡೆದಿದ್ದು, ಜಲವರ್ಣಗಳಿಗೆ ತೈಲವರ್ಣಗಳ ಘನತ್ವ ಮತ್ತು ಸಾಂದ್ರತೆಯನ್ನು ತಿಳಿಯಲು ಇವರು ಯಾವಾಗಲೂ ಜಲವರ್ಣಗಳಿಗೆ ಮೊದಲ ಆದ್ಯತೆ ನೀಡಿದ್ದರು'.[೮] ಐರೋಪ್ಯ ಕಲಾ ತಂತ್ರಗಳ ಪ್ರಭಾವದಿಂದ ಕಲಾಕೃತಿಗಳಲ್ಲಿ ನಾವು ಕಾಣುವ ಕಲಾಭಿವ್ಯಕ್ತಿಯ ಅತ್ಯಂತ ವಿಶಿಷ್ಟವಾದ ಮಾಧ್ಯಮವು ರೂಪುಗೊಂಡಿತು. ಕರ್ನಾಟಕದಲ್ಲಿ

ಮಂಗಳೂರು, ಬೆಳಗಾವಿ, ಧಾರವಾಡ, ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಪಾಶ್ಚಾತ್ಯ ಕಲಾ ಪ್ರಕಾರಗಳು ಹೆಚ್ಚು ಪ್ರಭಾವ ಬೀರಿದೆ. ಆದರೆ ಬಳ್ಳಾರಿ ಜಿಲ್ಲೆಯಲ್ಲಿ ಅಲ್ಪ ಪ್ರಮಾಣದಲ್ಲಿ ಅದು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳವಣಿಗೆಯಾಗಿರುವುದನ್ನು ಗುರುತಿಸಲಾಗಿದೆ.

ಬ್ರಿಟಿಷರು ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ಎರಡು ಬಗೆಯ ಸ್ಥಳವನ್ನು ಆಯ್ಕೆ ಮಾಡಿಕೊಂಡಿರುವುದು ಕಂಡುಬಂದಿದೆ. ಒಂದು ಗಿರಿ-ಬೆಟ್ಟ ಮತ್ತು ಸಮತಟ್ಟಾದ ಸ್ಥಳ. ಈ ಸ್ಥಳಗಳಲ್ಲಿ ನಿರ್ಮಾಣಗೊಂಡ ಕಟ್ಟಡಗಳ ರಚನಾ ವಿನ್ಯಾಸವನ್ನು ಐರೋಪ್ಯ ಎಂಜಿನಿಯರ್ ತಯಾರಿಸಿದರೆ, ಅವರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸಿದ ಕಾರ್ಮಿಕರು ಸ್ಥಳೀಯರಾಗಿದ್ದರು. ಇವರು ಕಟ್ಟಡಗಳಿಗೆ ಬಳಸಿರುವ ಸಾಮಗ್ರಿಗಳನ್ನು ಕುರಿತು ತಲಸ್ಪರ್ಶಿಯವಾಗಿ ಪರಿಚಯ ಮಾಡಿಕೊಡಲು ಪ್ರಸ್ತುತ ಅಧ್ಯಯನದಲ್ಲಿ ಸಾಧ್ಯವಾದಷ್ಟು ನಾನು ಪ್ರಯತ್ನಿಸಿದ್ದೇನೆ.

### ೧.೧. ಅಧ್ಯಯನದ ಉದ್ದೇಶ

ಬಳ್ಳಾರಿ ಜಿಲ್ಲೆಯ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದರೆ ವಿಜಯನಗರ ಸಾಮ್ರಾಜ್ಯದ ತರುವಾಯ ಜಿಲ್ಲೆಯ ಎಲ್ಲಾ ಕ್ಷೇತ್ರಗಳಿಗೆ ಹೊಸ ತಿರುವು ನೀಡಿದ ಇನ್ನೊಂದು ಚಾರಿತ್ರಿಕ ಸಂದರ್ಭ ಬ್ರಿಟಿಷ್ ಕಲೆಕ್ಟರುಗಳ ಆಡಳಿತಾವಧಿ. ಇದನ್ನು ವಸಾಹತುಶಾಹಿ ಅಥವಾ ಬ್ರಿಟಿಷ್ ಕಲೆಕ್ಟರುಗಳ ಆಡಳಿತಾವಧಿಯೆಂದು ಕರೆಯಲಾಗಿದೆ. ಜಿಲ್ಲೆಯಲ್ಲಿ ಕಲೆಕ್ಟರುಗಳ ಆಳ್ವಿಕೆಗೆ ಸಂಬಂಧಿಸಿದಂತೆ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ವ್ಯಾಪಾರ ಮತ್ತು ವಾಣಿಜ್ಯದ ಕುರಿತು ವಿವಿಧ ಮಗ್ಗಲುಗಳಲ್ಲಿ ಅಧ್ಯಯನಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ಆದರೆ, 'ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ' ಎಂಬ ವಿಷಯದ ಕುರಿತು ಈವರೆಗೆ ಪ್ರತ್ಯೇಕ ಅಧ್ಯಯನ ನಡೆದಿಲ್ಲವೆನ್ನುವುದು ಗಮನಾರ್ಹ. ಆದ್ದರಿಂದ ಪ್ರಸ್ತುತ ಶೀರ್ಷಿಕೆಯನ್ನು ಮುಖ್ಯ ವಿಷಯವನ್ನಾಗಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

ದೇಶಿ ಹಾಗೂ ವಿದೇಶಿ ಮುಖಾಮುಖಿಯು ಸ್ಥಳೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಬೀರಿದ ಪರಿಣಾಮಗಳ ಕುರಿತು ವಿಶ್ಲೇಷಣೆ ನಡೆಸುವುದು ಹಾಗೂ ಇಲ್ಲಿನ ಸಂಸ್ಕೃತಿಯು ಯಾವ ಬಗೆಯ ಸ್ಥಿತ್ಯಂತರಗಳಿಗೆ ಒಳಗಾಯಿತು ಎನ್ನುವ ಮಹತ್ವದ ವಿಚಾರವನ್ನು ಚರ್ಚಿಸುವುದು ಈ ಅಧ್ಯಯನದ ಪ್ರಧಾನವಸ್ತು ವಿಚಾರವಾಗಿದೆ.

ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಯುರೋಪಿನ ರಾಷ್ಟ್ರಗಳಲ್ಲಿ ಪ್ರಚಲಿತವಾಗಿದ್ದ ವಾಸ್ತು ಕಲಾಶೈಲಿಗಳಾದ ಗಾಥಿಕ್, ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳ ಪ್ರಭಾವ ಹಾಗೂ ಇಲ್ಲಿಗೆ ಬಂದಿದ್ದ ಐರೋಪ್ಯ ವಿನ್ಯಾಸಕಾರರು ಕಟ್ಟಡಗಳ ವಿನ್ಯಾಸಕ್ಕೆ ಕೆಲವು ವಿದೇಶಿ ಪರಿಕರಗಳ ಜೊತೆಗೆ, ಸ್ಥಳೀಯ ಪರಿಕರಗಳು ಹಾಗೂ ಶ್ರಮಿಕರನ್ನು ಬಳಸಿಕೊಂಡು ಹೇಗೆ ತಮ್ಮ ತಂತ್ರಜ್ಞಾನವನ್ನು ಅಳವಡಿಸಿಕೊಂಡಿದ್ದರು ಎಂಬುವುದರ ಬಗ್ಗೆ ಅಧ್ಯಯನ ಮಾಡಲಾಗಿದೆ.

ಕನ್ನಡ ನಾಡಿಗೆ ಮೊಟ್ಟ ಮೊದಲು ಕ್ರೈಸ್ತ ಪ್ರಾಟೆಸ್ಟೆಂಟ್ ಮಿಷನರಿಯಾಗಿ ಪಾದಾರ್ಪಣೆ ಮಾಡಿದ ರೆವ. ಜಾನ್. ಹ್ಯಾಂಡ್ಸ್‌ನ ಪ್ರಭಾವ ಹಾಗೂ ಯಾವ ಪರಿಕರಗಳಿಲ್ಲದ ಸ್ಥಳದಲ್ಲಿ ಹೇಗೆ ಸ್ಥಳೀಯರನ್ನು ಸಂಘಟಿಸಿ, ಧಾರ್ಮಿಕ ಪ್ರಜ್ಞೆಯನ್ನು ಮೂಡಿಸಿದನು ಎಂಬುವುದರ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ವ್ಯಾಪ್ತಿ ಎಂದರೆ ಚೌಕಟ್ಟು, ಮೇರೆ ಎಂದರ್ಥ. ಯಾವುದೇ ಒಂದು ಅಧ್ಯಯನ ಆಗಿರಬಹುದು. ಅದು ನಿರ್ದಿಷ್ಟವಾದ ವ್ಯಾಪ್ತಿಯನ್ನು ಹೊಂದಿರಬೇಕು. ಆಗ ಮಾತ್ರ ಆ ಪ್ರದೇಶದ ಸಮಗ್ರ ಇತಿಹಾಸವನ್ನು ತಿಳಿದುಕೊಳ್ಳಲು ಸಾಧ್ಯ. ಈ ಹಿನ್ನೆಲೆಯಲ್ಲಿ ಪ್ರಸ್ತುತ "ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ" ಎಂಬ ವಿಷಯವು ಇತಿಹಾಸದ ದೃಷ್ಟಿಯಿಂದ ತುಂಬಾ ವಿಸ್ತೃತವಾದ ವಿಷಯವಾಗಿದೆ. ಈ ವಿಷಯದ ಕುರಿತು ಈಗಾಗಲೇ ಕೆಲವು ಗ್ರಂಥಗಳಲ್ಲಿ ಐತಿಹಾಸಿಕ ದೃಷ್ಟಿಯಿಂದ ಚರ್ಚಿತವಾಗಿರುವ ವಿಷಯದ ಸ್ಥೂಲ ಪರಿಚಯವನ್ನು ತಿಳಿಸುವ ನಿಟ್ಟಿನಲ್ಲಿ ಈ ಅಧ್ಯಯನವು ವಿಭಿನ್ನವಾಗಿರುವುದಲ್ಲದೆ, ವಿಶಿಷ್ಟವೂ ಆಗಿರುವುದರಿಂದ ಅಧ್ಯಯನ ವ್ಯಾಪ್ತಿಯನ್ನು ಕ್ರಿ.ಶ. ೧೮೦೦ ರಿಂದ ೧೯೫೩ರವರೆಗೆ ಸೀಮಿತಗೊಳಿಸಲಾಗಿದೆ.

ಬಳ್ಳಾರಿ ಜಿಲ್ಲೆಯು ಮದ್ರಾಸ್ ಪ್ರಾಂತದಲ್ಲಿಯೇ ದೊಡ್ಡ ಜಿಲ್ಲೆಯಾಗಿತ್ತು. ಬ್ರಿಟಿಷರು ಜಿಲ್ಲಾ ಆಡಳಿತ ಹಿತದೃಷ್ಟಿಯಿಂದ ಇದರ ಆಡಳಿತದ ವಿಭಾಗಗಳನ್ನು ಚಿಕ್ಕ ಚಿಕ್ಕ ಘಟಕಗಳಾಗಿ ವಿಭಾಗಿಸಿದರು. ಈ ಹಿನ್ನೆಲೆಯಲ್ಲಿ ನನ್ನ ಅಧ್ಯಯನದ ವ್ಯಾಪ್ತಿಯನ್ನು ಬಳ್ಳಾರಿ, ಸಿರುಗುಪ್ಪ, ಆದೋನಿ, ಆಲೂರು, ರಾಯದುರ್ಗ, ಕೂಡ್ಲಿಗಿ, ಹೊಸಪೇಟೆ, ಹರಪನಹಳ್ಳಿ ಮತ್ತು ಹೂವಿನಹಡಗಲಿ ಒಟ್ಟು ಒಂಬತ್ತು ತಾಲೂಕುಗಳಲ್ಲಿ ಬ್ರಿಟಿಷರು ಆಳ್ವಿಕೆ ಮಾಡಿ, ಬಿಟ್ಟು ಹೋದ ಅಥವಾ ಕುರುಹಾಗಿ ಉಳಿದಿರುವ ಕಲೋನಿಯಲ್ ಕಟ್ಟಡಗಳ ಶೈಲಿ, ವಿನ್ಯಾಸ, ರಚನೆ, ಅವುಗಳ ಸ್ಥಿತಿಗತಿಯ ಬಗ್ಗೆ ಅಧ್ಯಯನಕ್ಕೊಳಪಡಿಸಲಾಗಿದೆ.

## ೧.೩. ಅಧ್ಯಯನದ ಸಮೀಕ್ಷೆ

"ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ" ಎಂಬ ವಿಷಯದ ಕುರಿತು ಸ್ವತಂತ್ರ್ಯ ಹಾಗೂ ಪ್ರತ್ಯೇಕ ಅಧ್ಯಯನ ಈವರೆಗೂ ಪ್ರಕಟಗೊಂಡಿಲ್ಲವಾದರೂ ಈ ಪ್ರದೇಶಕ್ಕೆ ಸಂಬಂಧಿಸಿದ ಹಲವಾರು ಸಂಗತಿಗಳ ಕುರಿತು ಆಂಶಿಕ ವಿವರಗಳು ಪ್ರಕಟವಾಗಿವೆ. ಅಂಥ ಅಧ್ಯಯನಗಳ ಕುರಿತ ಸ್ಥೂಲ ಪರಿಚಯ ನೀಡುವ ಪ್ರಯತ್ನ ಇದಾಗಿದೆ. ಅಲ್ಲದೇ ಅವರು ಕಟ್ಟಿಕೊಟ್ಟ ಆಲೋಚನೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಮನಃಪೂರ್ವಕವಾಗಿ ಬಳಸಿಕೊಳ್ಳಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ವಸಾಹತುಶಾಹಿ ಆಳ್ವಿಕೆಯ ಕುರಿತು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ವ್ಯಾಪಾರ ಮತ್ತು ವಾಣಿಜ್ಯದ ಬಗೆಗೆ ಅಲ್ಪಪ್ರಮಾಣದಲ್ಲಿ ಪ್ರಕಟಗೊಂಡಿವೆ. ಆದರೆ, "ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ : ಬಳ್ಳಾರಿ ಜಿಲ್ಲೆ" ಎಂಬ ವಿಷಯದ ಕುರಿತು ಸಮಗ್ರ ಅಧ್ಯಯನ ಪ್ರಕಟಗೊಂಡಿಲ್ಲದೇ ಇರುವುದು ಗಮನಾರ್ಹ. ಅಂಥ ಬಿಟ್ಟ ಜಾಗವನ್ನು ತಕ್ಕಮಟ್ಟಿಗೆ ತುಂಬುವ ಕೆಲಸ ಈ ಅಧ್ಯಯನದ್ದು.

**ಇಂಗ್ಲಿಷ್ ಕೃತಿಗಳು**

ಸಿ.ಡಿ. ಮೆಕ್ಲೀನ್ ಅವರ ಸಂಪಾದಿತ 'ಮ್ಯಾನುಯೆಲ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ' ಎಂಬ ಮೂರು ಸಂಪುಟಗಳಿವೆ. ಸಂಪುಟ-೧ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಕಲೆಕ್ಟರುಗಳ ಆಳ್ವಿಕೆಯ ವಿವರ, ಕೃಷಿ, ಕಂದಾಯ, ಪೊಲೀಸ್, ಕ್ಷಾಮ ಮತ್ತು ಬರಗಾಲದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಸಂಪುಟ-೨ರಲ್ಲಿ ಕಲೆಕ್ಟರುಗಳ ರಾಜಕೀಯ ಇತಿಹಾಸದ ಬಗ್ಗೆ ದಾಖಲಿಸಿದ್ದಾರೆ. ಸಂಪುಟ-೩ರಲ್ಲಿ ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿದ್ದ ಬಳ್ಳಾರಿ ಜಿಲ್ಲಾ ಆಡಳಿತದ ವಿಭಾಗಗಳ ಕುರಿತು ಪ್ರಸ್ತಾಪಿಸಿದ್ದಾರೆ. ಲಾರ್ಡ್ ಪೆಂಟ್‌ಲ್ಯಾಂಡ್ ಅವರ 'ಆರನೆಯ ಪ್ರವಾಸ : ಅನಂತಪುರ ಮತ್ತು ಬಳ್ಳಾರಿ' ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿದ್ದ ಮುನಿಸಿಪಾಲಿಟಿ ಶಾಲೆಗಳು, ಲಂಡನ್ ಮಿಷನರಿಗಳು ಸ್ಥಾಪಿಸಿದ್ದ ಶಾಲೆಗಳು, ಮಿಲಿಟರಿ ಅಧಿಕಾರಿಗಳ ಮಕ್ಕಳಿಗಾಗಿ ಇದ್ದ ಶಾಲೆಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ರವರೆಂಡ್ ಎನ್. ಸಭಾಪತಿ ಅವರ 'ಹೋಲಿ ಟ್ರೀನಿಟಿ ಚರ್ಚ್‌ನ ಸಂಕ್ಷಿಪ್ತ ಇತಿಹಾಸ' ಎಂಬ ಕೃತಿಯಲ್ಲಿ ವಿದೇಶದಿಂದ ಬಂದ ಕ್ರೈಸ್ತ ಅನುಯಾಯಿ ಆಡಳಿತ ಅಧಿಕಾರಿಗಳಿಗೆ, ಮಿಲಿಟರಿ ಸೈನಿಕರಿಗೆ ಹಾಗೂ ಧರ್ಮ ಪ್ರಸಾರಕರಾಗಿ ಬಂದವರಿಗೆ ಆಂಗ್ಲ ಮಾಧ್ಯಮದಲ್ಲಿ ಪ್ರಾರ್ಥನೆ ಮಾಡುವುದಕ್ಕಾಗಿ ೧೮೧೧ರಲ್ಲಿ ಹೋಲಿ ಟ್ರೀನಿಟಿ ಚರ್ಚ್ ಸ್ಥಾಪನೆಯಾದ ಬಗೆಗೆ ಸಂಕ್ಷಿಪ್ತವಾಗಿ ವಿಶ್ಲೇಷಿಸಿದ್ದಾರೆ.

ಜಾನ್ ಕೆಲ್‌ಶಲ್ ಅವರ 'ಮ್ಯಾನುಯೆಲ್ ಆಫ್ ದಿ ಬಳ್ಳಾರಿ ಡಿಸ್ಟ್ರಿಕ್ಟ್' ಎಂಬ ಗ್ರಂಥದಲ್ಲಿ ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿದ್ದ ಬಳ್ಳಾರಿ ಜಿಲ್ಲೆಯ ಎಂಟು ತಾಲೂಕುಗಳ ಚಾರಿತ್ರಿಕ ಹಿನ್ನೆಲೆ, ಕಂದಾಯ, ಕೃಷಿ, ಶಿಕ್ಷಣ, ನ್ಯಾಯಾಲಯ, ಜೈಲ್, ವ್ಯಾಪಾರ ಮತ್ತು ವಾಣಿಜ್ಯದ ಬಗ್ಗೆ ದಾಖಲಿಸಿದ್ದಾರೆ. ಡಬ್ಲ್ಯೂ ಫ್ರಾನ್ಸಿಸ್ ಅವರ 'ಬಳ್ಳಾರಿ ಡಿಸ್ಟ್ರಿಕ್ಟ್ ಗೆಝೆಟಿಯರ್'ನಲ್ಲಿ ಕಲೆಕ್ಟರುಗಳ ಆಳ್ವಿಕೆಯ ಇತಿಹಾಸ, ಕೃಷಿ, ಕಂದಾಯ, ಸಾರ್ವಜನಿಕ ಆಸ್ಪತ್ರೆ, ಶಿಕ್ಷಣ, ಕ್ಯಾಥೋಲಿಕ್ ಮತ್ತು ಪ್ರಾಟೆಸ್ಟೆಂಟ್ ಮಿಷನರಿಗಳ ಪ್ರಭಾವದ ಕುರಿತು ದಾಖಲಿಸಿದ್ದಾರೆ.

**ತೆಲುಗು ಕೃತಿಗಳು**

ಪಿ.ಎಸ್. ಶಿವಕುಮಾರ ಸ್ವಾಮಿ ರಾಜಾ ಅವರ 'ಐದೆಲ್ಲ ಅಭ್ಯುದಯಮು ಬಳ್ಳಾರಿ ಜಿಲ್ಲಾ' (೧೯೪೭ ರಿಂದ ೧೯೫೧) ಕೃತಿಯಲ್ಲಿ ಭಾರತಕ್ಕೆ ೧೯೪೭ರಲ್ಲಿ ಸ್ವಾತಂತ್ರ್ಯ ಬಂದ ನಂತರ ಬಳ್ಳಾರಿ ಜಿಲ್ಲೆಯ ವ್ಯಾಪ್ತಿ, ವ್ಯವಸಾಯ, ರಸ್ತೆ-ಸಾರಿಗೆ ವ್ಯವಸ್ಥೆ, ಶಿಕ್ಷಣ ಪದ್ಧತಿ, ಶಾಂತಿ-

ಸುವ್ಯವಸ್ಥೆಯ ಬಗೆಗೆ ವಿಶ್ಲೇಷಿಸಿದ್ದಾರೆ. ಜಯಸುಮನ್ ಅವರ 'ರಾಯದುರ್ಗಂ ಮಂಡಲಂಚರಿತ್ರ-ಸಂಸ್ಕೃತಿ' ಕೃತಿಯಲ್ಲಿ ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಕೃಷಿ, ಕೈಗಾರಿಕೆ, ಶಿಕ್ಷಣ, ಆಸ್ಪತ್ರೆ, ಪೊಲೀಸ್, ನ್ಯಾಯಾಂಗ, ರಸ್ತೆ-ಸಾರಿಗೆ ವ್ಯವಸ್ಥೆಯ ಕುರಿತು ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದ್ದಾರೆ. ಆರ್.ಎಸ್. ಹುಲಿಕುಂಟೆಮೂರ್ತಿ ಅವರ 'ಚರಿತ್ರ ತೆಲುಗಲೊ ರಾಯದುರ್ಗಮು' ಕೃತಿಯಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಥಮ ಕಲೆಕ್ಟರ್ ಆಗಿದ್ದ ಥಾಮಸ್ ಮನ್ರೋ ರಾಯದುರ್ಗ ಪಾಳೆಯಗಾರರ ಅಧಿಕಾರವನ್ನು ಹೇಗೆ ಮೊಟಕುಗೊಳಿಸಿದನು ಹಾಗೂ ಬಳ್ಳಾರಿ ಜಿಲ್ಲಾ ವ್ಯಾಪ್ತಿಯಲ್ಲಿದ್ದ ಆದೋನಿ, ಆಲೂರು ಮತ್ತು ರಾಯದುರ್ಗ ತಾಲೂಕುಗಳು ಆಂಧ್ರಪ್ರದೇಶಕ್ಕೆ ವಿಲೀನವಾದ ಬಗೆಗೆ ಚರ್ಚಿಸಿದ್ದಾರೆ. ಅಮಳ್ಳದಿನ್ನಿ ಗೋಪಿನಾಥ ಅವರ 'ಅನಂತಪುರಂ ಜಿಲ್ಲಾ ವಿಜ್ಞಾನ, ವಿಚಾರ ದರ್ಶಿನಿ' ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಪ್ರಥಮ ಕಲೆಕ್ಟರ್ ಆಗಿ ಕಾರ್ಯನಿರ್ವಹಿಸಿದ ಥಾಮಸ್ ಮನ್ರೋ ಅವರ ನೆನಪಿನ ಛತ್ರ ಹಾಗೂ ಮನ್ರೋ ಸಮಾಧಿ ಗುತ್ತಿಗೆಯಲ್ಲಿ ಇರುವುದರ ಬಗೆಗೆ ಹಾಗೂ ಅವರ ಜೊತೆಗೆ ಕಾರ್ಯನಿರ್ವಹಿಸಿದ ಇತರ ಬ್ರಿಟಿಷ್ ಅಧಿಕಾರಿಗಳ ಸಮಾಧಿಗಳು ಗುತ್ತಿಯಲ್ಲಿ ಇವೆ ಎಂದು ಪ್ರಸ್ತಾಪಿಸಿದ್ದಾರೆ.

**ಕನ್ನಡ ಕೃತಿಗಳು**

ಟಿ.ಆರ್. ಚಂದ್ರಶೇಖರ ಅವರ 'ಬಳ್ಳಾರಿ ಜಿಲ್ಲೆಯ ನಿಸರ್ಗ ಸಂಪತ್ತು' ಎಂಬ ಕೃತಿಯಲ್ಲಿ ಬ್ರಿಟಿಷರ ಆಳ್ವಿಕೆಯ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯು ಮದರಾಸ್ ಪ್ರಾಂತದ ಒಂದು ದೊಡ್ಡ ಜಿಲ್ಲೆಯಾಗಿತ್ತು. ಅಂದು ಈಗಿರುವ ತಾಲೂಕುಗಳಲ್ಲದೆ, ಬಳ್ಳಾರಿ ಜಿಲ್ಲೆಯು ಆದೋನಿ, ಆಲೂರು ಮತ್ತು ರಾಯದುರ್ಗ ತಾಲೂಕುಗಳನ್ನು ಹೊಂದಿತ್ತು. ಜಿಲ್ಲೆಯ ಆಡಳಿತ ಉಪವಿಭಾಗಗಳು, ತಾಲೂಕುಗಳು, ಮಂಡಲಗಳು ಹಾಗೂ ಹೋಬಳಿಗಳ ವಿವರವನ್ನು ನೀಡಿದ್ದಾರೆ. ಆರ್.ಎಲ್. ಪೊಲೀಸ್ ಪಾಟೀಲ ಅವರ 'ನೀರಾವರಿ ಮತ್ತು ರೈತರ ಅಭಿವೃದ್ಧಿ' ಎಂಬ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಜೀವನಾಡಿಯೆನಿಸಿದ ತುಂಗಭದ್ರ ನದಿಯ ನಿರ್ಮಾಣ, ನೀರಿನಮಟ್ಟ, ವಿಸ್ತೀರ್ಣದ ಕುರಿತು ವಿಸ್ತೃತವಾದ ವಿವರಗಳು ಇದರಲ್ಲಿ ಪ್ರಕಟವಾಗಿರುವುದನ್ನು ಗಮನಿಸಲಾಗಿದೆ. ಬಿ. ಶೇಷಾದ್ರಿ, ಟಿ.ಆರ್. ಚಂದ್ರಶೇಖರ ಅವರ ಸಂಪಾದಿತ 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ' ಎಂಬ ಕೃತಿಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ನೆಲೆಗಳು, ಅದರ ಸ್ವರೂಪ ಹಾಗೂ ಅಲ್ಲೀಪುರ ಜೈಲ್‌ನ ಕುರಿತು ವಿಸ್ತೃತವಾದ ವಿವರವನ್ನು ನೀಡಿದ್ದಾರೆ. ರೆವ. ಎನ್. ಸಭಾಪತಿ ಅವರ 'ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನಿನ ಪ್ರಥಮ ಕೊಡುಗೆ' ಎಂಬ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಥಮ ಪ್ರಾಟೆಸ್ಟೆಂಟ್ ಮಿಷನರಿಯಾಗಿ ಆಗಮಿಸಿದ ಜಾನ್ ಹ್ಯಾಂಡ್ಸ್, ವಿಲಿಯಂ ರೀವ್, ಜಾನ್ ರೀಡ್, ವಾರ್ಡ್ಲಾ ಇತ್ಯಾದಿ ಮಿಷನರಿಗಳು ಹೀಬ್ರು, ಗ್ರೀಕ್ ಮೂಲ ಭಾಷೆಯಲ್ಲಿದ್ದ ಬೈಬಲ್‌ನ್ನು ಕನ್ನಡಕ್ಕೆ ಭಾಷಾಂತರ ಮಾಡಿ, ಪವಿತ್ರ ಸತ್ಯವೇದವನ್ನು ಶುದ್ಧ ಗದ್ಯಶೈಲಿಯಲ್ಲಿ ಮುದ್ರಿಸಿ, ಕ್ರಿಸ್ತನ ಶುಭ ಸಂದೇಶವನ್ನು ಸರ್ವಜನರಿಗೂ ಓದುವಂತೆ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ ಎಂಬ ವಿವರದ ಕುರಿತು

ವಿಶ್ಲೇಷಿಸಿದ್ದಾರೆ. ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ ಅವರ ಸಂಪಾದಿತ 'ಅವಲೋಕನ' ಎಂಬ ಗ್ರಂಥದಲ್ಲಿ ಎಚ್.ಆರ್. ರಘುನಾಥಭಟ್ ಅವರ 'ಐರೋಪ್ಯ ವಾಸ್ತುಶಿಲ್ಪ' ಎಂಬ ಲೇಖನದಲ್ಲಿ ಐರೋಪ್ಯ ಶೈಲಿಯ ಚರ್ಚ್ ವಾಸ್ತುಶಿಲ್ಪದಲ್ಲಿ ವಿಶಾಲವಾದ ಒಳಸಭಾಂಗಣ ಮಧ್ಯಾಂಗಣ ಹಾಗೂ ಇಕ್ಕೆಲದ ಹಜಾರಗಳನ್ನು ಒಳಗೊಂಡಿರುತ್ತದೆ. ಕಟ್ಟಡಗಳ ಪ್ರವೇಶ ದ್ವಾರದ ಮೇಲುಗಡೆ ಎತ್ತರದ ಗಾತಿಕ್ ಶೈಲಿಯ ಮೊನಚು ಶಿಖರಗಳಿರುತ್ತವೆ. ಕಟ್ಟಡಗಳ ಒಳಾಂಗಣದಲ್ಲಿ ಸಾಕಷ್ಟು ಗಾಳಿ, ಬೆಳಕು ಇರುವಂತೆ ಯೋಜಿಸಲಾಗಿರುತ್ತದೆ ಎಂಬಿತ್ಯಾದಿ ಅಂಶಗಳ ಜೊತೆಗೆ ಸೈನಿಕ ಕಟ್ಟಡಗಳು ಹಾಗೂ ಸಾರ್ವಜನಿಕ ಕಛೇರಿ ಕಟ್ಟಡಗಳ ವೈಶಿಷ್ಟ್ಯತೆಯನ್ನು ವಿವರಿಸಿದ್ದಾರೆ. ಸಿ. ಮಹದೇವ, ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ ಅವರ ಸಂಪಾದಿತ "ಹೊಸಪೇಟೆ ತಾಲೂಕು ದರ್ಶನ" ಎಂಬ ಕೃತಿಯಲ್ಲಿ ಪ್ರಾಗಿತಿಹಾಸದಿಂದ ಆಧುನಿಕ ಕಾಲಘಟ್ಟದವರೆಗಿನ ವಿವಿಧ ಮಜಲುಗಳನ್ನು ನೀಡಿದ್ದಾರೆ. ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಸ್ಥಾಪಿಸಲ್ಪಟ್ಟ ಆಡಳಿತ, ಶಿಕ್ಷಣ, ಆರೋಗ್ಯ, ನ್ಯಾಯ, ರಕ್ಷಣೆ, ಸಾರಿಗೆ ಮತ್ತು ಸಂಪರ್ಕ ಹಾಗೂ ತುಂಗಭದ್ರ ಡ್ಯಾಮ್ ನಿರ್ಮಾಣದ ಬಗ್ಗೆ ದಾಖಲಿಸಿದ್ದಾರೆ. ಕೆ. ರವೀಂದ್ರನಾಥ ಅವರ ಸಂಪಾದಿತ 'ಬಳ್ಳಾರಿ ಜಿಲ್ಲಾ ದರ್ಶನ' ಎಂಬ ಕೃತಿಯಲ್ಲಿ ಆಧುನಿಕ ಜಾಗತೀಕರಣದ ಪ್ರಭಾವದಿಂದ ಆದ ಸಾಂಸ್ಕೃತಿಕ ಪಲ್ಲಟಗಳ ಕುರಿತು ವಿಸ್ತೃತವಾದ ವಿವರಗಳನ್ನು ನೀಡಿದ್ದಾರೆ. ಕೋ. ಚೆನ್ನಬಸಪ್ಪ ಅವರ 'ಕರ್ನಾಟಕ ಏಕೀಕರಣ ಬಳ್ಳಾರಿ ಜಿಲ್ಲೆ ಹಿನ್ನೆಲೆಯಲ್ಲಿ' ಎಂಬ ಕೃತಿಯಲ್ಲಿ ಕರ್ನಾಟಕ ಏಕೀಕರಣದಲ್ಲಿ ಬಳ್ಳಾರಿ ಜಿಲ್ಲೆಯ ಪಾತ್ರ, ಬಳ್ಳಾರಿ ಮೈಸೂರು ರಾಜ್ಯಕ್ಕೆ ಸೇರ್ಪಡೆಯಾದ ಬಗೆಗೆ ಹಾಗೂ ತುಂಗಭದ್ರ ಡ್ಯಾಮ್ ಸಹಿತ ಆಂಧ್ರಕ್ಕೆ ಹೇಗೆ ವಿಲೀನವಾಯಿತು ಎಂಬುವುದರ ಕುರಿತು ಸಮಕಾಲೀನ ಸಾಕ್ಷ್ಯಾಧಾರಗಳಿಂದ ಸಮರ್ಥಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರ 'ವಸಾಹತುಕಾಲೀನ ಬಳ್ಳಾರಿ ಜಿಲ್ಲೆ' ಎಂಬ ಕೃತಿಯಲ್ಲಿ ಕ್ರಿ.ಶ. ೧೮೦೦ ರಿಂದ ೧೯೫೩ರವರೆಗಿನ ಅವಧಿಯಲ್ಲಿ ಆಳ್ವಿಕೆ ಮಾಡಿದ ೧೧೫ ಕಲೆಕ್ಟರುಗಳ ರಾಜಕೀಯ ಚಿತ್ರಣ, ಅವರ ಪ್ರಭಾವ, ಆರ್ಥಿಕ, ಸಾಮಾಜಿಕ, ವಸಾಹತುಶಾಹಿ ಆಳ್ವಿಕೆಯ ವಿರುದ್ಧ ಪ್ರತಿರೋಧ ಹಾಗೂ ಆಧುನಿಕ ಬಳ್ಳಾರಿಯ ವಿವಿಧ ಆಯಾಮುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚನೆಯಾದಂಥದ್ದು. ಉಜ್ಜಿನಿ ರುದ್ರಪ್ಪ ಅವರ 'ಕೌತುಕ' ಎಂಬ ಕೃತಿಯಲ್ಲಿ ಕೂಡ್ಲಿಗಿ ಪಟ್ಟಣದಲ್ಲಿ ಗಾಂಧೀಜಿಯ ಚಿತಾಭಸ್ಮವಿದೆ. ಈ ಸ್ಮಾರಕಕ್ಕೆ ಪ್ರೇರಣೆ ನೀಡಿದವರು ಯಾರು? ಹಾಗೂ ಸ್ಮಾರಕ ನಿರ್ಮಾಣದ ಕುರಿತು ಚರ್ಚಿಸಿದ್ದಾರೆ.

**ಕನ್ನಡ ಲೇಖನಗಳು**

ಇತಿಹಾಸ ದರ್ಶನ ಸಂಪುಟ-೧೫ರಲ್ಲಿ ಮೃತ್ಯುಂಜಯ ರುಮಾಲೆಯವರು 'ಈಸ್ಟ್ ಇಂಡಿಯ ಕಂಪನಿ ಕಾಲದ ಬಳ್ಳಾರಿ ಜಿಲ್ಲಾ ಆಡಳಿತ ವಿಭಾಗಗಳು ಮತ್ತು ಬ್ರಿಟಿಷರ ಸಮಾಧಿಗಳು' ಎಂಬ ಲೇಖನದಲ್ಲಿ ಕ್ರಿ.ಶ. ೧೮೦೦ ರಿಂದ ವಿಶಾಲ ಬಳ್ಳಾರಿ ಪ್ರದೇಶಕ್ಕೆ ಮೊಟ್ಟಮೊದಲ ಪ್ರಧಾನ ಜಿಲ್ಲಾಧಿಕಾರಿಯಾಗಿದ್ದ ಸರ್. ಥಾಮಸ್ ಮನ್ರೋ ಆಡಳಿತದ ಅನುಕೂಲಕ್ಕಾಗಿ

ಸ್ವಾಧೀನಪಡಿಸಿಕೊಂಡ ಜಿಲ್ಲೆಯ ವ್ಯಾಪ್ತಿಯನ್ನು ನಾಲ್ವರು ಉಪ ಜಿಲ್ಲಾಧಿಕಾರಿಗಳಿಗೆ ಹಂಚಿ, ಹೇಗೆ ಆಡಳಿತವನ್ನು ನಿಯಂತ್ರಿಸಿದನು ಎಂಬುದರ ಬಗೆಗೆ ನಿರೂಪಿಸಿದ್ದಾರೆ. ಇತಿಹಾಸ ದರ್ಶನ ಸಂಪುಟ-೧೬ರಲ್ಲಿ ಕುಂ.ಬಾ. ಸದಾಶಿವಪ್ಪ ಅವರ 'ಹರಪನಹಳ್ಳಿ ಶಿಕ್ಷಣ ಸಂಸ್ಥೆ ಮತ್ತು ಹಳೇ ವಿದ್ಯಾರ್ಥಿ ಸಂಘ' ಎಂಬ ಲೇಖನದಲ್ಲಿ ಹರಪನಹಳ್ಳಿ ಪಟ್ಟಣಕ್ಕೆ ಒಂದು ಸರಕಾರಿ ಶಾಲೆ ಬೇಕೆಂದು ಪಟ್ಟಣದ ಗೌಡ, ಶಾನುಭೋಗ ಮತ್ತು ಗಣ್ಯ ವ್ಯಕ್ತಿಗಳು ಆಲೋಚಿಸಿದ ಬಗೆಗೆ ಹಾಗೂ ಮಾನ್ಯ ಜಿಲ್ಲಾ ಕಲೆಕ್ಟರಿಗೆ ಒಂದು ಮನವಿಯನ್ನು ಅರ್ಪಿಸಿ, ೧೮೮೧ರಲ್ಲಿ ಪಟ್ಟಣಕ್ಕೆ ಒಂದು ಪ್ರಾಥಮಿಕ ಶಾಲೆಯ ಮಂಜೂರಾತಿಗಾಗಿ ಹೋರಾಡಿದ ವಿವರದ ಕುರಿತು ಪ್ರಸ್ತಾಪಿಸಿದ್ದಾರೆ. ಇತಿಹಾಸ ದರ್ಶನ ಸಂಪುಟ-೨೧ರಲ್ಲಿ ಗುರುಮೂರ್ತಿ ಪೆಂಡಕೂರು ಅವರ 'ಹಗರಿಬೊಮ್ಮನಹಳ್ಳಿ ಯಲ್ಲಿ ಮನೆತನದ ಹೆಸರುಗಳು' ಎಂಬ ಲೇಖನದಲ್ಲಿ ವಿಜಯನಗರ ಸಾಮ್ರಾಜ್ಯದ ಪತನದ ನಂತರ ಇಲ್ಲಿದ್ದ ವ್ಯಾಪಾರಿಗಳು, ಅಧಿಕಾರಿಗಳು, ಕುಶಲಕರ್ಮಿಗಳು ಇತ್ಯಾದಿ ಶ್ರಮಿಕ ವರ್ಗವು ಬಿರುಸಿನಿಂದ ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಯಿಂದ ತಮ್ಮ ಮೂಲ ವೃತ್ತಿಯನ್ನು ಬದಲಾಯಿಸಿ, ಹೇಗೆ ಬೇರೆ ಬೇರೆ ಪ್ರವೃತ್ತಿಗಳಲ್ಲಿ ಕಲಬೆರೆಕೆಯಾದರು ಹಾಗೂ ತಮಿಳುನಾಡಿನ ತಿರುವಣ್ಣಾ ಮಲೈ, ತಿರುಚಿನಾಪಳ್ಳಿ ಪ್ರಾಂತದ ಕೊಂಗುನಾಡಿನ ಶ್ರಮಿಕ ವರ್ಗವು ಇಲ್ಲಿಗೆ ಬಂದು ತುಂಗಭದ್ರಾ ಅಣೆಕಟ್ಟನ್ನು ಕಟ್ಟಿದ ಬಗೆಗೆ ನಿರೂಪಿಸಿದ್ದಾರೆ. ಇತಿಹಾಸ ದರ್ಶನ ಸಂಪುಟ-೨೨ರಲ್ಲಿ ಕುಂ.ಬಾ. ಸದಾಶಿವಪ್ಪ ಅವರ 'ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯದಲ್ಲಿ ವಿಲೀನಗೊಂಡ ಸಂದರ್ಭದ ಹಿನ್ನೆಲೆ' ಎಂಬ ಲೇಖನದಲ್ಲಿ ಪ್ರತ್ಯೇಕ ಆಂಧ್ರಪ್ರದೇಶಕ್ಕಾಗಿ ಹೋರಾಟ ಮಾಡಿ ಪ್ರಾಣ ತ್ಯಾಗ ಮಾಡಿದ ಪೊಟ್ಟಿ ಶ್ರೀರಾಮುಲು ಅವರ ಪ್ರಭಾವ ಹಾಗೂ ವಾಂಛೂ ಸಮಿತಿ ವರದಿಯಿಂದ ಆಂಧ್ರಪ್ರದೇಶಕ್ಕೆ ಪ್ರತ್ಯೇಕ ಸ್ವಾತಂತ್ರ್ಯ ರಾಜ್ಯ ಲಭಿಸಿತು. ಆದರೆ, ಬಳ್ಳಾರಿ ಪ್ರದೇಶ ಆಂಧ್ರಕ್ಕೋ? ಮೈಸೂರು ಸಂಸ್ಥಾನಕ್ಕೆ ಸೇರಬೇಕೋ? ಎಂಬುದರ ಬಗ್ಗೆ ನಡೆದ ವಾದ-ವಿವಾದ ಕುರಿತು ಚರ್ಚಿಸಿದ್ದಾರೆ. ಇತಿಹಾಸ ದರ್ಶನ ಸಂಪುಟ-೨೩ರಲ್ಲಿ ಗುರುಮೂರ್ತಿ ಪೆಂಡಕೂರ ಅವರ 'ಬಳ್ಳಾರಿ ಜಿಲ್ಲೆಯ ಪ್ರಥಮ ಪಾಠಶಾಲೆ-ವಾರ್ಡ್ಲಾ ಪ್ರೌಢ ಶಾಲೆ' ಎಂಬ ಲೇಖನದಲ್ಲಿ ಜಾನ್ ಹ್ಯಾಂಡ್ಸ್ ಸ್ಥಾಪಿಸಿದ ಸೆಂಟ್ರಲ್ ಇಂಗ್ಲಿಷ್ ಸ್ಕೂಲ್ ಮೂಲಾಧಾರದ ಮೇಲೆ ಸಹಯೋಗಿ ವಿಲಿಯಂ ಥಾಂಸನ್ ನೆರವಿನಿಂದ ಬಳ್ಳಾರಿಯ ಮಿಷನ್ ತೋಟದಲ್ಲಿ ೨೮ನೇ ಆಗಸ್ಟ್ ೧೮೪೬ರಂದು ವಾರ್ಡ್ಲಾ ಪ್ರೌಢ ವಿದ್ಯಾಪೀಠವನ್ನು ಪ್ರಾರಂಭಿಸಿದ ಬಗ್ಗೆ ಹಾಗೂ ಮಿಷನರಿಗಳು ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಕೊಟ್ಟ ಕೊಡುಗೆಯನ್ನು ಸ್ಮರಿಸಿದ್ದಾರೆ.

### ೧.೪. ಅಧ್ಯಯನದ ವಿಧಾನ

"ವಸಾಹತುಕಾಲೀನ ಕಲೆ ಮತ್ತು ವಾಸ್ತುಶಿಲ್ಪ: ಬಳ್ಳಾರಿ ಜಿಲ್ಲೆ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಈಗಾಗಲೇ ಅಧ್ಯಯನ ಸಮೀಕ್ಷೆ ಕುರಿತ ವಿವರಗಳಲ್ಲಿ ಸಮೂದಿಸಿರುವ ಬಹುತೇಕ ಎಲ್ಲಾ ಗ್ರಂಥಗಳನ್ನು ಪ್ರಸ್ತುತ ಅಧ್ಯಯನ ಕಟ್ಟುವಲ್ಲಿ ಬಳಸಿಕೊಳ್ಳಲಾಗಿದೆ.

ಪ್ರಕಟಗೊಂಡಿರುವ ಇಂಥ ಸಾಮಗ್ರಿಗಳು ಅಧ್ಯಯನದ ದಿಕ್ಕು ಅಥವಾ ರೂಪರೇಷೆಗಳನ್ನು ಗೊತ್ತುಪಡಿಸಿಕೊಳ್ಳುವಲ್ಲಿ ತುಂಬಾ ಸಹಾಯಕವಾಗಿ ನಿಲ್ಲುತ್ತವೆ. ಈ ಆಕರ ಸಾಮಗ್ರಿಗಳನ್ನಿಟ್ಟುಕೊಂಡು ಅನುಚಾನವಾಗಿ ಬಂದ ಐರೋಪ್ಯ ಕಲೆ ಮತ್ತು ವಾಸ್ತುಶಿಲ್ಪವು ಬಳ್ಳಾರಿ ಜಿಲ್ಲೆಯಲ್ಲಿ ಯಾವ ರೀತಿ ಬೆಳಕು ಚೆಲ್ಲಿತು ಎಂಬುವುದರ ಬಗ್ಗೆ ತೌಲನಿಕವಾಗಿ ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯ ಮತ್ತು ಪತ್ರಾಗಾರವನ್ನೇ ಹೆಚ್ಚಾಗಿ ಅವಲಂಬಿಸಿದೆ. ವಿದೇಶಿ ಪ್ರವಾಸಿಗರ, ಬ್ರಿಟಿಷ್ ಆಡಳಿತಗಾರರ, ಮಿಷನರಿಗಳ ವರದಿಗಳು ಮತ್ತು ದಾಖಲೆಗಳು ಈ ಅಧ್ಯಯನಕ್ಕೆ ನೆರವಾದ ಪ್ರಮುಖ ಆಕರಗಳು. ಇದರ ಜೊತೆಗೆ ಬಳ್ಳಾರಿ ಜಿಲ್ಲೆಯ ಕುರಿತು ಈಗಾಗಲೇ ಪ್ರಕಟಗೊಂಡ ಕೃತಿಗಳು, ಸ್ಮರಣಾ ಸಂಚಿಕೆಗಳು, ಪತ್ರಿಕಾ ವರದಿಗಳು ಮತ್ತು ಲೇಖನಗಳು ಜಿಲ್ಲೆಯ ಇತಿಹಾಸವನ್ನು ಅರ್ಥೈಸಿಕೊಳ್ಳುವುದಕ್ಕೆ ನೆರವಾಗಿವೆ.

ಪ್ರಸ್ತುತ ಅಧ್ಯಯನವನ್ನು ಕಟ್ಟಿಕೊಡುವಲ್ಲಿ ಬಹುಮುಖ್ಯ ಪಾತ್ರವಹಿಸುವ ಆಡಳಿತ ಕಟ್ಟಡಗಳು, ರಕ್ಷಣಾ ಕಟ್ಟಡಗಳು, ಧಾರ್ಮಿಕ ಕಟ್ಟಡಗಳು, ಶೈಕ್ಷಣಿಕ ಕಟ್ಟಡಗಳು ಹಾಗೂ ಸಾರ್ವಜನಿಕ ಕಟ್ಟಡಗಳಿಗೆ ಖುದ್ದಾಗಿ ಸ್ಥಳ ಭೇಟಿ ನೀಡಿ, ಕ್ಷೇತ್ರಕಾರ್ಯ ಮಾಡುವುದರ ಮೂಲಕ ವಿವರಗಳನ್ನು ಸಂಗ್ರಹಿಸಲಾಗಿದೆ. ಇದರ ಜೊತೆಗೆ ಕಟ್ಟಡಗಳ ಶೈಲಿ, ವಿನ್ಯಾಸ, ರಚನೆ, ಚಿತ್ರಕಲೆ, ಕಟ್ಟಡಗಳ ಸ್ಥಿತಗತಿ ಹಾಗೂ ಅವುಗಳ ಮಹತ್ವದ ಕುರಿತು ವಿವರಗಳನ್ನು ಸಂಗ್ರಹಿಸಿ ಅಧ್ಯಯನ ಕೈಗೊಂಡಿರುವುದರಿಂದ ಈ ಅಧ್ಯಯನವು ಬಹುತೇಕ ಹೆಚ್ಚಿನ ಪ್ರಮಾಣದಲ್ಲಿ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಫಲಿತಗಳನ್ನು ಅವಲಂಬಿಸಿ ರಚನೆಯಾಗಿದ್ದು ಎಂದರೆ ತಪ್ಪಾಗಲಾರದು. ಇಂಥ ತಿರುಗಾಟದಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಕಂಡುಬಂದ ಕೆಲವು ಮೌಖಿಕ ವಿವರಗಳನ್ನು ಒಳಗೊಳಿಸಿಕೊಳ್ಳುವ ರೀತಿ ಅನುಸರಿಸಲಾಗಿದೆ.

ಪ್ರಸ್ತುತ ಅಧ್ಯಯನಕ್ಕೆ ಹೆಚ್ಚಿನ ಮಾಹಿತಿ ಪಡೆಯಲು ಕ್ಷೇತ್ರಕಾರ್ಯದ ಜೊತೆಗೆ ಸ್ಥಳೀಯ ಸಂಶೋಧಕರು, ಶಿಕ್ಷಕರು, ಕಲಾವಿದರು, ಸ್ವಾತಂತ್ರ್ಯ ಹೋರಾಟಗಾರರು, ವಕೀಲರು ಹಾಗೂ ಶ್ರಮಿಕ ವರ್ಗವನ್ನು ಸಂದರ್ಶಿಸಿ, ಅಧ್ಯಯನಕ್ಕೆ ನೆರವಾಗುವ ಆಕರಗಳನ್ನು ಸಂದರ್ಭಾನುಸಾರವಾಗಿ ಬಳಸಿಕೊಂಡು ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**೧.೫. ಅಧ್ಯಯನದ ಸ್ವರೂಪ**

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಕೆಲವು ಅಧ್ಯಾಯಗಳಲ್ಲಿ ಉಪಶೀರ್ಷಿಕೆಗಳು ಇವೆ. ಅದರ ಸಾರವು ಈ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನಗಳ ಸಮೀಕ್ಷೆ, ವಿಧಾನ ಹಾಗೂ ಸ್ವರೂಪವನ್ನು ನಿರ್ಧರಿಸಲಾಗಿದ್ದು, ಈ ಮೂಲಕ ಪ್ರಸ್ತುತ ಅಧ್ಯಯನದ ಒಟ್ಟು ಆಶಯವನ್ನು ಸೂಚಿಸಲಾಗಿದೆ. ಕರ್ನಾಟಕ ರಾಜ್ಯದ ಹೈದರಾಬಾದ್ ಕರ್ನಾಟಕ ಅಥವಾ

ಕಲ್ಯಾಣ ಕರ್ನಾಟಕ ಎಂದು ಕರೆಯಲ್ಪಡುವ ಆರು ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯು ಒಂದು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ವಸಾಹತುಶಾಹಿ ಆಡಳಿತದ ಕುರಿತಾಗಿ ತಕ್ಕಮಟ್ಟಿಗೆ ಅಧ್ಯಯನಗಳು ನಡೆದಿವೆ. ಆದರೆ, ಅವರ ಸಾಂಸ್ಕೃತಿಕ ಇತಿಹಾಸದ ಕುರಿತಾಗಿ ನಡೆಯಬೇಕಾದ ಅಧ್ಯಯನ ಸಾಕಷ್ಟಿದೆ. ಈ ಕೊರೆಯನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನವನ್ನು ಯೋಜಿಸಿಕೊಳ್ಳಲಾಯಿತು. ಪ್ರಸ್ತುತ ಅಧ್ಯಯನದ ಉದ್ದೇಶವನ್ನು ಈಡೇರಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆ.

ಐತಿಹಾಸಿಕ ಹಿನ್ನೆಲೆ ಶೀರ್ಷಿಕೆಯ ಅಡಿಯಲ್ಲಿ ರೂಪಗೊಂಡ ಎರಡನೆಯ ಅಧ್ಯಾಯವು ಜಿಲ್ಲೆಯ ಕುರಿತು ಭೌಗೋಳಿಕ ಸನ್ನಿವೇಶಗಳು, ಭೂರಚನೆ, ನದಿಗಳು, ವಾಯುಗುಣ, ಸಸ್ಯ ಸಂಪತ್ತು ಹಾಗೂ ಸಂಪರ್ಕ ಅಂಶಗಳ ಕುರಿತು ವಿವರಿಸಲಾಗಿದೆ. ಬಳ್ಳಾರಿ ಪರಿಸರವು ಇತಿಹಾಸ ಪೂರ್ವಕಾಲದಿಂದಲೂ ಮಾನವನ ವಸತಿ ಪ್ರದೇಶವಾಗಿತ್ತೆಂಬುದಕ್ಕೆ ಈ ಜಿಲ್ಲೆಯಲ್ಲಿ ಕಾಣಸಿಗುವ ಹಳೆಶಿಲಾಯುಗ, ನವಶಿಲಾಯುಗ, ತಾಮ್ರಶಿಲಾಯುಗ, ಬೃಹತ್ ಶಿಲಾಯುಗ ಮತ್ತು ಇತಿಹಾಸ ಆರಂಭಯುಗದ ವಸತಿ ನೆಲೆಗಳು, ಗೀರು ಚಿತ್ರಗಳು, ಕೈಗೊಡಲಿ, ಮಡಿಕೆ ಚೂರುಗಳು, ಬಂಡೆ ಚಿತ್ರಗಳು, ಬೃಹತ್‌ಶಿಲಾ ಗೋರಿಗಲು ಇತ್ಯಾದಿ ಅವಶೇಷಗಳು ಈ ಪ್ರದೇಶದಲ್ಲಿ ಕಂಡುಬಂದಿರುವ ಕಾರಣ ಇತಿಹಾಸ ಪೂರ್ವಕಾಲದ ಅನೇಕ ಉಪಕರಣಗಳು ಸಾಕ್ಷಿಯಾಗಿವೆ. ಇದರ ಜೊತೆಗೆ ಶಾಸನ ಹಾಗೂ ಇತರ ಆಕರಗಳಲ್ಲಿರುವ ಸಂಗತಿಗಳನ್ನೇ ಹೆಚ್ಚಾಗಿ ಅವಲಂಬಿಸಿದೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯ ಪ್ರಾಗಿತಿಹಾಸ ಮತ್ತು ಇತಿಹಾಸವನ್ನು ಚರ್ಚಿಸಲಾಗಿದೆ. ಬಳ್ಳಾರಿ ಜಿಲ್ಲೆಯು ಕ್ರಿ.ಶ. ೧೮೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ನೇರ ಆಳ್ವಿಕೆಗೆ ಒಳಪಟ್ಟಾಗ ಜಿಲ್ಲೆಯಲ್ಲಿ ಕಲೆಕ್ಟರುಗಳು ಯಾವ ರೀತಿ ಕಾರ್ಯನಿರ್ವಹಿಸಿದರು ಎಂಬುವುದರ ಬಗ್ಗೆ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಐರೋಪ್ಯ ವಾಸ್ತುಶೈಲಿಗಳಾದ ಗಾಥಿಕ್, ಡೋರಿಕ್, ಐಯೋನಿಕ್, ಕಾರಿಂಥಿಯನ್ ಶೈಲಿಗಳ ಪ್ರಭಾವ ಹಾಗೂ ಲಕ್ಷಣಗಳ ಕುರಿತು ಚರ್ಚಿಸಲಾಗಿದೆ. ವಸಾಹತುಶಾಹಿ ಆಳ್ವಿಕೆಯ ಬಳ್ಳಾರಿ ಜಿಲ್ಲೆಯಲ್ಲಿದ್ದ ಒಂಬತ್ತು ತಾಲೂಕುಗಳಲ್ಲಿರುವ ಬ್ರಿಟಿಷರ ಸ್ಮಾರಕಗಳನ್ನು ಗುರುತಿಸಿ, ಅಧ್ಯಯನಕ್ಕೆ ಒಳಪಡಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕರ್ನಾಟಕ ಇತಿಹಾಸವನ್ನು ಕಲೆಗಳ ದೃಷ್ಟಿಯಿಂದ ಪರಿಶೀಲಿಸಿದರೆ ಅದರ ಭವ್ಯತೆ, ಸೌಂದರ್ಯ ಮತ್ತು ವೈವಿಧ್ಯತೆಗಳು ಎಂಥವರನ್ನು ಬೆರಗುಗೊಳಿಸುತ್ತವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ವಸಾಹತುಶಾಹಿ ಆಳ್ವಿಕೆಯ ಪ್ರಭಾವದಿಂದ ಐರೋಪ್ಯ ಕಲಾ ಪ್ರಕಾರಗಳು, ವಿಧಾನ, ವರ್ಣ ಸಂಯೋಜನೆಯ ವಿವಿಧ ಪ್ರಕಾರಗಳನ್ನು ಗುರುತಿಸಿ ಮೂರ್ತಿಶಿಲ್ಪ, ವರ್ಣಚಿತ್ರ, ಭಿತ್ತಿಚಿತ್ರಗಳ ಕುರಿತು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

ಅಧ್ಯಾಯ ಐದರಲ್ಲಿ ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಕಟ್ಟಡಗಳಲ್ಲಿ ಇಂಜಿನಿಯರ್‌ಗಳ ಪಾತ್ರ ಏನು? ಐರೋಪ್ಯದಿಂದ ಬಂದ ಇಂಜಿನಿಯರ್‌ಗಳ

ಪ್ರಭಾವ ಹೇಗಾಯಿತು ಹಾಗೂ ಕಟ್ಟಡಗಳಿಗೆ ಬಳಸಿದ ಸಾಮಗ್ರಿಗಳ ಕುರಿತು ಚರ್ಚಿಸಲಾಗಿದೆ. ಕೈಗಾರಿಕಾ ಕ್ರಾಂತಿಯ ಪ್ರಭಾವದಿಂದ ಶ್ರಮಿಕವರ್ಗವು ತಮ್ಮ ಮೂಲ ವೃತ್ತಿಯನ್ನು ಕಳೆದುಕೊಂಡು ಕಂಪನಿ ಸರ್ಕಾರದ ಅಧೀನದಲ್ಲಿ ಹೇಗೆ ಕೂಲಿ-ಕಾರ್ಮಿಕರಾಗಿ ಕಾರ್ಯನಿರ್ವಹಿಸಿದರು ಎಂಬುವುದರ ಬಗ್ಗೆ ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯವು ಒಟ್ಟು ಪ್ರಬಂಧದ ತಿರುಳನ್ನು ಒಳಗೊಂಡಿದ್ದು, ಮೇಲಿನ ಅಧ್ಯಾಯಗಳಲ್ಲಿ ಕಂಡುಕೊಂಡ ಫಲಿತಾಂಶವನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.

ಪ್ರಸ್ತುತ ವಿಷಯಕ್ಕೆ ಪೂರಕವಾದಂತಹ ವಕ್ತೃವಿವರ, ಪರಾಮರ್ಶನ ಗ್ರಂಥಗಳು, ನಕ್ಷೆಗಳು, ತಲವಿನ್ಯಾಸಗಳು ಮತ್ತು ಛಾಯಾಚಿತ್ರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧,** ಪುಟ ೮.

೨. ಅಪರ್ಣ ಕೂ.ಸ., ೧೯೯೯, **ದೇವಾಲಯ ವಾಸ್ತುಶಿಲ್ಪ ಪರಿಚಯ,** ಪುಟ ೧.

೩. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೭೦, **ಕರ್ನಾಟಕದ ಇತಿಹಾಸ ದರ್ಶನ,** ಪುಟ ೧೦೫೩.

೪. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು) (ಪ್ರಸಂ.), ೨೦೦೪, **ಮರಾಠರ ಪಾರಮ್ಯ(ಭಾಗ-ಎರಡು),** ಪುಟ ೩೪೯.

೫. ಮೋಹನ್‌ಕೃಷ್ಣ ರೈ ಕೆ., ೨೦೦೭, **ವಸಾಹತುಶಾಹಿ ಮತ್ತು ನಗರೀಕರಣ,** ಪುಟ ೧೩.

೬. ಅಂಬಳಿಕೆ ಹಿರಿಯಣ್ಣ(ಪ್ರಸಂ.), ೨೦೦೯, **ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ,** ಪುಟ ೯೩೦.

೭. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೭೦, **ಪೂರ್ವೋಕ್ತ,** ಪುಟ ೧೦೫೩.

೮. ಮರಿಶಾಮಾಚಾರ್ ಎನ್., ೨೦೦೯, **ಕಲಾದಿಗ್ಗಜರು,** ಪುಟ ೧೯೨.



ಅಧ್ಯಾಯ : ಎರಡು

# ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

೨.೧. ಭೌಗೋಳಿಕತೆ

೨.೨. ಪ್ರಾಗಿತಿಹಾಸ

೨.೩. ಪ್ರಾಚೀನ ಕಾಲದ ಇತಿಹಾಸ

೨.೪. ಮಧ್ಯಕಾಲೀನ ಇತಿಹಾಸ

೨.೫. ಆಧುನಿಕ ಕಾಲದ ಇತಿಹಾಸ

## ಅಧ್ಯಾಯ : ಎರಡು

# ಬಳ್ಳಾರಿ ಪರಿಸರದ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

### ೨.೧. ಭೌಗೋಳಿಕತೆ

ಕರ್ನಾಟಕದ ಮೂವತ್ತು ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆಯೂ ಒಂದು. ಜಿಲ್ಲಾ ಆಡಳಿತ ಕೇಂದ್ರವಾಗಿರುವ ಬಳ್ಳಾರಿಯು ಬೆಂಗಳೂರು - ರಾಯಚೂರು ರಾಜ್ಯ ಹೆದ್ದಾರಿಯಲ್ಲಿ, ರಾಜ್ಯದ ರಾಜಧಾನಿಯಿಂದ ಉತ್ತರಕ್ಕೆ ೩೦೪ ಕಿ.ಮೀ. ದೂರದಲ್ಲಿದೆ. ಇದು ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿ ಪೂರ್ವದ ಕಡೆಗೆ ಇದೆ. ಇದರ ಪೂರ್ವಕ್ಕೆ ಆಂಧ್ರಪ್ರದೇಶದ ಅನಂತಪುರ ಹಾಗೂ ಕರ್ನೂಲ್, ಪಶ್ಚಿಮಕ್ಕೆ ಕೊಪ್ಪಳ ಹಾಗೂ ಹಾವೇರಿ, ನೈರುತ್ಯಕ್ಕೆ ದಾವಣಗೆರೆ, ದಕ್ಷಿಣಕ್ಕೆ ಚಿತ್ರದುರ್ಗ ಮತ್ತು ಉತ್ತರಕ್ಕೆ ರಾಯಚೂರು ಜಿಲ್ಲೆಗಳು ಗಡಿಗಳಾಗಿದ್ದು, ನೈರುತ್ಯ ದಿಕ್ಕಿನ ಹರಪನಹಳ್ಳಿ ತಾಲೂಕಿನ 'ಹರವಿ' ಎಂಬ ಗ್ರಾಮದಿಂದ ಈಶಾನ್ಯ ದಿಕ್ಕಿನ ಸಿರುಗುಪ್ಪ ತಾಲೂಕಿನ 'ಸಲ್ಲಕುದಲೂರು' ಎಂಬ ಗ್ರಾಮದವರೆಗೆ ೧೮೭ ಕಿ.ಮೀ. ಉದ್ದ, ಪೂರ್ವ - ಪಶ್ಚಿಮವಾಗಿ ಬಳ್ಳಾರಿ ತಾಲೂಕಿನ ಕಾರೆಕಲ್ಲು 'ವೀರಾಪುರದಿಂದ' ಹಡಗಲಿ ತಾಲೂಕಿನ 'ಹಿರೇಬನ್ನಿಹಟ್ಟಿ'ಯವರೆಗೆ ೧೬೧ ಕಿ.ಮೀ. ಅಗಲವಾಗಿ ಹರಡಿಕೊಂಡಿದೆ. ಬಳ್ಳಾರಿ ಜಿಲ್ಲೆಯ ವಾಸ್ತವಿಕ ಭೌಗೋಳಿಕ ನೆಲೆಯು ೧೪.೩೦° - ೧೫.೫೦° ಉತ್ತರ ಅಕ್ಷಾಂಶ ಮತ್ತು ೭೫.೪೦° - ೭೭.೧೧° ಪೂರ್ವರೇಖಾಂಶಗಳ ನಡುವೆ ಇದೆ.[೧]

ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಬಳ್ಳಾರಿಯು ಮದರಾಸ್ ಪ್ರಾಂತ್ಯದಲ್ಲಿ ಏಳನೆಯ ದೊಡ್ಡ ಪಟ್ಟಣವಾಗಿತ್ತು. ಬ್ರಿಟಿಷ್ ಮತ್ತು ಸ್ಥಳೀಯ ಭಾರತದ ತುಕಡಿಗಳಿಂದ ದಕ್ಷಿಣ ಭಾರತದ ಮುಖ್ಯ ಮಿಲಿಟರಿ ಕೇಂದ್ರಗಳಲ್ಲಿ ಒಂದಾಗಿತ್ತು. ಹಾಗಾಗಿ ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ ಹನ್ನೊಂದು ತಾಲೂಕುಗಳನ್ನು ಒಳಗೊಂಡಿದ್ದ ಬಳ್ಳಾರಿ ಜಿಲ್ಲೆಯನ್ನು ನಾಲ್ಕು ಉಪವಿಭಾಗಗಳನ್ನಾಗಿ ವಿಂಗಡಿಸಿಕೊಂಡು ಆಳ್ವಿಕೆ ನಡೆಸಿದರು.

ಪ್ರಸ್ತುತ ಬಳ್ಳಾರಿಯನ್ನು ಬಳ್ಳಾರಿ ಮತ್ತು ಹೊಸಪೇಟೆ ಎಂದು ಎರಡು ಉಪವಿಭಾಗಗಳಾಗಿ ವಿಂಗಡಿಸಲಾಗಿದೆ. ಜಿಲ್ಲೆಯು ಬಳ್ಳಾರಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು ಮತ್ತು ಸಿರುಗುಪ್ಪ ತಾಲೂಕುಗಳನ್ನು ಒಳಗೊಂಡಿದೆ. ಆಡಳಿತಾತ್ಮಕವಾಗಿ

ಬಳ್ಳಾರಿ ಜಿಲ್ಲೆಯು ೫೨೪ ಗ್ರಾಮಗಳನ್ನು, ೧೮೯ ಗ್ರಾಮ ಪಂಚಾಯಿತಿಗಳನ್ನು ಒಂದು ನಗರ ಸಭೆ(ಬಳ್ಳಾರಿ ನಗರ), ಒಂದು ನಗರ ಪುರಸಭೆ(ಹೊಸಪೇಟೆ), ನಾಲ್ಕು ಪಟ್ಟಣ ಪುರಸಭೆಗಳನ್ನು (ಹಡಗಲಿ, ಸಂಡೂರು, ಸಿರುಗುಪ್ಪ ಮತ್ತು ಕಂಪ್ಲಿ), ನಾಲ್ಕು ಪಟ್ಟಣ ಪಂಚಾಯಿತಿಗಳನ್ನು (ಕಮಲಾಪುರ, ಕೂಡ್ಲಿಗಿ, ಕೊಟ್ಟೂರು, ತೆಕ್ಕಲಕೋಟೆ) ಹೊಂದಿದೆ. ಜಿಲ್ಲೆಯ ಐತಿಹಾಸಿಕ ಹಾಗೂ ವಿಶ್ವಪರಂಪರೆ ತಾಣವಾಗಿರುವ ಹಂಪಿಯು ಯುನೆಸ್ಕೋದಿಂದ ಸಾಂಸ್ಕೃತಿಕ ಪರಂಪರೆಯಾಗಿ ಗುರುತಿಸಲ್ಪಟ್ಟಿದೆ ಮತ್ತು ಪ್ರಪಂಚದಾದ್ಯಂತ ಪ್ರವಾಸಿಗರನ್ನು ಆಕರ್ಷಸುತ್ತಿದೆ.

ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು, ಬೆಟ್ಟಗಳಿಂದಾವರಿಸಿದೆ. ಭೌಗೋಳಿಕವಾಗಿ ಜಿಲ್ಲೆಯನ್ನು ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಒಂದು ಪೂರ್ವಭಾಗ ಮತ್ತು ಇನ್ನೊಂದು ಪಶ್ಚಿಮ ಭಾಗ. ಈ ಎರಡು ಭೌಗೋಳಿಕ ವಿಭಾಗಗಳನ್ನು ಸಂಡೂರು ಬೆಟ್ಟಗಳು ಪ್ರತ್ಯೇಕಗೊಳಿಸಿವೆ. ಜಿಲ್ಲೆಯ ಪೂರ್ವಭಾಗದಲ್ಲಿ ಸಿರುಗುಪ್ಪ ಮತ್ತು ಬಳ್ಳಾರಿ ತಾಲೂಕುಗಳಿವೆ. ಈ ಪರಿಸರವು ಕೆಂಚನಗುಡ್ಡ, ನಿಟ್ಟೂರು, ತೆಕ್ಕಲಕೋಟೆ, ಬೆಳಗಲ್ಲು, ಹೊಳಗುಂದಿ, ಆಲೂರು, ಸಿರಿಗೇರಿ, ಕೊಂಚೆಗೇರಿಯಲ್ಲಿ ಕಬ್ಬಿಣಾಂಶವುಳ್ಳ ಗ್ರಾನೈಟ್ ಬೆಟ್ಟಗುಡ್ಡಗಳಿಂದ ಆವರಿಸಲ್ಪಟ್ಟಿದೆ. ಇಲ್ಲಿ ಸಮತಟ್ಟಾದ ಕಪ್ಪು ಮಣ್ಣಿನ ಭೂಮಿಯು ಅಧಿಕವಾಗಿದ್ದು, ಕೆಂಪು ಮಣ್ಣಿನ ಭೂಮಿಯು ಅಲ್ಪ ಪ್ರಮಾಣದಲ್ಲಿದೆ. ಹವಾಮಾನದ ದೃಷ್ಟಿಯಿಂದ ಅತಿ ಉಷ್ಣವಲಯವಾಗಿದೆ. ಏಕೆಂದರೆ, ಅರಣ್ಯ ಹಾಗೂ ಮಳೆಯ ಪ್ರಮಾಣ ತೀರ ಕಡಿಮೆಯಾಗುತ್ತಿದೆ. ಈ ಪ್ರದೇಶಕ್ಕೆ ತುಂಗಭದ್ರಾ ನದಿ ಮತ್ತು ಹಗರಿ(ವೇದಾವತಿ) ನದಿಗಳು ಜೀವನಾಡಿಯಾಗಿವೆ. ಇವು ಕಾಲುವೆ ಹಾಗೂ ಹಳ್ಳಗಳಲ್ಲಿ ಹರಿಯುತ್ತಿರುವುದರಿಂದ ಈ ಪ್ರದೇಶದಲ್ಲಿ ಭತ್ತ ಹಾಗೂ ಹತ್ತಿಯನ್ನು ಹೇರಳವಾಗಿ ಬೆಳೆಯುತ್ತಿರುವುದರಿಂದ ಸಿರುಗುಪ್ಪವನ್ನು 'ಭತ್ತದ ಕಣಜ' ಎಂದೇ ಕರೆಯಲಾಗಿದೆ.

ಜಿಲ್ಲೆಯ ಪಶ್ಚಿಮ ಭಾಗವು ಸಂಡೂರು, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಹರಪನಹಳ್ಳಿ ಮತ್ತು ಹೂವಿನಹಡಗಲಿ ತಾಲೂಕುಗಳನ್ನು ಹೊಂದಿದೆ.[೨] ಈ ಪ್ರದೇಶವು ಪೂರ್ವಭಾಗಕ್ಕಿಂತ ತುಂಬಾ ಹೆತ್ತರದಲ್ಲಿದ್ದು, ಅಧಿಕ ಅರಣ್ಯ ಹಾಗೂ ಬೆಟ್ಟಗುಡ್ಡಗಳಿಂದ ಆವರಿಸಲ್ಪಟ್ಟಿದೆ. ಇಲ್ಲಿ ಅಧಿಕ ಪ್ರಮಾಣದಲ್ಲಿ ಮಳೆಯಾಗುವುದರಿಂದ ಪರಿಸರವು ತಂಪಾದ ಹವಾಮಾನವನ್ನು ಹೊಂದಿರುತ್ತದೆ.

ಸಂಡೂರು ಬೆಟ್ಟಸಾಲು ಮಲ್ಲಾಪುರಂ ಬಳಿ ತುಂಗಭದ್ರಾ ನದಿಯ ದಂಡೆಯಿಂದ ಹಿಡಿದು ಆಗ್ನೇಯದ ಕಡೆಗೆ ಸುಮಾರು ೪೮ ಕಿ.ಮೀ. ದೂರ ಹಬ್ಬಿದೆ. ಬೆಟ್ಟ ಸಾಲಿನ ನಡುವೆ ಒಂದು ಕಡೆ ನಾರಿಹಳ್ಳದ ಎರಡು ಕಮರಿಗಳಿವೆ. ಈ ಶ್ರೇಣೀಯ ದಕ್ಷಿಣ ಭಾಗಕ್ಕಿರುವ ಕುಮಾರಸ್ವಾಮಿ ದೇವಾಲಯವಿರುವ ಬೆಟ್ಟ(೧೦೩೬ ಮೀ.), ಮಧ್ಯದಲ್ಲಿರುವ ರಾಮನಮಲೈ ಬೆಟ್ಟ(೯೯೨ ಮೀ.) ತೀರ ಉತ್ತರದಲ್ಲಿರುವ ಜಂಬುನಾಥ ಗುಡ್ಡ(೯೦೮ಮೀ.) ಎತ್ತರದ ಶಿಖರಗಳನ್ನು ಹೊಂದಿವೆ. ಸಂಡೂರು ಬೆಟ್ಟಸಾಲಿನ ಪೂರ್ವಕ್ಕೆ ವಾಯುವ್ಯದಿಂದ ಆಗ್ನೇಯಕ್ಕೆ ಹಬ್ಬಿರುವ ಸುಗ್ಗ ಮಹದೇವಬೆಟ್ಟ

ಅಥವಾ ತಾಮ್ರ ಪರ್ವತ ಶ್ರೇಣಿ ದರೋಜಿ ಕೆರೆಯವರೆಗೂ ಸುಮಾರು ೪೨ ಕಿ.ಮೀ.ಗಳಷ್ಟು ಉದ್ದಕ್ಕೆ ವ್ಯಾಪಿಸಿದೆ.

ಕೂಡ್ಲಿಗಿ ಬೆಟ್ಟಗಳು ಎರಡು ಸಾಲುಗಳಲ್ಲಿವೆ. ಅವುಗಳಲ್ಲಿ ಒಂದು ಶ್ರೇಣೀ ಅನೆಕಲ್ಲುದುರ್ಗ (೭೨೭ ಮೀ.), ಇನ್ನೊಂದು ಜರಿಮಲೆಗುಡ್ಡ (೮೩೮ ಮೀ.) ಎತ್ತರದ ಶಿಖರಗಳನ್ನು ಹೊಂದಿವೆ. ಗುಡೇಕೋಟೆಯಿಂದ ಈಶಾನ್ಯಕ್ಕೆ ಹರಡಿರುವ ಗುಡೇಕೋಟೆ, ಬೆಟ್ಟ, ಚಿನ್ನದ ಹಗರಿ ನದಿ ದಾಟಿ ಚಿತ್ರದುರ್ಗ ಜಿಲ್ಲೆಯ ಸೆರಗಿನಲ್ಲಿ ಹಾದು ಹೋಗುತ್ತದೆ. ಹಡಗಲಿ, ಹರಪನಹಳ್ಳಿ, ತಾಲೂಕುಗಳಲ್ಲಿಯ ಮಲ್ಲಪ್ಪನ ಗುಡ್ಡ(೯೭೮ ಮೀ.) ತುಂಗಭದ್ರಾ ನದಿ ದಂಡೆಯ ಹೊನ್ನೂರಿನ ಬಳಿ ಪ್ರಾರಂಭವಾಗಿ ಆಗ್ನೇಯ ಕಡೆಗೆ ಹಬ್ಬಿದೆ. ಮಲ್ಲಪ್ಪನ ಗುಡ್ಡದ ನೈರುತ್ಯಕ್ಕಿರುವ ಕಲ್ಲಪ್ಪನ ಗುಡ್ಡ ವಾಯುವ್ಯದಿಂದ ಈಶಾನ್ಯಕ್ಕೆ ಸಾಗಿದ್ದು, ಇದರಲ್ಲಿ ನರಸಿಂಹ ದೇವರಗುಡ್ಡ ಸೇರಿದಂತೆ ಉಚ್ಚಂಗಿದುರ್ಗದವರೆಗೂ ಮುಂದುವರಿದು ಅಲ್ಲಿ ಕೊನೆಗೊಳ್ಳುತ್ತದೆ.[೩] ಜಿಲ್ಲೆಯ ಗ್ರಾನೈಟ್ ಶಿಲೆ ಮತ್ತು ಕಬ್ಬಿಣ ಅದಿರನ್ನೊಳಗೊಂಡ ಬೆಟ್ಟಗಳು, ತುಂಗಭದ್ರಾ ನದಿ ಹಾಗೂ ಉಪನದಿಗಳು, ಅರಣ್ಯ ಹಾಗೂ ನಿಸರ್ಗ ಸಂಪತ್ತಿನಿಂದ ಇಲ್ಲಿನ ಜನ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದೆ. ಇದರಿಂದ ಬಹು ಪ್ರಾಚೀನ ಕಾಲದಲ್ಲಿಯೇ ಪಂಪಾತೀರ್ಥ, ಕಿಷ್ಕಿಂಧೆ, ಕಾರ್ತಿಕೇಯ ಮತ್ತು ಮೈಲಾರ ಕ್ಷೇತ್ರಗಳು ಅನೇಕ ನಂಬಿಕೆ - ಸಂಪ್ರದಾಯಗಳನ್ನು ಮೈಗೂಡಿಸಿಕೊಂಡು ಬೆಳವಣಿಗೆ ಹೊಂದಿವೆ.

**ನದಿಗಳು** : ಬಳ್ಳಾರಿ ಜಿಲ್ಲೆಯ ನದಿಗಳಲ್ಲಿ ತುಂಗಭದ್ರಾ ಮತ್ತು ಇದರ ಉಪನದಿಗಳಾದ ಹಗರಿ ಮತ್ತು ಚಿಕ್ಕಹಗರಿಗಳು ಮುಖ್ಯವಾದವು.

**ತುಂಗಭದ್ರಾ ನದಿ** : ಬಳ್ಳಾರಿ ಜಿಲ್ಲೆಯಲ್ಲಿ ಹರಿಯುವ ತುಂಗಭದ್ರೆ ಈ ಜಿಲ್ಲೆಯ ಜೀವನಾಡಿಯೆನಿಸಿದೆ. ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಇದು ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟಸಾಲಿನ ವರಹ ಪರ್ವತದಲ್ಲಿ ಉಗಮವಾದ ಎರಡು ಹರಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳಲ್ಲಿ ಒಂದು ತುಂಗಾ ಇನ್ನೊಂದು ಭದ್ರಾ ಎರಡೂ ಕಲೆತು ಮುಂದೆ ಸಾಗಿದಾಗ ತುಂಗಭದ್ರಾ ಎಂದು ಕರೆಯಲಾಗಿದೆ. ಈ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ. ಮಹಾಭಾರತದಲ್ಲಿ ಜಾಹ್ನವಿ, ಕೃಷ್ಣವೇಣಿಗಳ ಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗುತ್ತದೆ.[೪] ಈ ನದಿ ಜಿಲ್ಲೆಯನ್ನು ಹರಪನಹಳ್ಳಿಯ ಕಡಲೆ ಗ್ರಾಮದ ಬಳಿ ಪ್ರವೇಶಿಸಿ, ಹರಪನಹಳ್ಳಿ, ಹಡಗಲಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲೂಕುಗಳ ಉತ್ತರದ ಎಲ್ಲೆಯಾಗಿ ಸುಮಾರು ೩೨೨ ಕಿ.ಮೀ. ದೂರ ಹರಿಯುತ್ತದೆ. ಈ ನದಿಯ ನೀರು ಸಿಹಿಯಾಗಿದ್ದು, ರುಚಿಗೆ ಹೆಸರಾದ “ಗಂಗಾ ಸ್ನಾನ ತುಂಗಾಪಾನ” ಎಂಬ ನಾಣ್ಣುಡಿಗೆ ಪಾತ್ರವಾಗಿದೆ.[೫]

**ಉಪನದಿಗಳು :** ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕ ಹಗರಿಗಳಲ್ಲದೆ ಚಿನ್ನ ಹಗರಿಯನ್ನೊಳಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತಿವೆ. ತುಂಗಭದ್ರಾ ನದಿಯ ಉಪನದಿ ಹಗರಿ ಹೊಳೆ ಚಿಕ್ಕಮಗಳೂರು ಜಿಲ್ಲೆಯ ಮುಳ್ಳಯ್ಯನಗಿರಿಯಲ್ಲಿ ಹುಟ್ಟಿ ಚಿತ್ರದುರ್ಗ ಜಿಲ್ಲೆಯಲ್ಲಿ ಹರಿದು ಆಂಧ್ರಪ್ರದೇಶದಲ್ಲಿ ಸ್ವಲ್ಪ ದೂರ ಸಾಗಿ ಮತ್ತೆ ಬಳ್ಳಾರಿ ಜಿಲ್ಲೆ ಪ್ರವೇಶಿಸಿ, ಬಳ್ಳಾರಿ, ಸಿರುಗುಪ್ಪ ತಾಲೂಕುಗಳಲ್ಲಿ ಹರಿದು ತುಂಗಭದ್ರಾ ನದಿಗೆ ಸೇರುತ್ತದೆ.

ಚಿಕ್ಕ ಹಗರಿಯು ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ, ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳಲ್ಲಿ ಹರಿದು ತುಂಗಭದ್ರಾ ನದಿಯನ್ನು ಸೇರುತ್ತದೆ. ಇದರ ಸಂಗಮ ಸ್ಥಳವನ್ನು ಈಗ ತುಂಗಭದ್ರಾ ಅಣೆಕಟ್ಟು ಆವರಿಸಿದೆ. ಹಗರಿ ನದಿಯ ಉಪಹೊಳೆಯಾದ ಚಿನ್ನಹಗರಿ ಚಿತ್ರದುರ್ಗ ಜಿಲ್ಲೆಯಲ್ಲಿ ಹುಟ್ಟಿ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿ ಹರಿದು ಹಗರಿ ನದಿಯನ್ನು ಆಂಧ್ರಪ್ರದೇಶದ ರಾಯದುರ್ಗ ತಾಲೂಕಿನ ಉತ್ತರ ಭಾಗದಲ್ಲಿ ಸೇರುತ್ತದೆ.[೬]

ಇವಲ್ಲದೆ ನೀರಾವರಿಗೆ ಉಪಯುಕ್ತವಾಗಿರುವ ಹಗ್ಗನರು ತೊರೆ, ಹಂಪಸಾಗರ, ಬೆಲ್ಲಹುಣಿಸಿಹೊಳೆ, ಗೌಂಪುರ ಹೊಳೆ, ನಾರಿಹಳ್ಳ ಮೊದಲಾದ ಸಣ್ಣಪುಟ್ಟ ತೊರೆಗಳು ಈ ಜಿಲ್ಲೆಯಲ್ಲಿ ಹುಟ್ಟಿ ತುಂಗಭದ್ರಾ ಮತ್ತು ಅದರ ಉಪಹೊಳೆಗಳನ್ನು ಸೇರುತ್ತವೆ. ಇವುಗಳ ಜೊತೆಗೆ ಈ ಜಿಲ್ಲೆಯಲ್ಲಿ ಸುಮಾರು ೨೨ ದೊಡ್ಡ ಕೆರೆಗಳು, ೧೭೦ಕ್ಕೂ ಹೆಚ್ಚು ಸಣ್ಣ ಕೆರೆಗಳೂ ಇವೆ ಎಂದು ತಿಳಿದುಬಂದಿದೆ.

ಜಿಲ್ಲೆಯಲ್ಲಿ ಹತ್ತಿ, ಜೋಳ, ಶೇಂಗಾ, ಭತ್ತ, ಕಬ್ಬು, ಸೂರ್ಯಕಾಂತಿ, ಸಜ್ಜೆ, ನವಣೆ, ಹತ್ತಿ, ಮೆಣಸಿನಕಾಯಿ, ಕಡಲೆ ಹಾಗೂ ಧಾನ್ಯಗಳು ಪ್ರಮುಖ ಬೆಳೆಗಳಾಗಿವೆ. ನಿವ್ವಳ ಬಿತ್ತನೆ ಪ್ರದೇಶದಲ್ಲಿ, ನಿವ್ವಳ ನೀರಾವರಿ ಪ್ರದೇಶವು ಶೇಕಡಾ ೩೭ರಷ್ಟು ಇದೆ. ನೀರಾವರಿ ತುಂಗಭದ್ರಾ ಅಣೆಕಟ್ಟು ಮುಖ್ಯ ಮೂಲವಾಗಿದೆ. ಒಟ್ಟು ನೀರಾವರಿ ಪ್ರದೇಶದಲ್ಲಿ ಕಾಲುವೆಯಿಂದ ನೀರಾವರಿಯು ಪ್ರತಿಶತ ೬೪ರಷ್ಟು ಇದೆ.

**ಅರಣ್ಯ ಸಂಪತ್ತು :** ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ ೯.೫೬.೨೨೦ ಹೆಕ್ಟೇರುಗಳು. ಅದರಲ್ಲಿ ಅರಣ್ಯ ಪ್ರದೇಶ ೩.೭೮.೩೨೦ ಹೆಕ್ಟೇರಷ್ಟು ಆರಂಭದಲ್ಲಿತ್ತು. ಆದರೆ ೧೯೮೯-೯೦ರಲ್ಲಿ ೧.೧೯.೨೨೭ ಹೆಕ್ಟೇರಿಗಿಳಿಯಿತು. ಜಿಲ್ಲೆಯ ಹೆಚ್ಚಿನ ಪ್ರಮಾಣ ಅಂದರೆ ೧.೦೪.೯೭೯ ಹೆಕ್ಟೇರು ಅರಣ್ಯ ಪ್ರದೇಶ ಹರಪನಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು ತಾಲೂಕುಗಳಲ್ಲಿದೆ. ಉಳಿದ ನಾಲ್ಕು ತಾಲೂಕುಗಳಾದ ಬಳ್ಳಾರಿ, ಸಿರುಗುಪ್ಪ, ಹಡಗಲಿ, ಹಗರಿಬೊಮ್ಮನಹಳ್ಳಿಯಲ್ಲಿರುವ ಅರಣ್ಯದ ವಿಸ್ತೀರ್ಣ ಕೇವಲ ೧೨.೨೬೮ ಹೆಕ್ಟೇರ್ ಅರಣ್ಯವಿದೆ.[೭]

ಸಂಡೂರು - ಕೂಡ್ಲಿಗಿ ಕಣಿವೆ ಪ್ರದೇಶದಲ್ಲಿ ಮಾತ್ರ ದಟ್ಟವಾದ ಜಾಲಿ, ಕಾರೆ, ತುಗ್ಗಲಿ, ಹಾಸಿನಗಿಡ, ನೀಲಗಿರಿ, ಬೇವಿನಮರ, ಸ್ವಲ್ಪಮಟ್ಟಿಗೆ ತೇಗ ಮತ್ತು ಗಂಧದ ಗಿಡಮರಗಳು

ಹಾಗೂ ಪೊದೆಗಳಿರುವ ಅರಣ್ಯವಿದೆ. ಇಲ್ಲಿ ದೊರೆಯುವ ಅರಣ್ಯ ಉತ್ಪನ್ನಗಳೆಂದರೆ, ಹುಣಸೆಹಣ್ಣು, ಕಾರೆಹಣ್ಣು, ಸೀತಾಫಲಹಣ್ಣು, ಅಂಟು, ಜೇನುತುಪ್ಪ, ಬೇವಿನಬೀಜ, ಸೀಗೆಕಾಯಿ, ತೂಪುರ ಎಲೆಗಳು, ತಂಗಡಿ ಎಲೆ, ಚೆಕ್ಕೆಹುಲ್ಲು(ಮೇವು) ಇತ್ಯಾದಿ ದೊರೆಯುತ್ತವೆ. ಈ ಪರಿಸರವು ಹೆಚ್ಚು ಕಾಡು ಹಾಗೂ ಬೆಟ್ಟಗುಡ್ಡಗಳ ಗಿರಿಕಂದರಗಳಿರುವುದರಿಂದ ಚಿರತೆ, ಕರಡಿ, ಕಾಡುಹಂದಿ, ಜಿಂಕೆ, ಮೊಲ, ಕೋತಿ, ನರಿ, ತೋಳ ಮೊದಲಾದ ಪ್ರಾಣಿಗಳು ಹಾಗೂ ನವಿಲು, ಪಾರಿವಾಳ, ಕಾಗೆ, ಕೊಕ್ಕರೆ, ಗಿಳಿ, ಗಿಡುಗು, ಹದ್ದು, ಇನ್ನೂ ಅನೇಕ ಬಗೆಯ ಪಕ್ಷಿಗಳ ಜೊತೆಗೆ ನಾಗರಹಾವು, ಹೆಬ್ಬಾವು ಮೊದಲಾದ ಉರಗಗಳೂ ಕಂಡು ಬರುತ್ತವೆ.

ಪ್ರಸ್ತುತ ಜಿಲ್ಲೆಯಲ್ಲಿರುವ ಅರಣ್ಯ ಪ್ರದೇಶವು ದಿನೇ ದಿನೇ ಕಡಿಮೆಯಾಗುತ್ತಿದೆ. ಕಾರಣ ಜನಸಂಖ್ಯೆಯ ಒತ್ತಡದಿಂದ ಕೃಷಿಗಾಗಿ ಅರಣ್ಯ ಹಾಗೂ ಬೆಟ್ಟ-ಗುಡ್ಡಗಳ ಒತ್ತುವರಿ, ಗಣಿಗಾರಿಕೆಯಿಂದ, ರಸ್ತೆಯ ಅಗಲೀಕರಣದಿಂದ, ಉರುವಲು ಕಟ್ಟಿಗೆಗಾಗಿ ಮರಗಳನ್ನು ಕಡಿಯಲಾಗುತ್ತಿದೆ. ಇದರಿಂದ ಕಾಡಿನಲ್ಲಿ ವಾಸಿಸುವ ಪ್ರಾಣಿ-ಪಕ್ಷಿಗಳು ಕಾಡಿನಿಂದ ನಾಡಿಗೆ ಬರುವವಂತಹ ಸ್ಥಿತಿ ನಿರ್ಮಾಣವಾಗುತ್ತಿದೆ.

**ಖನಿಜ ಸಂಪತ್ತು :** ಕರ್ನಾಟಕದ ಕಬ್ಬಿಣ ಮತ್ತು ಉಕ್ಕಿನ ಕಣಜ ಎಂದೇ ಕರೆಯಲ್ಪಡುವ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಂಡೂರು, ತಾರಾನಗರ, ತೋರಣಗಲ್ಲು, ದೇವಗಿರಿ, ದೋಣಿಮಲೈ ಹಾಗೂ ರಾಮಘಡ ಬೆಟ್ಟಗಳ ಗಣಿಗಾರಿಕೆಯಲ್ಲಿ ಉತ್ತಮ ಗುಣಮಟ್ಟದ ಮ್ಯಾಂಗನೀಸ್, ಕಬ್ಬಿಣದ ಅದಿರು ದೊರೆಯುವುದರಿಂದ ರಾಜ್ಯ, ರಾಷ್ಟ್ರ, ಅಂತರ್‌ರಾಷ್ಟ್ರೀಯ ಮಾರುಕಟ್ಟೆಯ ಉದ್ಯಮವು ಜಿಲ್ಲೆಯಲ್ಲಿ ಪ್ರವೇಶಿಸಿ, ಇಲ್ಲಿನ ಗಣಿಗಾರಿಕೆಗೆ ವಿಶ್ವಮಾನ್ಯತೆ ದೊರೆಯುವ ಹಾಗೆ ಮಾಡಿದೆ.

ಕರ್ನಾಟಕ ರಾಜ್ಯದಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರಿನ ಉತ್ಪಾದನೆಯಲ್ಲಿ ಬಳ್ಳಾರಿ ಜಿಲ್ಲೆಯದೇ ಸಿಂಹಪಾಲು. ರಾಜ್ಯದ ಒಟ್ಟು ಕಬ್ಬಿಣ ಅದಿರಿನ ಉತ್ಪಾದನೆಯಲ್ಲಿ ಬಳ್ಳಾರಿ ಜಿಲ್ಲೆಯ ಪಾಲು ಶೇ. ೮೮ರಷ್ಟು, ಮ್ಯಾಂಗನೀಸ್ ಅದಿರಿನಲ್ಲಿ ಜಿಲ್ಲೆಯ ಪಾಲು ಶೇ. ೭೦ರಷ್ಟು.[೮] ಗಣಿಗಾರಿಕೆಯು ಬಳ್ಳಾರಿ ಜಿಲ್ಲೆಯ ಪ್ರಮುಖ ಉದ್ಯಮವಾಗಿರುವುದರಿಂದ ಜಿಲ್ಲೆಯಲ್ಲಿ ಒಟ್ಟು ೨೧ ಗಣಿಗಳು ಪ್ರಮುಖವಾದವುಗಳು. ಅವುಗಳಲ್ಲಿ ಹೆಮಟೈಟ್, ಮ್ಯಾಗ್ನಟೈಟ್, ಲೈಮೊನೈಟ್, ಸೈಡಿರೈಟ್, ಬಾಕ್ಸೈಟ್, ಕ್ರೋಮೈಟ್, ಡೋಮೊಮೈಟ್, ಕಬ್ಬಿಣದ ಅದಿರು, ಕಯೋಲಿನ್, ಕಲ್ನಾರು ಹಾಗೂ ಸುಣ್ಣದಕಲ್ಲು ನಿಕ್ಷೇಪಗಳು ದೊರೆತಿವೆ.

ಬಳ್ಳಾರಿ-ಹೊಸಪೇಟೆ ನಡುವಣ ಗುಡ್ಡಗಳಲ್ಲಿ ದೊರೆಯುವ ಅದಿರಿನ ನಿಕ್ಷೇಪಗಳು ಪ್ರಪಂಚದಲ್ಲೇ ಅತ್ಯುತ್ತಮವಾದಂಥವು[೯] ಎಂದು ಪರಿಗಣಿಸಲಾಗಿದೆ. ಬಳ್ಳಾರಿ ಪರಿಸರದಲ್ಲಿ ಪ್ರಾಗಿತಿಹಾಸ ಕಾಲದಲ್ಲಿಯೇ ಕಂಡುಕೊಂಡ ತಾಮ್ರ, ಕಬ್ಬಿಣ, ಚಿನ್ನ, ಬೆಳ್ಳಿ ಮೊದಲಾದ ಲೋಹದ ಉತ್ಪಾದನೆ ಹೆಚ್ಚಿನ ಪ್ರಮಾಣದಲ್ಲಿತ್ತು. ಇಲ್ಲಿ ದೊರೆಯುವ ವಿವಿಧ ಬಗೆಯ ಖನಿಜಗಳ ವಿವರ ಇಂತಿದೆ.

೧. ಕಬ್ಬಿಣದ ಅದಿರು : ಸಂಡೂರು, ನಂದಿಹಳ್ಳಿ, ಹೊಸಪೇಟೆ ಸುತ್ತಮುತ್ತ.

೨. ಮ್ಯಾಂಗನೀಸ್ : ದೇವಗಿರಿ, ಸುಬ್ರಾಯನಹಳ್ಳಿ, ರಾಮಘಡ.

೩. ತಾಮ್ರ : ಹರಪನಹಳ್ಳಿ, ಚಿನ್ನಾಪುರ, ರಾಮಘಡ, ತಾಮ್ರಪರ್ವತ.

೪. ಸತು : ಮೆಟ್ರಿ.

೫. ಮ್ಯಾಗ್ನಸೈಟ್ : ತೋರಣಗಲ್ಲು.

೬. ಬಂಗಾರ : ಶೃಂಗಮರಡಿ, ಚಿಗಟೇರಿ, ತಾರಾನಗರ, ಕಂಚೂರು.

೭. ಜಿಪ್ಸಮ್ : ತಾಳೂರು, ಉತ್ತನೂರು, ಹಿರೇಹಡಗಲಿ, ಚಿನ್ನಹಳ್ಳಿ.

೮. ಜೇಡಿಮಣ್ಣು : ಹಲಗಾವಲು, ಸುಬ್ರಾಯನಹಳ್ಳಿ, ಯರನಹಳ್ಳಿ, ತುಂಬರಗುದ್ದಿ.

೯. ಸುಣ್ಣದ ಕಲ್ಲು : ತೋರಣಗಲ್ಲು, ಮೆಟ್ರಿ, ಉಬ್ಬಲಗಂಡಿ, ದೇವಲಾಪುರ, ಮಲ್ಲಪ್ಪನ ಗುಡ್ಡ.

೧೦. ಬಳಪದ ಕಲ್ಲು : ಅರಸಾಪುರ, ನೀಲಗುಂದ.

೧೧. ಹಳದಿ ಓಕರ್ : ತುಮರಿ, ರಾಮಘಡ, ಒಲದುಗುಡ್ಡ

೧೨. ರೆಡ್ ಓಕರ್ : ಜಾನಿಕುಂಟಿ, ಜಂಬುನಾಥನಹಳ್ಳಿ, ವ್ಯಾಸನಕೆರೆ, ಕರಡಿಕೊಳ್ಳ.

೧೩. ಬೆಣಚಕಲ್ಲು : ನಾಗಲಾಪುರ, ರಾಜಾಪುರ, ಗಾದಿಗನೂರು, ಅಂಕಮನಾಳ.

೧೪. ಮಿನರಲ್ ವಾಟರ್ : ಹರಿಶಂಕರ, ಜೋಗಿಕೊಳ್ಳಿ.

೧೫. ವಜ್ರ : ದೇವಗೊಂಡನಹಳ್ಳಿ.

೧೬. ಬೆರಾಯ್ಸ್ : ತಿಮ್ಮಾಪುರ.[೧೦]

ಉದ್ದಿಮೆ : ವಸಾಹತುಶಾಹಿ ಹಾಗೂ ಆಧುನಿಕ ತಂತ್ರಜ್ಞಾನದ ಸಹಾಯದಿಂದ ಬೃಹತ್ ಕೈಗಾರಿಕೆಗಳು ಬಳ್ಳಾರಿ ಜಿಲ್ಲೆಯಲ್ಲಿ ಸ್ಥಾಪಿತವಾಗಿರುವುದರಿಂದ ಜಿಲ್ಲೆಯ ಆರ್ಥಿಕ ಅಭಿವೃದ್ಧಿಯಲ್ಲಿ ಕೈಗಾರಿಕೆಗಳು ಪ್ರಮುಖ ಪಾತ್ರ ವಹಿಸಿವೆ. ಅವುಗಳ ಕೀರ್ತಿಯು ಉದ್ದಿಮೆದಾರರ ಬೆಳವಣಿಗೆ ಮತ್ತು ಶಾಂತಿಯುತ ಕೆಲಸದ ವಾತಾವರಣ, ಆರೋಗ್ಯಕರ ಕಾರ್ಮಿಕ ಸಂಬಂಧಗಳು, ಕಬ್ಬಿಣದ ಅದಿರು, ಮ್ಯಾಂಗನೀಸ್ ಅದಿರು, ಕೆಂಪು ಆಕ್ಸೈಡ್ ಫೆರೋಸ ಆಕ್ಸೈಡ್ ಇತ್ಯಾದಿಯಂತಹ ಹೇರಳವಾದ ಖನಿಜ ಸಂಪನ್ಮೂಲಗಳ ಲಭ್ಯತೆ, ತಾಂತ್ರಿಕವಾಗಿ ನುರಿತ ಮಾನವ ಶಕ್ತಿಗಳಂತಹ ಮುಖ್ಯ ಅಂಶಗಳಿಗೆ ಸಲ್ಲುತ್ತದೆ. ಬಳ್ಳಾರಿ ಜಿಲ್ಲೆಯು ಭಾರತದ ಶೇಕಡಾ ೨೫ರಷ್ಟು ಕಬ್ಬಿಣದ ಅದಿರು ನಿಕ್ಷೇಪಗಳನ್ನು ಹೊಂದಿದೆ. ಅದಲ್ಲದೆ, ಫೈನ್ಸ್ ಅದಿರು, ಕೆಂಪು ಆಕ್ಸೈಡ್, ಬಿಳಿ ಸ್ಫಟಿಕಗಳು ಬಳ್ಳಾರಿ ಜಿಲ್ಲೆಯಲ್ಲಿ ಸುಲಭವಾಗಿ ಲಭ್ಯವಿವೆ.

ಜಿಲ್ಲೆಯಲ್ಲಿ ಗಣಿಗಾರಿಕೆ, ಜವಳಿ ಮತ್ತು ಸಿದ್ಧ ಉಡುಪು, ವಾಹನ ತಯಾರಿಕೆ ಮತ್ತು ವಾಹನ ಬಿಡಿ ಭಾಗಗಳು, ಕೃಷಿ ಮತ್ತು ಆಹಾರ ಸಂಸ್ಕರಣೆಗಳು ಪ್ರಮುಖ ಕೈಗಾರಿಕಾ

ಘಟಕಗಳಾಗಿವೆ. ಅದರಂತೆ ರಾಜ್ಯದಲ್ಲಿ ಕಬ್ಬಿಣ, ಸಿಮೆಂಟ್, ಅಕ್ಕಿ ಗಿರಣಿ, ಸಿದ್ಧ ಉಡುಪು ಮತ್ತು ಜವಳಿ ತಯಾರಿಕೆಗೆ ಬಳ್ಳಾರಿ ಜಿಲ್ಲೆಯು ಆಧಾರವಾಗಿದೆ. ಶಾತವಾಹನ ಇಸಪ್ಯಾಟ ಲಿಮಿಟೆಡ್, ಈ ಪ್ರದೇಶದಲ್ಲಿ ಹೇರಳವಾಗಿ ಲಭ್ಯವಿರುವ ಕಬ್ಬಿಣದ ಅದಿರನ್ನು ಉಪಯೋಗಿಸಿ ಗಟ್ಟಿ ಕಬ್ಬಿಣ ತಯಾರಿಕೆಯ ಪ್ರಥಮ ಘಟಕವಾಗಿದೆ. ಗಟ್ಟಿ ಕಬ್ಬಿಣ ತಯಾರಿಕೆಯಲ್ಲಿ ನಂತರದ ಸ್ಥಾನವನ್ನು ಕಿರ್ಲೋಸ್ಕರ ಘಟಕ ಹೊಂದಿದೆ. ನಂತರದಲ್ಲಿ ಜೆ.ಎಸ್. ಡಬ್ಲ್ಯೂ ಲಿಮಿಟೆಡ್, ಜೆ.ಎಸ್. ಡಬ್ಲ್ಯೂ ಸಿಮೆಂಟ್ಸ್, ಎಮ್.ಎಸ್.ಪಿ.ಎಲ್. ಬಳ್ಳಾರಿ ಉಷ್ಣಶಕ್ತಿ ನಿಗಮ, ಸಿರುಗುಪ್ಪ ಸಕ್ಕರೆ ಮತ್ತು ರಸಾಯನಿಕೆಗಳು, ಮುಕುಂದ ಸ್ಟೀಲ್ಸ, ಕಲ್ಯಾಣಿ ಸ್ಟೀಲ್ಸ್ ಸಂಡೂರಿನ ಮ್ಯಾಂಗನೀಸ್ ಮತ್ತು ಐರನ್ ಓರ್ಸ್ ಲಿಮಿಟೆಡ್, ಹೊಸಪೇಟೆ ಸಕ್ಕರೆ ಕಾರ್ಖಾನೆ, ಸಂಡೂರು - ಹೊಸಪೇಟೆ - ತಾರಾನಗರ - ದೇವಗಿರಿ ಪ್ರದೇಶಗಳಲ್ಲಿ ನಡೆಯುತ್ತಿರುವ ಖನಿಜ ನಿಕ್ಷೇಪಗಳ ಗಣಿಗಾರಿಕೆ ಉದ್ಯಮ, ಕಂಪ್ಲಿ - ಸಿರುಗುಪ್ಪ ಪ್ರದೇಶಗಳಲ್ಲಿನ ರೈಸ್ ಮಿಲ್‌ಗಳು, ಬಳ್ಳಾರಿಯ ಜೀನ್ಸ್ ಉದ್ಯಮ, ಇವು ಜಿಲ್ಲೆಯ ಅಭಿವೃದ್ಧಿಯ ಮಾದರಿಗಳಾಗಿವೆ. ಏಕೆಂದರೆ, ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುವ ಖನಿಜ ಸಂಪತ್ತನ್ನು ಚೀನಾ, ದಕ್ಷಿಣ ಕೋರಿಯಾ, ಜಪಾನ್ ಮತ್ತು ಆಸ್ಟ್ರೇಲಿಯಾ ದೇಶಗಳಿಗೆ ರಫ್ತು ಮಾಡಲಾಗುತ್ತಿದೆ. ಈ ಪ್ರದೇಶದಲ್ಲಿ ಹತ್ತಿಯು ವಾಣಿಜ್ಯ ಬೆಳೆಯಾಗಿದ್ದು, ಅದು ಜಿಲ್ಲೆಯಲ್ಲಿರುವ ೪೮ ಜವಳಿ ಆಧಾರಿತ ಕೈಗಾರಿಕೆಗಳಿಗೆ ಕಚ್ಚಾ ಸರಕನ್ನು ಒದಗಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ೩೧-೦೩-೨೦೧೨ರ ಅವಧಿಗೆ ೧೩ ಬೃಹತ್ ಕೈಗಾರಿಕೆಗಳು, ೧೦೯ ಮಧ್ಯಮ ಮತ್ತು ದೊಡ್ಡ ಕೈಗಾರಿಕೆಗಳು ಮತ್ತು ೧೬,೬೨೦ ಚಿಕ್ಕ ಕೈಗಾರಿಕೆಗಳಿದ್ದವು.[೧೧] ಈ ಎಲ್ಲಾ ಕೈಗಾರಿಕೆಗಳಲ್ಲಿನ ಒಟ್ಟು ಬಂಡವಾಳ ಹೂಡಿಕೆಯು ರೂ. ೨,೮೪೫.೯೦ ಕೋಟಿ ಇದ್ದು, ೧,೭೧,೦೧೩ ಜನರಿಗೆ ಉದ್ಯೋಗ ಅವಕಾಶಗಳನ್ನು ಒದಗಿಸಿವೆ. ಉನ್ನತವಾದ ಪ್ರಾಚೀನ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಬಳ್ಳಾರಿ ಜಿಲ್ಲೆಗೆ ಆಧುನಿಕತೆ ಅಭಿವೃದ್ಧಿಯ ಹೆಸರಿನಲ್ಲಿ ಉಂಟು ಮಾಡುತ್ತಿರುವ ಈ ಸಂಕೀರ್ಣ ವಿದ್ಯಮಾನಗಳು ಜಿಲ್ಲೆಯ ಭವಿಷ್ಯವನ್ನು ಕರಾಳವಾಗಿಸುತ್ತಿವೆ. ಏಕೆಂದರೆ, ಈ ಪ್ರದೇಶದಲ್ಲಿ ನಡೆಯುತ್ತಿರುವ ಭೂ ಅಗೆತಗಳು ಸಾರ್ವಜನಿಕ ಜೀವನ ಕ್ರಮವನ್ನು ಅಸ್ತವ್ಯಸ್ತಗೊಳಿಸುತ್ತಿವೆ.

**ಭಾಷೆ** : ಕನ್ನಡ - ತೆಲುಗು ದ್ವಿಭಾಷಿಕ ಪರಿಸರದವರಾದ ಬಳ್ಳಾರಿ ಜನತೆಯ ಭಾಷೆಯು ಪ್ರಾಚೀನ ಕಾಲದಿಂದಲೂ ಬಹುಭಾಷಿಕ ಪರಂಪರೆಯಾಗಿ ಬೆಳೆದು ನಿಂತಿರುವುದನ್ನು ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಬಹುಭಾಷಾ ಪಂಡಿತರೇ ಸಾಕ್ಷಿಗಳಾಗಿದ್ದಾರೆ.[೧೨] ತೆಲುಗು-ಕನ್ನಡದ ದ್ವಿಭಾಷಾ ಪರಿಸರವು ಇಲ್ಲಿನ ಜನಸಮುದಾಯಗಳ ದೈನಿಕ ಪರಿಸರದಲ್ಲಿ ಬೆರೆತು ಹೋಗಿದೆ. ವಸಾಹತುಶಾಹಿಯ ಸಂದರ್ಭದಲ್ಲಿ ಆಡಳಿತ ಕೇಂದ್ರವಾಗಿದ್ದ ಮದರಾಸ್‌ನಲ್ಲಿ ಆಡಳಿತ, ವ್ಯವಹಾರ, ಶಿಕ್ಷಣ ಮೊದಲಾದ ಚಟುವಟಿಕೆಗಳಲ್ಲಿ ತೊಡಗುವುದು ಅತ್ಯಂತ ಕಷ್ಟಕರ ಸಂಗತಿಯಾಗಿತ್ತು. ಹಾಗಾಗಿ ಆಂಗ್ಲರ ಆಡಳಿತೆಯಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿ ಪರಿಣಮಿಸಿದ್ದು, ಚರಿತ್ರೆಯಲ್ಲಿ ಒಂದು ಮಹತ್ವಪೂರ್ಣ ಅಧ್ಯಾಯ. ಆರಂಭದಲ್ಲಿ ಕನ್ನಡ ಪ್ರದೇಶಗಳ ಅಧಿಕಾರ ವಹಿಸಿಕೊಂಡ ಬ್ರಿಟಿಷ್ ಅಧಿಕಾರಿಗಳು ಕನ್ನಡ ಭಾಷೆ, ಸಂಸ್ಕೃತಿಯನ್ನು

ಅರಿಯಲು ಯತ್ನಿಸಿದರು. ಸ್ಥಳೀಯ ಬುದ್ಧಿಜೀವಿಗಳು ಹಾಗೂ ವಿದ್ವಾಂಸರು ವಿದೇಶಿ ಸಂಪರ್ಕ ಭಾಷೆಯಾದ ಇಂಗ್ಲೀಷ್ ಮತ್ತು ತಮಿಳು ಭಾಷೆಯನ್ನು ಕಲಿಯತೊಡಗಿದ್ದರು. ಆಧುನಿಕ ವಿದ್ಯಾಮಾನಗಳ ಸಂದರ್ಭದ ಹಿನ್ನೆಲೆಯಿಂದ ತುಂಗಭದ್ರಾ ಅಣೆಕಟ್ಟಿನ ಕೆಲಸ ಕಾರ್ಯಗಳಲ್ಲಿ ಆಂಧ್ರ ಮತ್ತು ತಮಿಳು ಭಾಷಿಕರು ಭಾಗವಹಿಸಿದ್ದರು. ಇವರಿಗೆ ಅನಿವಾರ್ಯವಾಗಿ ಕನ್ನಡ ಭಾಷೆಯನ್ನು ಕಲಿಯಬೇಕಾಗಿತ್ತು. ಜಿಲ್ಲೆಯ ಪ್ರವಾಸಿ ತಾಣವಾದ ಹಂಪಿಯ ವೀಕ್ಷಣೆಗೆ ಬರುವ ವಿದೇಶಿ ಆಂಗ್ಲ ಭಾಷಿಕರಾದ ಆಡಳಿತಾಧಿಕಾರಿಗಳು, ವಿದ್ವಾಂಸರು ಹಾಗೂ ಪ್ರವಾಸಿಗರು ಇಲ್ಲಿನ ಬಹುಭಾಷಾ ಸಂಸ್ಕೃತಿಯ ಭಾಗವಾಗಿ ಹೋಗಿದ್ದಾರೆ.

**ಬಳ್ಳಾರಿ ಸ್ಥಳನಾಮ**

ಬಳ್ಳಾರಿ ಸ್ಥಳನಾಮ ಕುರಿತು ದಂತಕಥೆ ಮತ್ತು ಶಾಸನಗಳ ಉಲ್ಲೇಖಗಳು ಪ್ರಚಲಿತದಲ್ಲಿವೆ. ಬಳ್ಳಾರಿ ಪಟ್ಟಣದ ಮೊದಲ ಹೆಸರು 'ಬಳ್ಳಾರೆ' ಎಂಬುದು ಕ್ರಿ.ಶ. ೧೨ನೆಯ ಶತಮಾನದ ಕೋಳೂರು,[೧೩] ಕುರುಗೋಡು,[೧೪] ಬೈಲೂರು[೧೫] ಮತ್ತು ಸಿಂದಿಗಿರೆ[೧೬] ಶಾಸನಗಳಲ್ಲಿ ಬಳ್ಳಾರೆ ಎಂಬ ಸ್ಥಳನಾಮ ಹಾಗೂ ಮಜ್ಜಪರಸ, ರಾಚಮಲ್ಲರಸ, ಬೀವರಸ ಮೊದಲಾದ ಸಿಂದವಂಶದ ಅರಸರಿಗೆ ಈ ಪಟ್ಟಣವು ಆಡಳಿತ ಕೇಂದ್ರವಾಗಿತ್ತೆಂದು ಉಲ್ಲೇಖಿತಗೊಂಡಿದೆ.

ಬಳ್ಳಾರಿ ಗುಡ್ಡದ ಮೇಲೆ ಬಳಸುರನೆಂಬ ರಾಕ್ಷಸನು ಆಶ್ರಯ ಮಾಡಿಕೊಂಡು ಇಲ್ಲಿ ಜನರಿಗೆ ಉಪದ್ರವ ಕೊಡುತ್ತಿದ್ದನು. ಸ್ವರ್ಗಲೋಕದಿಂದ ದೇವಕನ್ಯೆಯರು ಇಚ್ಛಾವಿಹಾರಲ್ಲಿ ವಿಹರಿಸುತ್ತ ಈ ಪರ್ವತದ ಮೇಲೆ ಖೇಚರ ಮಾರ್ಗದಲ್ಲಿ ಹೋಗುತ್ತಿರುವಾಗ ರಾಕ್ಷಸನು ಕಾಮಾತುರನಾಗಿ ಅವರಿಗೆ ಉಪದ್ರ ಕೊಟ್ಟಿದ್ದರಿಂದ ಅವರು ದೇವೇಂದ್ರನಲ್ಲಿ ಮೊರೆ ಇಟ್ಟರು. ಆಗ ದೇವೇಂದ್ರ ಬಳಾಸುರನನ್ನು ವಜ್ರಾಯುಧದಿಂದ ಸಂಹಾರ ಮಾಡಿದ್ದರಿಂದ ಈ ಗುಡ್ಡಕ್ಕೆ ಬಳ್ಳಾರಿ(ಬಳಾರಿ)ಯೆಂಬ ನಾಮ ಪ್ರಸಿದ್ಧಿ ಹೊಂದಿತೆಂದು[೧೭] ಬಳ್ಳಾರಿ ಕೈಫಿಯತ್ತು ತಿಳಿಸುತ್ತದೆ.

ಬಳ್ಳಾರಿ ಎಂಬ ಹೆಸರು ಬಂದಿದ್ದಕ್ಕೆ ಐತಿಹ್ಯ ಹೀಗಿದೆ. "ಬಳ್ಳಾರಿಗೆ ಸಮೀಪವಿರುವ ಕೋಳೂರಿನಲ್ಲಿ ಒಬ್ಬ ಶಿವಭಕ್ತನಿದ್ದ, ಅವನ ಹೆಸರು ಬಳ್ಳೇಶ ಮಲ್ಲಯ್ಯ, ಈತನು ಶಿವಲಿಂಗ ಪೂಜೆಯಾದ ನಂತರವೇ ಊಟ ಸೇವಿಸುತ್ತಿದ್ದನಂತೆ. ಬಳ್ಳಾರಿ ಬಂದ ಮಲ್ಲೇಶ ಶಿವಲಿಂಗವಿಲ್ಲದ್ದರಿಂದ ತನ್ನ ಬಳ್ಳವನ್ನೇ ಬೋರಲಾಗಿಟ್ಟ ಅದನ್ನೇ ಲಿಂಗವೆಂದು ಭಾವಿಸಿ ಭಕ್ತಿಯಿಂದ ಪೂಜೆ ಮಾಡುತ್ತಾನೆ. ಇವನ ಭಕ್ತಿಗೆ ಮೆಚ್ಚಿದ ಶಿವ ಪ್ರತ್ಯಕ್ಷನಾಗುತ್ತಾನೆ. ಹೀಗೆ ಶಿವನು ಬಳ್ಳದಲ್ಲಿ ಪ್ರತ್ಯಕ್ಷನಾದುದರಿಂದ ಈ ಬಳ್ಳೇಶನಿಂದಾಗಿ ಬಳ್ಳಾರಿ ಎಂಬ ಹೆಸರು ಬಂದಿತೆಂಬ ಕಥೆ ಇದೆ. ಬಳ್ಳಾರಿಯ ಕೋಟೆಯಲ್ಲಿ ಮಲ್ಲೇಶ್ವರ ದೇವಾಲಯವಿರುವುದನ್ನು ಇಂದಿಗೂ ಕಾಣುತ್ತೇವೆ.

ಡಾ. ಎಂ.ಎಂ. ಕಲಬುರ್ಗಿಯವರು ಬಳರಿ, ಬಳಾರಿ, ಬಟರಿ ಈ ಹೆಸರುಗಳಲ್ಲಿ 'ಬಟರಿ' ಎಂಬುವುದು ಸಂಸ್ಕೃತದಂತೆ, ಬಳರಿ, ಬಳಾರಿ ಎಂಬವು ದ್ರಾವಿಡದಂತೆ ಭಾಸವಾಗುತ್ತವೆ. ಇಲ್ಲಿ ಭಟ್ಟಾರಿಕಾ>ಬಟರಿ>ಬಳರಿ>ಬಳಾರಿ ಎಂದು ರೂಪ ವ್ಯತ್ಯಾಸ ಸಂಭವಿಸಿರಬಹುದು[೧೮]

ಎಂಬ ಅಭಿಪ್ರಾಯವನ್ನು ನೀಡಿದ್ದಾರೆ. ಇಲ್ಲಿ 'ಭಟಾರಿ' ಎಂದರೆ ದುಷ್ಟಶಕ್ತಿಯ ವೈರಿ ಎಂದರ್ಥ. ಪ್ರಾಚೀನ ಕಾಲದಲ್ಲಿ 'ಬಳಾರಿ' ದೇವತೆಯ ಆರಾಧನೆ ಈ ಜಿಲ್ಲೆಯಲ್ಲಿ ಹೆಚ್ಚು ಆಚರಣೆಯಲ್ಲಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಹರಪನಹಳ್ಳಿ ತಾಲೂಕಿನ ಸತ್ತೂರು ಗ್ರಾಮದ ಕ್ರಿ.ಶ. ೧೦೪೪ರ ಶಾಸನದಲ್ಲಿ ಬಳಾರಿ ದೇವತೆಯನ್ನು 'ಬನದ ಬಳಾರಿ'[೧೯] ಎಂದು ಉಲ್ಲೇಖಿತಗೊಂಡಿರುವುದರಿಂದ ಪಟ್ಟಣದ ಆದಿದೇವತೆ ದುರ್ಗಮ್ಮ ಅಥವಾ ಬಳ್ಳಾರಮ್ಮನ ಹೆಸರಿನಿಂದ ಬಳ್ಳಾರಿ ಎಂದು ಪ್ರಾಪ್ತವಾಗಿದೆ. ಬ್ರಿಟಿಷರ ಕಾಲದಲ್ಲಿ ಬಳ್ಳಾರಿ ಆಂಗ್ಲ ಭಾಷೆಯ ಬೆಲ್ಲಾರಿಯಾಗಿತ್ತು. ೨೦೧೪ರಲ್ಲಿ ಕರ್ನಾಟಕ ರಾಜ್ಯ ಸರಕಾರದ ವಿಶೇಷ ಆದೇಶದಿಂದ ಬಳ್ಳಾರಿಯಾಗಿದೆ.

**ಬಳ್ಳಾರಿ ನಗರದಲ್ಲಿ ಬ್ರಿಟಿಷ್ ಅಧಿಕಾರಿಗಳ ವ್ಯಕ್ತಿನಾಮದ ಬಡಾವಣೆಗಳು**

ಬಳ್ಳಾರಿ ನಗರದಲ್ಲಿ ಬ್ರಿಟಿಷ್ ಕಲೆಕ್ಟರ್‌ರುಗಳ ಆಳ್ವಿಕೆಯ ಪ್ರಭಾವವು ವ್ಯಕ್ತಿನಾಮಗಳ ಮೇಲೆ ಆಗಿರುವುದು ಕಂಡುಬಂದಿದೆ. ಆಡಳಿತ ಸೇವೆ, ಕಾನೂನು, ರಕ್ಷಣೆ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿರುವ ಅಧಿಕಾರಿಗಳ ಹೆಸರುಗಳನ್ನು ತಮ್ಮ ಅಭಿರುಚಿಗೆ ಅನುಗುಣವಾಗಿ ಸ್ವೀಕರಿಸುವುದುಂಟು. ಉದಾ:- ಮನ್ರೋ, ಮುನ್ರಪ್ಪ.

**ಬ್ರೂಸ್‌ಪೇಟೆ:** ಬಳ್ಳಾರಿ ಜಿಲ್ಲಾ ನ್ಯಾಯಾಧೀಶರಾಗಿದ್ದ ಜೆ. ಬ್ರೂಸ್ ಅವರು ಕ್ರಿ.ಶ. ೧೮೧೯ರಲ್ಲಿ ಸ್ಥಳೀಯರಿಗೆ ಉತ್ತಮ ನ್ಯಾಯವನ್ನು ಒದಗಿಸಿ, ಅನ್ಯಾಯದ ವಿರುದ್ಧ ಪ್ರತಿಭಟಿಸುತ್ತಿದ್ದರು. ಇದರ ಜೊತೆಗೆ ಇದೇ ಪ್ರದೇಶದಲ್ಲಿ ವಾಸವಾಗಿದ್ದ ಕಾರಣಕ್ಕಾಗಿ ಸ್ಥಳೀಯರು ಬ್ರೂಸ್‌ಪೇಟೆ ಎಂದು ಕರೆದರು. ಇವರ ಹೆಸರಿನಲ್ಲಿ ಬ್ರೂಸ್‌ಪೇಟೆ ಪೊಲೀಸ್ ಠಾಣೆಯನ್ನು ಸಹ ಸ್ಥಾಪಿಸಿರುವುದು ಶ್ಲಾಘನೀಯ.

**ಮಿಲ್ಲರ್‌ಪೇಟೆ:** ಎ. ಮಿಲ್ಲರ್ ಎಂಬುವರು ದಿನಾಂಕ ೨೨-೨-೧೮೪೦ ರಿಂದ ૭-೮-೧೮೪೮ರವರೆಗೆ ಬಳ್ಳಾರಿ ಜಿಲ್ಲಾ ಕಲೆಕ್ಟರ್‌ರಾಗಿ ಕಾರ್ಯನಿರ್ವಹಿಸಿದ್ದಾರೆ. ಇವರು ತಮ್ಮ ಆಡಳಿತದ ಅವಧಿಯಲ್ಲಿ ಆಡಳಿತವನ್ನು ಸ್ವ-ಇಚ್ಛೆಯಂತೆ ನಡೆಸದೆ ಜನಪರವಾಗಿ ನಡೆಸಲು ಸೆಣಸಾಡಿದನು. ಬಳ್ಳಾರಿ ನಗರ, ಪಟ್ಟಣ ಮತ್ತು ಗ್ರಾಮಗಳು ವಿಕಾಸಗೊಂಡಿದ್ದು ಇವರ ಅವಧಿಯಲ್ಲಿಯೇ ಹಾಗಾಗಿ ಬಳ್ಳಾರಿ ಪಟ್ಟಣವನ್ನು ಕ್ರಮಬದ್ಧವಾಗಿ ನಿಯೋಜಿಸಲು ಕಾರ್ಯೋನ್ಮುಖನಾದನು. ತರುವಾಯ ಲೋಕೋಪಯೋಗಿ ಇಲಾಖೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿ, ಆ ಮೂಲಕ ಕಿರುನಗರ, ರಸ್ತೆ, ಬಡಾವಣೆಗಳನ್ನು ಪ್ರತ್ಯೇಕಿಸಿದನು. ಇವರು ಬಳ್ಳಾರಿ ನಗರ ಬೆಳವಣಿಗೆಗೆ ಪ್ರಮುಖ ಪಾತ್ರ ವಹಿಸಿದ್ದ ಕಾರಣಕ್ಕಾಗಿ ಬಳ್ಳಾರಿಯ ಒಂದು ಬಡಾವಣೆಗೆ ಮಿಲ್ಲರ್‌ಪೇಟೆ ಎಂದು ಕರೆಯಲ್ಪಟ್ಟರು. ಇದು ಪ್ರಸ್ತುತವು ಪ್ರಚಲಿತದಲ್ಲಿದೆ.

**ಕೌಲ್‌ಬಜಾರ್:** ಬಳ್ಳಾರಿ ನಗರದ ಮೂಲ ಗ್ರಾಮ ಕೌಲ್‌ಬಜಾರ್ ಆಗಿತ್ತು. ಆರಂಭದಿಂದಲೂ ಇಲ್ಲಿ ಎಲ್ಲಾ ಸಮುದಾಯದವರು ವಾಸವಾಗಿರುವುದನ್ನು ಗಮನಿಸಲಾಗಿದೆ. ಜೆ. ಕೆಲ್‌ಶಾಲ್ ಎಂಬುವರು ದಿನಾಂಕ ೧೬-೯-೧೮೬೯ರಿಂದ ೧೫-೭-೧೮೭೧ರವರೆಗೆ ಜಿಲ್ಲಾ ಕಲೆಕ್ಟರ್‌ರಾಗಿ

ಕಾರ್ಯನಿರ್ವಹಿಸಿದರು. ಇವರ ಆಡಳಿತವು ಜನಪರವಾಗಿದ್ದ ಕಾರಣಕ್ಕಾಗಿ ಸ್ಥಳೀಯರು ಕೆಲ್‌ಶಾಲ್‌ರವರು ನೆಲೆಗೊಂಡಿದ್ದ ಪ್ರದೇಶಕ್ಕೆ ಕೌಲ್‌ಪೇಟೆ ಎಂದು ಕರೆದರು. ಪ್ರಸ್ತುತವು ಕೌಲ್‌ಬಜಾರ್ ಎಂದು ಕರೆಯುತ್ತಿದ್ದಾರೆ.

**ಸತ್ಯನಾರಾಯಣಪೇಟೆ:** ಸಿ. ಸತ್ಯನಾರಾಯಣ ಚೌದರಿ ಎಂಬ ನ್ಯಾಯಾಧೀಶರು ೧೯೫೦ರಿಂದ ೧೯೫೩ರವರೆಗೆ ಬಳ್ಳಾರಿ ಜಿಲ್ಲಾ ನ್ಯಾಯಾಲಯದಲ್ಲಿ ಸತ್ಯ, ನ್ಯಾಯ, ನೀತಿಗಳ ಪರಿಪಾಲನೆಯಲ್ಲಿ ಪ್ರಾಮಾಣಿಕತೆಯಿಂದ ಸ್ಥಳೀಯರಲ್ಲಿ ಯಾವುದೇ ಸಮಸ್ಯೆಗಳು ಎದುರಾದರು. ಅವುಗಳಿಗೆ ಸಮರ್ಥವಾಗಿ ನ್ಯಾಯವನ್ನು ದೊರಕಿಸಿಕೊಡುತ್ತಿದ್ದರು. ಈ ಹಿನ್ನೆಲೆಯಲ್ಲಿ ಅವರ ಸೇವೆಯನ್ನು ಮೆಚ್ಚಿ ಅವರು ವಾಸವಾಗಿದ್ದ ಸ್ಥಳಕ್ಕೆ ಅಥವಾ ಪ್ರದೇಶಕ್ಕೆ ಸತ್ಯನಾರಾಯಣಪೇಟೆ ಎಂದು ಕರೆದರು. ಈಗ ಇದು ನಗರದ ಹೃದಯ ಭಾಗದಲ್ಲಿರುವುದನ್ನು ಗಮನಿಸಲಾಗಿದೆ.

### ೨.೨. ಪ್ರಾಗಿತಿಹಾಸ

ಪ್ರತಿಯೊಂದು ಪ್ರದೇಶದ ಜನಜೀವನ ಮತ್ತು ಸಂಸ್ಕೃತಿಗಳು ಅಲ್ಲಿನ ಭೌಗೋಳಿಕ ಸನ್ನಿವೇಶ, ಮೇಲ್ಮೈ ಲಕ್ಷಣ, ವಾಯುಗುಣ ಇವುಗಳಿಂದ ಬಹುಮಟ್ಟಿಗೆ ಪ್ರಭಾವಗೊಂಡಿರುತ್ತದೆ. ಬಳ್ಳಾರಿ ಪ್ರದೇಶವು ಫಲವತ್ತಾದ ಭೂಮಿ, ಇಲ್ಲಿನ ಉತ್ಪನ್ನಗಳು, ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಅರಣ್ಯ ಸಂಪತ್ತು ಮೊದಲಾದ ಭೌಗೋಳಿಕ ಅನುಕೂಲತೆಯಿಂದ ಒಳಗೊಂಡಿರುವುದರಿಂದ ಪ್ರಾಚೀನ ಕಾಲದಿಂದಲೂ ಆದಿ ಮಾನವನು ಈ ಪರಿಸರದಲ್ಲಿ ವಾಸಸ್ಥಾನವಾಗುವುದಕ್ಕೆ ಕಾರಣವಾಯಿತು. ಬಳ್ಳಾರಿ ನೆಲದಲ್ಲಿ ಆದಿ ಮಾನವನು ತನ್ನ ಜೀವನಕ್ಕೆ ಬೇಕಾದ ಅವಶೇಷಗಳನ್ನು ರಚಿಸಿ, ಬಳಸಿ, ಬಿಟ್ಟು ಹೋಗಿರುವ ನೆಲೆಗಳನ್ನು ಗುರುತಿಸಿ, ಶೋಧಿಸಿ, ಉತ್ಖನನದಲ್ಲಿ ದೊರೆತ ಅವಶೇಷಗಳಿಂದ ಆತನ ಸಾಂಸ್ಕೃತಿಕ ಬೆಳವಣಿಗೆಯನ್ನು ವಿವಿಧ ಹಂತಗಳಲ್ಲಿ ಗುರುತಿಸಿದ್ದಾರೆ.

ಅಂದಿನಿಂದ ಇಂದಿನವರೆಗೆ ನಿಂತರವಾಗಿ ಮಾನವನ ನೆಲೆಯಾಗಿರುವ ಬಳ್ಳಾರಿ ಪರಿಸರದಲ್ಲಿ ರಾಬರ್ಟ್ ಬ್ರೂಶ್‌ಫೂಟ್, ಮಾರ್ಟಿಮರ್ ವ್ಹೀಲರ್, ಡಾ. ಎಂ.ಎಚ್. ಕೃಷ್ಣ, ಡಾ. ಅ. ಸುಂದರ ಮುಂತಾದ ಪುರಾತತ್ವಶಾಸ್ತ್ರಜ್ಞರು ಹಾಗೂ ಸಂಶೋಧಕರು ಹಲವಾರು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆ ಹಚ್ಚಿರುವುದಲ್ಲದೆ, ಇನ್ನೂ ಅನೇಕ ಪ್ರಾಗಿತಿಹಾಸಿಕ ನೆಲೆಗಳಿರುವ ಸುಳಿವು ನೀಡಿದ್ದಾರೆ.

ಹಳೆ ಶಿಲಾಯುಗ : ಕರ್ನಾಟಕದಲ್ಲಿ ಆದಿಹಳೆಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಗಳನ್ನು ಗುರುತಿಸಲಾಗಿದೆ. ಅದರಲ್ಲೂ ಬಳಲಾರಿ ಜಿಲ್ಲೆಯು ಆಗಿನ ಮದರಾಸ್ ಪ್ರಾಂತ್ಯದ ಇತರ ಜಿಲ್ಲೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಶಿಲಾಯುಗದ ನೆಲೆಗಳನ್ನು ಮತ್ತು ಅವಶೇಷಗಳನ್ನು ಹೊಂದಿದೆ ಎಂದು ೧೯೦೮ರ ಭಾರತದ ಇಂಪೀರಿಯಲ್ ಗೆಜೆಟಿಯರ್ ತಿಳಿಸುತ್ತದೆ. ಭಾರತದ ಪೂರ್ವ ಇತಿಹಾಸದ (Pre-History) ಪಿತಾಮಹನೆಂದು ಕರೆಯಲ್ಪಡುವ

ರಾಬರ್ಟ್ ಬ್ರೂಸ್‌ಫೂಟ್‌ರವರು ಇಡೀ ದಕ್ಷಿಣ ಭಾರತವನ್ನು ಕುದುರೆ ಹಾಗೂ ಕಾಲ್ನುಡಿಗೆಯಲ್ಲಿ ಕ್ಷೇತ್ರಾಧ್ಯಯನ ಮಾಡುವಾಗ ಬಳ್ಳಾರಿ ಜಿಲ್ಲೆಯಲ್ಲಿ ಸುಮಾರು ೭೭ ಪ್ರಾಗಿತಿಹಾಸ ನೆಲೆಗಳನ್ನು ಗುರುತಿಸಿ, ಅವುಗಳಲ್ಲಿ ೩೬ ನೆಲೆಗಳು ಪ್ರಮುಖವಾಗಿವೆ ಎಂದು ತಿಳಿಸುತ್ತಾನೆ.[೨೦] ಹಂಪಿ, ಬಳ್ಳಾರಿ, ದರೋಜಿ, ಜೋಗ, ನಿಂಬಾಪುರ, ಹಂಪಸಾಗರ, ಹಳಕುಂದಿ, ಗಾದಿಗನೂರು, ಬಾದನಹಳ್ಳಿಗುಡ್ಡಿ, ಬೆಳಗಲ್ಲು, ನಿಟ್ಟೂರು ಮೊದಲಾದ ಹಳೆಶಿಲಾಯುಗದ ನೆಲೆಗಳನ್ನು ಶೋಧಿಸಿ, ಅಲ್ಲಿ ದೊರೆತ ಉಪಕರಣಗಳನ್ನು ಸಂಗ್ರಹಿಸಲಾಯಿತು.[೨೧] ಈ ಹಂತದ ಮಾನವನ ದೈನಂದಿನ ಕಾರ್ಯ ಚಟುವಟಿಕೆಯನ್ನು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆ ಸಂಸ್ಕೃತಿಯೆಂದು ಕರೆಯಲಾಗಿದೆ.

ಮಧ್ಯ ಶಿಲಾಯುಗ : ಬಳ್ಳಾರಿಯ ಬಳಿಯ ಸಂಗನಕಲ್ಲು, ಕುಡತಿನಿ, ಕಾರಿಗನೂರು, ತಿಮ್ಮಲಾಪುರ, ಅಯ್ಯನಹಳ್ಳಿ, ತೋರಣಗಲ್ಲು, ಮಲ್ಲಾಪುರ, ಯಶವಂತಪುರ, ರಾಂಪುರ, ಮಾಡಲಗೇರಿ ಮೊದಲಾದವು ಮಧ್ಯ ಶಿಲಾಯುಗದ ನೆಲೆಗಳಾಗಿವೆ. ಮಾನವನ ಜೀವನದ ಸಾಂಸ್ಕೃತಿಕ ಮುನ್ನಡೆಯಲ್ಲಿ ಈ ಹಂತದ ಪಾತ್ರ ಗಮನಾರ್ಹವಾದುದು.

ಈ ಅವಧಿಯಲ್ಲಿ ಬೇಟೆಯಾಡುವುದು, ಮೀನು ಹಿಡಿಯುವುದು, ಆಹಾರ ಸಂಗ್ರಹಣೆ ಜೀವನದ ವ್ಯವಸ್ಥೆ ಇದ್ದಿತು.[೨೨] ಇದರಲ್ಲಿ ಮುಖ್ಯ ಬೆಳವಣಿಗೆಯೆಂದರೆ ಬೇಸಾಯ ಮಾಡುವುದು. ಇದು ನಂತರದ ನೂತನ ಶಿಲಾಯುಗದಲ್ಲಿ ಅಭಿವೃದ್ಧಿಯಾಯಿತು.

ನೂತನ ಶಿಲಾಯುಗ : ನವಶಿಲಾಯುಗ ಸಂಸ್ಕೃತಿಯ ಹಂತವು ಅದರ ಮುಖ್ಯ ಲಕ್ಷಣವಾದ ಕಲ್ಲಿನ ಉಪಕರಣಗಳಿಂದ ಸೂಚಿಸಲ್ಪಟ್ಟಿದೆ. ಹಳೆ ಶಿಲಾಯುಗದ ಮಾನವ ಸಣ್ಣಕಣಗಳಿಂದ ಕೂಡಿದ ಬೆಣಚುಕಲ್ಲನ್ನು; ಸೂಕ್ಷ್ಮ ಶಿಲಾಯುಗದವರು ಚಾಲ್ಸಿಡನಿ ಮತ್ತು ಜಾಸ್ಪರ್, ಚೆರ್ಟ್, ರಕ್ತಶಿಲೆ ಮೊದಲಾದ ಉತ್ತಮ ಜಾತಿಯ ಪ್ರಶಸ್ತ ಶಿಲೆಗಳನ್ನು ಆರಿಸಿಕೊಂಡಿದ್ದಾರೆ. ಈ ಕಾಲದ ಮಾನವನು ಡಯೋರೇಟ್ ಬಸಾಲ್ಟ್, ಸ್ಲೇಟ್, ಬಳಪದಕಲ್ಲು, ಶೇಲ್, ಬಿಳಿಕಲ್ಲು, ಮರಳುಕಲ್ಲು ಮತ್ತು ಬೆಣಚುಕಲ್ಲನ್ನು ಉಪಯೋಗಿಸುತ್ತಿದ್ದರೂ ಉತ್ತಮ ಕಣಗಳಿಂದ ಕೂಡಿದ ಕಪ್ಪು - ಹಸಿರು ಕರಿಶಿಲೆಯಲ್ಲಿ ತನ್ನ ಉಪಕರಣಗಳನ್ನು ರೂಪಿಸಲು ಇಷ್ಟಪಡುತ್ತಿದ್ದನು.[೨೩] ಶಿಲಾಯುಗದ ಮಾನವ ತನ್ನ ಆಯುಧಗಳಿಗೆ ಮೆರುಗು ಕೊಡಲು ಬಂಡೆಯ ಮೇಲೆ ಉಜ್ಜಿದ ಗೆರೆಗಳು ಬಳ್ಳಾರಿಯ ಎತ್ತರ ಬೆಟ್ಟದಲ್ಲಿ ಸಿಕ್ಕಿವೆ. ಇವುಗಳನ್ನು ರಾಬರ್ಟ್ ಬ್ರೂಸ್ ಫೂಟ್ ಅವರು(೯೧೬) ೧೮೮೯ನೆಯ ಇಸವಿ ಫೆಬ್ರವರಿ ೯ನೆಯ ತಾರೀಖು ಆಲೂರು ತಾಲೂಕು ಹೆಲಾಳ ಗುಂಡಿಯಲ್ಲಿ ಕಂಡುಹಿಡಿದರು.[೨೪] ಕುಡುತಿನಿ, ಕಪಗಲ್ಲು, ಸಂಗನಕಲ್ಲು, ಕತ್ತಳಿ, ತೆಕ್ಕಲಕೋಟೆ, ನಿಟ್ಟೂರು, ದರೋಜಿ, ಕುರುಗೋಡು, ಕಾಕುಬಾಳ, ತಿಮ್ಮಾಪುರ, ಬೆಳಗಟ್ಟಿ ಮೊದಲಾದ ನೆಲೆಗಳಲ್ಲಿ ಉಜ್ಜಿನಯಿಗೊಳಿಸಿದ ಶಿಲಾ ಉಪಕರಣಗಳು ಕಂಡು ಬಂದಿವೆ.[೨೫] ಈ ಹಂತದಲ್ಲಿ ಪಾಶುಪಾಲನೆ ಮತ್ತು ಕೃಷಿ ಅಭಿವೃದ್ಧಿ ಹೊಂದಿದ್ದರಿಂದ ಇದನ್ನು ಆರಂಭಿಕ ಸಂಘಟಿತ ಸಮಾಜವೆಂದು ಕರೆಯಲಾಗಿದೆ.

ತಾಮ್ರ ಮತ್ತು ಕಂಚಿನ ಯುಗ : ತಾಮ್ರ ಶಿಲಾಯುಗದಲ್ಲಿ ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ ಅದರಿಂದ ಆಭರಣ, ಆಯುಧ ಮೊದಲಾದವುಗಳನ್ನು ಮಾಡಲಾಗುತ್ತಿತ್ತು. ಈ ಹಂತದ ಜನ ಜೀವನದಲ್ಲಿ ಕಾಣುವ ಖಚಿತ ಬೆಳವಣಿಗೆಯೆಂದರೆ ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ನಿರ್ಮಾಣ ಮಾಡಲಾಗಿದೆ. ಬ್ರಹ್ಮಗಿರಿ, ಸಂಗನಕಲ್ಲು ಮತ್ತು ಮಸ್ಕಿ ನಿವೇಶನಗಳನ್ನು ಉತ್ತಮ ಉದಾಹರಣೆಯಾಗಿ ಕೊಡಬಹುದು. ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ನಡೆದ ಭೂ ಶೋಧನೆಯಲ್ಲಿ ಸಿಕ್ಕಿರುವ ತಾಮ್ರ ಮತ್ತು ಕಂಚು, ಕಪ್ಪು ಬಣ್ಣದಿಂದ ಸಿಂಗರಿಸಿದ ಕೆಂಪು ಕುಂಭಗಳು, ಟ್ರಾಪ್ ಶಿಲೆಯ ಮೆರುಗುಕೊಟ್ಟ ಕಲ್ಲು ಕೊಡಲಿಗಳು ಇತ್ಯಾದಿ ವಸ್ತುಗಳಿಂದ ತಾಮ್ರ ಶಿಲಾಯುಗದ ಸಂಸ್ಕೃತಿಯ ವೈಶಿಷ್ಟ್ಯವು ಕಂಡು ಬರುತ್ತದೆ.[೨೬]

ಬೃಹತ್ ಶಿಲಾಯುಗ : ಸತ್ತ ವ್ಯಕ್ತಿಯನ್ನು ವಿವಿಧ ನಮೂನೆಯ ಗುಂಡಿಯಲ್ಲಿ ಹೂಳಿ ಅದರ ಮೇಲೆ ವೃತ್ತಾಕಾರದ, ಚೌಕಾಕಾರದ ಹಾಗೂ ಆಯತಾಕಾರದ ಕಲ್ಲಿನ ಸಣ್ಣ ರಚನೆಗಳನ್ನು ನಿರ್ಮಾಣ ಮಾಡುತ್ತಿದ್ದುದು ಕರ್ನಾಟಕ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಅಯ್ಯಪ್ಪನಹಳ್ಳಿ, ಕುಮತಿ, ಕಳಸಗ್ರಾಮ, ಹುಲಿಕುಂಟೆ, ಕಪಗಲ್ಲು, ಸಂಗನಕಲ್ಲು, ನಿಟ್ಟೂರು, ಮಲ್ಲಾಪುರ, ಹಂಪಸಾಗರ, ಹೂವಿನಹಡಗಲಿ, ನವಲಿ ಮುಂತಾದವು ಬೃಹತ್ ಶಿಲಾಯುಗದ ನೆಲೆಗಳು[೨೭] ಹೊಸಪೇಟೆ, ಬಳ್ಳಾರಿ, ಸಂಡೂರು ಬೆಟ್ಟಗಳಲ್ಲಿ ಹೇರಳವಾಗಿ ಕಬ್ಬಿಣದ ಅದಿರು ದೊರೆತಿರುವುದರಿಂದ ಬೃಹತ್ ಶಿಲಾಯುಗದ ಹಂತದಿಂದಲೇ ಇಲ್ಲಿ ಕಬ್ಬಿಣದ ಬಳಕೆ ಆರಂಭವಾದಂತೆ ತೋರುತ್ತದೆ.

## ೨.೩. ಪ್ರಾಚೀನ ಕಾಲದ ಇತಿಹಾಸ

ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಉದಯಗೊಳಂನಲ್ಲಿ ದೊರೆತ ಅಶೋಕನ ಶಾಸನಗಳಿಂದಾಗಿ ಜಿಲ್ಲೆಯ ಚಾರಿತ್ರಿಕಯುಗ ಮೌರ್ಯರಿಂದಲೇ ಆರಂಭವಾಗುತ್ತದೆ. ಈ ಪ್ರದೇಶವನ್ನೊಳಗೊಂಡಂತೆ ಸುತ್ತಮುತ್ತಲಿನ ಸ್ಥಳಗಳಾದ ಉದಯಗೊಳಂ, ನಿಟ್ಟೂರು, ಕೊಪ್ಪಳ, ಸಿದ್ಧಾಪುರ, ಬ್ರಹ್ಮಗಿರಿ, ಮಸ್ಕಿ, ಜಟ್ಟಿಂಗರಾಮೇಶ್ವರ, ಸನ್ನತಿಗಳಲ್ಲಿ ಅಶೋಕನ ಶಾಸನಗಳು ದೊರೆತಿವೆ. ಇದರಿಂದ ಈ ಪ್ರದೇಶ ನೇರವಾಗಿ ಮೌರ್ಯರ ಆಡಳಿತಕ್ಕೆ ಒಳಪಟ್ಟ ಸಂಗತಿ ಸ್ಪಷ್ಟವಾಗುತ್ತದೆ. ಕ್ರಿ.ಪೂ. ೧ನೆಯ ಮತ್ತು ಕ್ರಿ.ಶ. ೩ನೆಯ ಶತಮಾನದಲ್ಲಿ ಕರ್ನಾಟಕದ ಬಳ್ಳಾರಿ ಮತ್ತು ಆಂಧ್ರಪ್ರದೇಶವು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೆನ್ನುವುದಕ್ಕೆ ಪಲ್ಲವರಿಗೆ ಸಂಬಂಧಿಸಿದ ಹಿರೇಹಡಗಲಿಯ ಪ್ರಾಕೃತ ಶಾಸನದಲ್ಲಿ ಶಾತವಾಹನೀರಠ್ಠ[೨೮] ಮತ್ತು ಆಲೂರು ತಾಲೂಕಿನ(ಪ್ರಸ್ತುತ ಕರ್ನೂಲ್ ಜಿಲ್ಲೆಯ) ಮ್ಯಾಕದೋಣಿ ಶಾಸನದಲ್ಲಿ "ಶಾತವಾಹನೀಹಾರ"[೨೯]ವೆಂದು ಉಲ್ಲೇಖ ಗೊಂಡಿರುವುದರಿಂದ ಈ ಪ್ರದೇಶವು ಶಾತವಾಹನರ ನೇರ ಆಳ್ವಿಕೆಗೆ ಒಳಪಟ್ಟು, ಇಲ್ಲಿಂದಲೇ ರಾಜಕೀಯ ಚಟುವಟಿಕೆಗಳು ಆರಂಭವಾಗಿರಬಹುದೆಂಬ ಅನುಮಾನಕ್ಕೆ ಎಡೆಮಾಡಿದೆ. ಶಾತವಾಹನರ ನಂತರ ಈ ಪ್ರದೇಶವನ್ನು ಪಲ್ಲವರು ಆಳ್ವಿಕೆ ನಡೆಸಿದ್ದರೆಂಬುದು ಹಿರೇಹಡಗಲಿಯ

ಪ್ರಾಕೃತ ಶಾಸನದಿಂದ ಮತ್ತು ಹಳೆಯ ಬಳ್ಳಾರಿ ಜಿಲ್ಲೆಯಲ್ಲಿದ್ದ ಆಲೂರು ತಾಲೂಕಿನ ಮ್ಯಾಕದೋಣಿ ಶಾಸನವು ಸಹ ಪಲ್ಲವರಿಗೆ ಸೇರಿದ್ದು, ಬಳ್ಳಾರಿ ಪ್ರದೇಶ ಪಲ್ಲವರ ವಶದಲ್ಲಿತ್ತೆಂಬುದನ್ನು ಸೂಚಿಸುತ್ತದೆ. ಕರ್ನಾಟಕದ ಉತ್ತರ ಭಾಗದಲ್ಲಿ ಕದಂಬರು ಅಧಿಕಾರಕ್ಕೆ ಬರುತ್ತಿದ್ದಂತೆ ಗಂಗರು ಕಾವೇರಿ ನದಿ ಭಾಗಗಳನ್ನೊಳಗೊಂಡ ಆಗ್ನೇಯ ಭಾಗದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ, ಸುಮಾರು ೨೦೦ ವರ್ಷಗಳ ಕಾಲ ಆಳ್ವಿಕೆ ಮಾಡಿ ನಂತರ ಆದಿ ಚಾಲುಕ್ಯ, ರಾಷ್ಟ್ರಕೂಟ, ಅರಸು ಮನೆತನಗಳ ಅಧೀನರಾಗಿ ರಾಜ್ಯವಾಳಿದರು. ಇವರ ರಾಜ್ಯವನ್ನು ಶಾಸನಗಳಲ್ಲಿ "ಗಂಗವಾಡಿ-೯೬೦೦೦[೩೦]ವೆಂದು ಕರೆಯಲಾಗಿದೆ. ಬಳ್ಳಾರಿ ಪ್ರದೇಶವು ಗಂಗರ ಅಧೀನದಲ್ಲಿತ್ತು ಎಂಬುದಕ್ಕೆ ಯಾವುದೇ ಸಮಕಾಲೀನ ಆಧಾರಗಳು ದೊರೆತಿಲ್ಲ. ಆದರೆ, ಚಾಲುಕ್ಯರ ಕ್ರಿ.ಶ. ೧೦೫೫ರ ಶಾಸನದಲ್ಲಿ ದುರ್ವಿನೀತನು ಕೋಗಳಿಯಲ್ಲಿ ಬಸದಿಯೊಂದನ್ನು ಕಟ್ಟಿಸಿದ ವಿವರವಿದೆ.[೩೧] ಈ ಶಾಸನದಿಂದ ಬಳ್ಳಾರಿ ಜಿಲ್ಲೆಯು ಗಂಗರ ಆಳ್ವಿಕೆಗೆ ಒಳಪಟ್ಟಿದ್ದ ಬಗ್ಗೆ ಪುಷ್ಟಿ ನೀಡುತ್ತದೆ.

ಬನವಾಸಿ ಕದಂಬರು ಕನ್ನಡ ನಾಡನ್ನು ಆಳಿದ ಮೊದಲ ಅರಸು ಮನೆತನ. ಕದಂಬರೂ, ಗಂಗರೂ, ಹೆಚ್ಚು ಕಡಿಮೆ ಒಂದೇ ಕಾಲದಲ್ಲಿ ಅಧಿಕಾರಕ್ಕೆ ಬಂದರು. ಉತ್ತರ ವಲಯದಲ್ಲಿ ಕದಂಬರು, ದಕ್ಷಿಣದಲ್ಲಿ ಗಂಗರು ಕರ್ನಾಟಕವನ್ನು ಹಂಚಿಕೊಂಡಂತೆ ಆಳ್ವಿಕೆಯನ್ನು ಆರಂಭಿಸಿದರು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಧಿಕಾರಕ್ಕೆ ಬಂದ ಕದಂಬರು ಕನ್ನಡ ನಾಡಿನ ಪ್ರಥಮ ಚಕ್ರವರ್ತಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಕದಂಬರು ತಮ್ಮ ರಾಜ್ಯವನ್ನು ಪಶ್ಚಿಮ ಕದಲಿನಿಂದ ಬಳ್ಳಾರಿ ಜಿಲ್ಲೆಯ ಉಚ್ಚಂಗಿದುರ್ಗದವರೆಗೂ ವಿಸ್ತರಿಸಿದರು. ಇದಕ್ಕೆ ಬನವಾಸಿ-೧೨೦೦೦ ಎಂದು ಕರೆದರು.[೩೨] ಕಾಕುತ್ಸವರ್ಮನ(ಕ್ರಿ.ಶ. ೪೩೫-೫೫) ಪುತ್ರ ಕುಮಾರವರ್ಮ ಉಚ್ಚಂಗಿಯಲ್ಲಿದ್ದು, ಆಳುತ್ತಿದ್ದನೆಂದು ಮೊರೆಸ್ ಅವರ ಅಭಿಪ್ರಾಯವಾಗಿದೆ. ಕುಮಾರವರ್ಮನ ಮಗ ಮಾಂಧಾತರಾಜ ಉಚ್ಚಂಗಿದುರ್ಗದ ಅಧಿಪತಿಯಾಗಿದ್ದಾಗ ಅತ್ರೆಯಗೋತ್ರದ ಪ್ರಿಯಂಬಕ ಸ್ವಾಮಿಯೆಂಬ ಬ್ರಾಹ್ಮಣನಿಗೆ ಕಗ್ಗಿಪಾಳ್ಗಳಿನಿ ಗ್ರಾಮದಲ್ಲಿ ಭೂದಾನ ಮಾಡಿದನು.[೩೩] ಹೀಗೆ ಬಳ್ಳಾರಿ ಪರಿಸರದಲ್ಲಿ ಆಳ್ವಿಕೆ ಮಾಡಿದ ಕದಂಬರು ಮುಂದೆ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೋಗಳು-೫೦೦ರ ಮಹಾಮಂಡಳೇಶ್ವರರಾಗಿದ್ದರು. ಬಾದಾಮಿ ಚಾಲುಕ್ಯರು ಬನವಾಸಿ ಕದಂಬರ ನಂತರ ಅಧಿಕಾರಕ್ಕೆ ಬಂದರು. ಕ್ರಿ.ಶ. ಆರನೆಯ ಶತಮಾನದಲ್ಲಿ ಪ್ರಬುದ್ಧಮಾನಕ್ಕೆ ಬಂದ ಚಾಲುಕ್ಯರು. ಕರ್ನಾಟಕ ಸಂಸ್ಕೃತಿಯ ಉತ್ಕರ್ಷಕ್ಕೆ ಕಾರಣಕರ್ತರಾದರು. ಇವರ ಪರಮಾಧಿಕಾರ ಉತ್ತರದಲ್ಲಿ ನರ್ಮದಾ ತೀರದಿಂದ ದಕ್ಷಿಣದಲ್ಲಿ ಕಾವೇರಿ ನದಿಬಯಲಿನವರೆಗೂ ವ್ಯಾಪಿಸಿತ್ತು. ಕ್ರಿ.ಶ. ೫೪೩ರಿಂದ ೭೫೭ರವರೆಗೆ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರು ಬಳ್ಳಾರಿ ಪ್ರದೇಶದಲ್ಲಿ ಅಧಿಕಾರ ಸ್ಥಾಪಿಸಿದ್ದರ ಬಗ್ಗೆ ಕುರುಗೋಡಿನ ಶಾಸನವೊಂದರಲ್ಲಿ ಸತ್ಯಾಶ್ರಯನ ಉಲ್ಲೇಖ ಬರುತ್ತದೆ. ಇದು ಬಹುಶಃ ಚಾಲುಕ್ಯ ಕೀರ್ತಿವರ್ಮನ ಕಾಲದ್ದಾಗಿರಬೇಕು. ಇದನ್ನು ಬಿಟ್ಟರೆ ಉತ್ತಂಗಿಯ ವಿಷ್ಣುಶಿಲ್ಪ, ಸಂಡೂರಿನ ಕುಮಾರಸ್ವಾಮಿ ದೇವಾಲಯ ಸಮುಚ್ಚಯದ ಪಾರ್ವತಿ ದೇವಾಲಯದ ಶಾಸನ, ಲಿಪಿ ಹಾಗೂ ಶಿಲ್ಪಗಳ ಆಧಾರದ ಮೇಲೆ ಈ ಭಾಗದಲ್ಲಿ

ಬಾದಾಮಿ ಚಾಲುಕ್ಯರ ಆಳ್ವಿಕೆ ಇತ್ತೆಂಬುದು ದೃಢವಾಗುತ್ತದೆ.[೩೪] ರಾಷ್ಟ್ರಕೂಟರ ಪ್ರಮುಖ ಅರಸ ದಂತಿದುರ್ಗನು ಕ್ರಿ.ಶ. ೭೫೭ರಲ್ಲಿ ಬಾದಾಮಿ ಚಾಲುಕ್ಯರ ಕೊನೆಯ ಅರಸನಾದ ಇಮ್ಮಡಿ ಕೀರ್ತಿವರ್ಮನನ್ನು ಸೋಲಿಸಿ, ಏಲಾಪುರ(ಎಲ್ಲೋರ)ದಲ್ಲಿ ಸಾಮ್ರಾಜ್ಯವನ್ನು ಸ್ಥಾಪಿಸಿದನು.[೩೫] ಮುಂದೆ ಮಳಖೇಡವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ ಇವರು ಎರಡು ಶತಮಾನಗಳಿಗೂ ಹೆಚ್ಚು ಕಾಲ ಆಳ್ವಿಕೆ ಮಾಡಿದರು. ಬಳ್ಳಾರಿ ಪರಿಸರದಲ್ಲಿ ರಾಷ್ಟ್ರಕೂಟರ ಮನೆತನಕ್ಕೆ ಸಂಬಧಿಸಿದ ೧೨ ಶಾಸನಗಳು ಕಂಡು ಬಂದಿವೆ. ಅವು ರಾಷ್ಟ್ರಕೂಟ ಮುಮ್ಮಡಿ ಇಂದ್ರ, ಮೂರನೆಯ ಕೃಷ್ಣ, ಅವನ ತಮ್ಮ ಖೊಟ್ಟಿಗ ಹಾಗೂ ಕೃಷ್ಣನ ಮಗ ಇಂದ್ರನ ಕಾಲದವಾಗಿವೆ. ಈ ಶಾಸನಗಳು ಬಾಗಿಳಿ, ಕುಡಿತಿನಿ, ಕಡಬಗೆರೆ, ಬೆರಸ್ತಹಳ್ಳಿ ಮತ್ತು ಕೊಳಗಲ್ಲು ಗ್ರಾಮಗಳಲ್ಲಿ ದೊರೆತಿವೆ.[೩೬] ಕುಮಾರಸ್ವಾಮಿ ಬೆಟ್ಟದಲ್ಲಿ ರಾಷ್ಟ್ರಕೂಟರ ಕಾಲದ ಕುಮಾರಸ್ವಾಮಿ ಅಥವಾ ಕಾರ್ತಿಕೇಯನ ದೇವಾಲಯವಿರುವುದು ಗಮನಾರ್ಹ.

ಬಳ್ಳಾರಿ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದ ಬಹಳಷ್ಟು ಶಾಸನಗಳು ಹಾಗೂ ದೇವಾಲಯಗಳು ಕಂಡು ಬಂದಿವೆ. ಈ ಪ್ರದೇಶದಲ್ಲಿ ಕ್ರಿ.ಶ. ೯೭೬ರ ಕುಡತಿನಿ ಶಾಸನವೇ ಈ ಮನೆತನದ ಮೊದಲ ಶಾಸನವಾಗಿದೆ. ಇದರಲ್ಲಿ ಅವನನ್ನು ಆಹವಮಲ್ಲದೇವನೆಂದು ಕರೆಯಲಾಗಿದೆ.[೩೭] ಇವರ ಸಾಮಂತರಾಗಿ ನೊಳಂಬರು, ನೊಳಂಬವಾಡಿ ೩೨,೦೦೦, ಕದಂಬಳಿಗೆ ೧೦೦೦, ಕೋಗಳಿ ೫೦೦, ಬಲ್ಲಕುಂದೆ ೩೦೦, ಕುದಿಯಹರವಿ ೭೦ ಮತ್ತು ಕರಿವಿಡಿ ೩೦ನ್ನು ಆಳುತ್ತಿದ್ದರು.[೩೮] ಹೀಗೆ ಕುರುಗೋಡು ಪ್ರದೇಶವನ್ನೊಳಗೊಂಡಂತೆ ಈ ಎಲ್ಲಾ ಪ್ರದೇಶವು ಕಲ್ಯಾಣ ಚಾಲುಕ್ಯರ ನೇರ ಆಡಳಿತಕ್ಕೆ ಒಳಗಾಗಿದ್ದವು. ಕಲಚೂರಿಗಳು ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ್ದರು ಎಂಬುದಕ್ಕೆ ಜಿಲ್ಲೆಯಲ್ಲಿ ದೊರೆತ ನಾಲ್ಕು ಶಾಸನಗಳಿಂದ ದೃಢಪಟ್ಟಿದೆ. ಈ ಪ್ರದೇಶದಲ್ಲಿ ಬಿಜ್ಜಳನ ಕ್ರಿ.ಶ. ೧೧೬೩ರ ನೀಲಗುಂದ ಶಾಸನ ಮೊದಲನೆಯದು. ಇವನ ಇನ್ನೊಂದು ಶಾಸನ ತೆಕ್ಕಲಕೋಟೆಯಲ್ಲಿದೆ. ಕ್ರಿ.ಶ. ೧೧೭೬ರ ಶಾಸನದಲ್ಲಿ ರಾಚಮಲ್ಲನನ್ನು ರಾಯಮುರಾರಿ ಸೋವಿದೇವನ ಮಂಡಳೀಕನೆಂದು ಹೆಸರಿಸಿದೆ. ಕ್ರಿ.ಶ. ೧೧೭೭ರ ಶಾಸನದಲ್ಲಿ ಸುಂಕಮದೇವನ ಉಲ್ಲೇಖವಿದ್ದು ಆತನು ಕಲ್ಯಾಣದಿಂದ ಆಳುತ್ತಿದ್ದಂತೆ ಉಲ್ಲೇಖಿಸಿದೆ.[೩೯] ಇವು ಅವರ ಆಳ್ವಿಕೆಯ ಬಗ್ಗೆ ಸ್ಪಷ್ಟೀಕರಿಸುತ್ತವೆ.

ಬಳ್ಳಾರಿ ಜಿಲ್ಲೆಯಲ್ಲಿ ಕಾಣಬರುವ ಪ್ರಮುಖ ಮಾಂಡಳಿಕ ವಂಶಗಳಲ್ಲಿ ಸಿಂದರದೂ ಒಂದು. ಇವರು ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ ಮತ್ತು ಕಲಚೂರಿಗಳ ಮಾಂಡಳೀಕರಾಗಿ ಬಳ್ಳಾರಿಯ ಕುರುಗೋಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿರುತ್ತಾರೆ. ಪಾಂಡ್ಯರು ನೊಳಂಬರ ತರುವಾಯ ಬಳ್ಳಾರಿ ಪ್ರದೇಶದಲ್ಲಿ ಪ್ರಬಲವಾಗಿ ಬೆಳೆದವರು. ಉಚ್ಚಂಗಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಕಲ್ಯಾಣ ಚಾಲುಕ್ಯರೊಡನೆ, ನೆರೆಯ ಗುತ್ತರೊಡನೆ ವೈವಾಹಿಕ ಸಂಬಂಧ ಬೆಳೆಸುವ ಮೂಲಕ ತಮ್ಮ ರಾಜ್ಯದ ಎಲ್ಲೆಗಳನ್ನು ವಿಸ್ತರಿಸಿಕೊಂಡರು.

ಸೇವುಣರು ವಿಶೇಷವಾಗಿ ದೇವಗಿರಿಯ ಯಾದವರು ಎಂದೇ ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗಿದ್ದಾರೆ. ಮಹಮ್ಮದೀಯ ಚರಿತ್ರಕಾರರಾದ ಅಮೀರ್ ಖುಸ್ರು, ಫಿರಿಷ್ಟ, ಬರನಿ ಮುಂತಾದವರು ಇವರನ್ನು ಯಾದವರೆಂದು ಕರೆದರು. ಅನಂತರ ಬಂದ ಚರಿತ್ರೆಕಾರರು ಇದನ್ನೇ ಅನುಸರಿಸುತ್ತಾ ಬಂದಿದ್ದಾರೆ. ಸೇವುಣರ ಸಮಕಾಲೀನ ರಾಜವಂಶಗಳಾದ ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಕಾಕತೀಯರು ಮುಂತಾದವರ ಶಾಸನಗಳಲ್ಲಿ ದೇವಗಿರಿಯ ಯಾದವರು ಎಂಬ ಹೆಸರು ಕಾಣುವುದಿಲ್ಲ. ಹೇಮಾದ್ರಿಯ ರಾಜಪ್ರಶಸ್ತಿಯಲ್ಲಿ ಇವರನ್ನು ಸೇವುಣರೆಂದು ಕರೆಯಲಾಗಿದೆ. ಈ ರಾಜವಂಶದ ಎರಡನೆಯ ದೊರೆಯಾದ ಸೇವುಣ ಚಂದ್ರನಿಂದ ಈ ವಂಶಕ್ಕೆ ಸೇವುಣ ವಂಶವೆಂಬ ಹೆಸರು ಬಂದಿತು ಎಂದು ಹೇಮಾದ್ರಿಯು ಸ್ಪಷ್ಟಪಡಿಸಿದ್ದಾನೆ. ಸೇವುಣರ ಶಾಸನಗಳಲ್ಲಿ ಯಾದವ ನಾರಾಯಣ ಎನ್ನುವ ಬಿರುದಿನೊಂದಿಗೆ ಅವರು ಸೇವುಣ ಚಕ್ರವರ್ತಿ, ಸೇವುಣ ವಂಶದರಸು ಎಂಬ ಹೆಸರಿನಿಂದ ಕರೆಯಲ್ಪಟ್ಟಿದ್ದಾರೆ.[೪೦] ಸೇವುಣರಿಗೆ ಸಂಬಂಧಪಟ್ಟ ಕೆಲವು ಶಾಸನಗಳು ಈ ಪರಿಸರದಲ್ಲಿ ಕಂಡು ಬಂದಿವೆ. ಅವುಗಳಲ್ಲಿಯೂ ಕೂಡ 'ಯಾದವ ನಾರಾಯಣ' ಹಾಗೂ 'ಸೇವುಣ ಚಕ್ರವರ್ತಿ' ಎಂದು ಉಲ್ಲೇಖವಾಗಿವೆ. ಸೇವುಣರ ಅರಸ ಬಿಲ್ಲಮನು ಇವನ ಮಗ ಸಿಂಘಣ(೧೨೧೦-೧೨೪೭)ನ ಶಾಸನ ಕುರುವತ್ತಿಯಲ್ಲಿದೆ. ಇದರಲ್ಲಿ 'ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಳೇಶ್ವರ ಪ್ರತಾಪ ಚಕ್ರವರ್ತ್ತಿ ವೀರನಾರಾಯಣ ಸಿಂಹದೇವ' ಎಂದು ಉಲ್ಲೇಖವಾಗಿದೆ. ಸೇವುಣರು ಮತ್ತೊಬ್ಬ ಅರಸನಾದ ರಾಮದೇವ ಅಥವಾ ರಾಮಚಂದ್ರನನ್ನು ಈ ಪ್ರದೇಶದ ಶಾಸನಗಳು ಯಾದವ ನಾರಾಯಣ ಪ್ರತಾಪ ಚಕ್ರವರ್ತ್ತಿ ವೀರರಾಮನಾಥನೆಂದು ಕರೆದಿವೆ.[೪೧] ನಂತರ ಹೊಯ್ಸಳರು, ಚಾಲುಕ್ಯರು, ಕಾಕತೀಯರು ಇವರನ್ನು ಸೇವುಣರೆಂದೇ ಕರೆದಿದ್ದಾರೆ.

ಹೊಯ್ಸಳರ ಕಾಲದ ಬಳ್ಳಾರಿ ಜಿಲ್ಲೆಯಲ್ಲಿ ದೊರೆತ ಶಾಸನಗಳಲ್ಲಿ ತಮ್ಮನ್ನು 'ಯಾದವ ನಾರಾಯಣ', 'ಯಾದವ ಕುಲಾಂಬರದ್ಯುಮಣಿ', 'ದ್ವಾರವತಿಪುರವಾಧೀಶ್ವರ' ಮುಂತಾದ ಬಿರುದುಗಳಿಂದ ಗುರುತಿಸಿಕೊಂಡಿದ್ದಾರೆ. ಹೊಯ್ಸಳರಲ್ಲಿ ವಿಷ್ಣುವರ್ಧನನನ ನಂತರ ಪಟ್ಟಕ್ಕೆ ಬಂದ ಅರಸರಲ್ಲಿ ವೀರಬಲ್ಲಾಳ ಹಾಗೂ ಇಮ್ಮಡಿ ನರಸಿಂಹ ಪ್ರಖ್ಯಾತರಾಗಿದ್ದರು. ಎರಡನೆಯ ಬಲ್ಲಾಳ ಕ್ರಿ.ಶ. ೧೧೭೭ರಲ್ಲಿ ಉಚ್ಚಗಿ ಕೋಟೆಗೆ ಮುತ್ತಿಗೆ ಹಾಕಿ ಪಾಂಡ್ಯರನ್ನು ಸೋಲಿಸಿದನು. ಈತನು ಉಚ್ಚಂಗಿಯ ಮೇಲೆ ಸಾಧಿಸಿದ ವಿಜಯವನ್ನು ಅನೇಕ ಹೊಯ್ಸಳ ಶಾಸನಗಳಲ್ಲಿ ಪ್ರಶಂಸಿಸಲಾಗಿದೆ. ಈ ವಿಜಯದ ನೆನಪಿಗಾಗಿ ಆತ 'ಗಿರಿದುರ್ಗಮಲ್ಲ' ಮತ್ತು 'ಶನಿವಾರಸಿದ್ಧ' ಎಂಬ ಬಿರುದುಗಳನ್ನು ಪಡೆದ.[೪೨] ಕ್ರಿ.ಶ. ೧೨ನೆಯ ಶತಮಾನದ ಹಡಗಲಿ ಶಾಸನದಲ್ಲಿ ವೀರಬಲ್ಲಾಳನ ರಾಣಿ ಪದುಮಾಲದೇವಿ ಹೊಸ ಹಡಂಗಿಲೆಯನ್ನು ಆಳುತ್ತಿದ್ದಳು.[೪೩] ಈ ರಾಣಿಯ ಕೈ ಕೆಳಗೆ ಸೋವರಸನು ಮಹಾಪ್ರಧಾನ ಭಂಡಾರಿಯಾಗಿದ್ದನೆಂದು ತಿಳಿದುಬರುತ್ತದೆ. ಈ ಪರಿಸರದಲ್ಲಿ ಹೊಯ್ಸಳರು ಕೆರೆಗಳನ್ನು ಕಟ್ಟಿಸಿ ದಾನವನ್ನು ನೀಡಿ ತಮ್ಮದೇ ಆದ ಸಾಂಸ್ಕೃತಿಕ ಕೊಡುಗೆಯನ್ನು ನೀಡಿದ್ದಾರೆ.

## ೨.೪. ಮಧ್ಯಕಾಲೀನ ಇತಿಹಾಸ

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ಭಾರತದ ಇತಿಹಾಸದಲ್ಲಿಯೇ ಒಂದು ಮಹತ್ವ ಪೂರ್ಣ ಘಟನೆ ಎಂದು ಪರಿಗಣಿಸಲಾಗಿದೆ. ಈ ಸಾಮ್ರಾಜ್ಯವನ್ನು ಕ್ರಿ.ಶ. ೧೩೩೬ರಿಂದ ೧೫೬೫ರವರೆಗೆ ಸಂಗಮ, ಸಾಳುವ, ತುಳುವ, ಅರವೀಡು ಮನೆತನದ ಅರಸರು ತುಂಗಾಭದ್ರ ನದಿಯ ಬಲದಂಡೆಯಲ್ಲಿರುವ ಹಂಪಿಯನ್ನು ಪ್ರಧಾನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶದಲ್ಲಿ ಆಳ್ವಿಕೆ ನಡೆಸಿದರು. ಇಮ್ಮಡಿದೇವರಾಯ, ಕೃಷ್ಣದೇವರಾಯ, ರಾಮರಾಯ ಈ ಸಾಮ್ರಾಜ್ಯದ ಪ್ರಮುಖ ಅರಸರಾಗಿದ್ದರು. ೧೪ನೆಯ ಶತಮಾನದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಮುಸ್ಲಿಂರ ದಾಳಿಯ ರಭಸಕ್ಕೆ ಎದೆಯೊಡ್ಡಿ ನಿಲ್ಲುವಂಥ ಸಮರ್ಥ ರಾಜಮನೆತನದ ದಕ್ಷಿಣದಲ್ಲಿರಲಿಲ್ಲ. ಅಲ್ಲಿಯವರೆಗೆ ಕರ್ನಾಟಕವನ್ನು ತನ್ನ ಬಲಿಷ್ಠ ಬಹುಗಳಿಂದ ರಕ್ಷಿಸಿದ ಹೊಯ್ಸಳರ ಬಲ ಕ್ಷೀಣಿಸಿತ್ತು. ಅಂಥ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ತಲೆಯೆತ್ತಿ ನಿಂತು, ಮುಸ್ಲಿಂಮರು ದಕ್ಷಿಣ ಭಾರತಕ್ಕೆ ನುಗ್ಗಿ ಬರದಂತೆ ತಡೆದು ಇಡೀ ದಕ್ಷಿಣ ಭಾರತವನ್ನು ಸಂರಕ್ಷಿಸಿದ ಕೀರ್ತಿ ವಿಜಯನಗರ ಸಾಮ್ರಾಜ್ಯಕ್ಕಿದೆ. ಇದರ ಉಚ್ಛ್ರಾಯದ ವೈಭವವನ್ನು ಅನೇಕ ವಿದೇಶಿ ಪ್ರವಾಸಿಗರು, ರಾಯಭಾರಿಗಳು ಹಾಗೂ ಚರಿತ್ರೆಕಾರರು ಮುಕ್ತಮನಸ್ಸಿನಿಂದ ವರ್ಣಿಸಿದ್ದಾರೆ. ಇಂಥ ದೊಡ್ಡ ಸಾಮ್ರಾಜ್ಯಕ್ಕೆ ವಿದೇಶಿಗಳಿಂದ ಬಂದು ಹೋದವರ ಸಂಖ್ಯೆ ಅಪರಿಮಿತ. ೧೫ನೆಯ ಶತಮಾನದ ಪೂರ್ವಾರ್ಧದಿಂದ ಈ ಯಾತ್ರೆ ಆರಂಭವಾಗಿ, ಸಾಮ್ರಾಜ್ಯದ ಅವನತಿಯ ಅನಂತರವೂ ಕಳೆದ ಶತಮಾನದವರೆಗೂ ಭೇಟಿ ನೀಡಿದವರ ಸಂಖ್ಯೆ ಕಡಿಮೆಯೇನಿಲ್ಲ. ಅವರಲ್ಲಿ ನಿಕೋಲೊ-ಡಿ-ಕೊಂಟೆ, ಅಬ್ದುಲ್ ರಜಾಕ್, ದುಅರ್ತೆ, ಬಾರ್ಬೋಸ, ಡೊಮಿಂಗೊ ಪೆಯಿಸ್, ನ್ಯೂನಿಜ್ ಮೊದಲಾದವರು ತಾವು ಕಂಡು ಕೇಳಿದ ಸಂಗತಿಗಳನ್ನು ದಾಖಲಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೫೬೫ರಲ್ಲಿ ನಡೆದ ತಾಳಿಕೋಟೆ ಯುದ್ಧದಲ್ಲಿ ಸೋತು ಅವನತಿಯ ನಂತರ ಈ ಪ್ರದೇಶವು ಮುಸ್ಲಿಂ ಸುಲ್ತಾನರ ಪ್ರಭಾವಕ್ಕೆ ಒಳಗಾಯಿತು. ಬಹುಮನಿಗಳ ಪತನಾನಂತರ ಅಸ್ತಿತ್ವಕ್ಕೆ ಬಂದ ದಖ್ಖನ್ನಿನ ಐದು ಷಾಹಿ ರಾಜರುಗಳ ಪೈಕಿ ವಿಜಾಪುರದ ಆದಿಲ್‌ಶಾಹಿಗಳು ಗಣ್ಯರಾದವರಾಗಿದ್ದರು. ವಿಜಯನಗರದ ಪಶ್ಚಿಮ ಹಾಗೂ ದಕ್ಷಿಣ ಪ್ರದೇಶವನ್ನು ವಿಜಾಪುರದ ಆದಿಲ್‌ಶಾಹಿ ದೊರೆಗಳು ವಶಪಡಿಸಿಕೊಂಡರು. ಹದಿನೇಳನೆಯ ಶತಮಾನದಲ್ಲಿ ಮೊಗಲರು ಈ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುವವರೆಗೂ ಇವರೇ ಆಳುತ್ತಿದ್ದರು. ವಿಜಾಪುರ ಸುಲ್ತಾನನ ರಾಜ್ಯವು ದಕ್ಷಿಣದಲ್ಲಿ ತುಮಕೂರಿನ ಸಿರಾದಿಂದ ಉತ್ತರದಲ್ಲಿ ತುಂಗಭದ್ರಾ ನದಿಯವರೆಗೂ ವಿಸ್ತರಿಸಿತು.

### ಬಳ್ಳಾರಿ ಜಿಲ್ಲೆಯ ಪಾಳೆಯಗಾರರು

ಪಾಳೆಯಗಾರರು ದಕ್ಷಿಣ ಭಾರತದಲ್ಲಿ ಹದಿನಾರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಅತ್ಯಂತ ಪ್ರಭಾವಶಾಲಿಗಳಾಗಿ ಆಳ್ವಿಕೆ ನಡೆಸಿದರು. ಕರ್ನಾಟಕದಲ್ಲಿ ನೂರಾರು ಸಣ್ಣ ಪುಟ್ಟ ಪಾಳೆಯಪಟ್ಟುಗಳು ವಿಜಯನಗರದ ಅವಧಿಯಲ್ಲಿಯೂ ಆನಂತರವೂ ಅಸ್ತಿತ್ವಕ್ಕೆ

ಬಂದವು. ಬಳ್ಳಾರಿ ಜಿಲ್ಲೆಯಲ್ಲಿ ಕುರುಗೋಡು, ಬಳ್ಳಾರಿ, ಸಂಡೂರು, ಜರಿಮಲೆ ಗುಡೆಕೋಟೆ, ಹರಪನಹಳ್ಳಿ, ಕೆಂಚನಗುಡ್ಡ, ಆನೆಗೊಂದಿ ಹಾಗೂ ರಾಯದುರ್ಗ ಎಂದು ಪಾಳೆಯಪಟ್ಟುಗಳಿದ್ದವು. ಕ್ರಿ.ಶ. ೧೯ನೆಯ ಶತಮಾನದಲ್ಲಿ ಬ್ರಿಟಿಷರು ಈ ಪಾಳೆಯಪಟ್ಟುಗಳನ್ನು ಹಂತ ಹಂತವಾಗಿ ಕೊನೆಗಾಣಿಸಿ, ಅವರಿಗೆ ಗೌರವ ವೇತನವನ್ನು ನಿಗದಿಪಡಿಸಲಾಯಿತು.[೪೪] ಗೌರವ ವೇತನವನ್ನು ಸ್ವೀಕರಿಸುವುದರೊಡನೆ ಬದಲಾದ ವ್ಯವಸ್ಥೆಗೆ ಬಹುಪಾಲು ಪಾಳೆಯಗಾರರು ಹೊಂದಿಕೊಂಡರು. ಬ್ರಿಟಿಷರು ಇವರಲ್ಲಿ ಕೆಲವರನ್ನು ಪ್ರಜಾಡಳಿತದಲ್ಲಿಯೂ ಮತ್ತೆ ಕೆಲವರನ್ನು ಸೇನಾಡಳಿತದಲ್ಲಿಯೂ ಅಧಿಕಾರಿಗಳನ್ನಾಗಿ ನೇಮಿಸಿಕೊಳ್ಳುತ್ತಿದ್ದರು.[೪೫]

### ಹೈದರ್ ಅಲಿ ಹಾಗೂ ಟಿಪ್ಪುಸುಲ್ತಾನ್

ಹನುಮಪ್ಪನಾಯಕನ ಆಳ್ವಿಕೆಯ ನಂತರ ಈತನ ತಮ್ಮ ರಾಮಪ್ಪನಾಯಕನು ಪಾಳೆಯಗಾರನಾಗಿ ಆಳಿ ಮರಣ ಹೊಂದಿದ ನಂತರ ಬಳ್ಳಾರಿಯಲ್ಲಿ ರಾಜ್ಯಕ್ಕಾಗಿ ಅಂತಃಕಲಹ ಪ್ರಾರಂಭವಾಯಿತು. ಇದನ್ನು ಅರಿತ ಹೈದರಾಲಿಯು ಶ್ರೀರಂಗಪಟ್ಟಣದಿಂದ ಸೈನ್ಯ ಸಮೇತವಾಗಿ ಬಂದು, ಹಂದರಹಾಳದ ಹತ್ತಿರ ದಂಡನ್ನು ಇಟ್ಟು, ರಾಯದುರ್ಗದವರ ಸಹಾಯ ಪಡೆದು, ಮೋಸದಿಂದ ಊರೊಳಗಿನ ಮುಖ್ಯಸ್ಥರನ್ನು ಸೆರೆಹಿಡಿದು, ಯುದ್ಧ ಮಾಡಿದನು. ಆದರೆ ಯುದ್ಧದಲ್ಲಿ ಜಯ ಸಿಗದ ಕಾರಣ ಹಿಂದಿರುಗಿದನು. ಕೆಲವು ವರ್ಷಗಳ ನಂತರ ಆದವಾನಿಯಿಂದ ಮೊಗಲರ ಬಸಾಲತ್‌ಜಂಗ್ ಬಹದ್ದೂರನು, ರಾಜಾದೇವಿಚಂದ ಮತ್ತು ಅಮೀನ್‌ಸಾಹೇಬರನ್ನು ಕಳುಹಿಸಿ ಬಳ್ಳಾರಿಗೆ ಮುತ್ತಿಗೆ ಹಾಕಿದ ಸಮಾಚಾರವನ್ನು ದಿವಾನ್ ಕೃಷ್ಣಪ್ಪನಿಂದ ತಿಳಿದ ಹೈದರಾಲಿಯು ಸೈನ್ಯ ಸಮೇತ ಬಂದು, ದೇವಿಚಂದನನ್ನು ಕೊಂದು ಬಳ್ಳಾರಿಯನ್ನು ಆಕ್ರಮಿಸಿಕೊಂಡನು.[೪೬] ಆಗ ಬಳ್ಳಾರಿಯ ಪಾಳೆಯಗಾರನಾಗಿದ್ದ ದೊಡ್ಡಪ್ಪನಾಯಕನು, ಕೋಟೆ ಬಿಟ್ಟು ತಲೆಮರಸಿಕೊಂಡು ಓಡಿ ಹೋಗಲು ಬಳ್ಳಾರಿ ಕೋಟೆಯು ಸುಲಭವಾಗಿ ಹೈದರಾಲಿಯ ವಶವಾಯಿತು. ಹೈದರಾಲಿ ಬೇಗ್ ಎಂಬುವವನನ್ನು ಬಳ್ಳಾರಿಯ ಅಧಿಪತಿಯನ್ನಾಗಿ ಮಾಡಿದನು. ಇವನ ನಂತರ ಹೈದರ್ ಬಕ್ಷ್, ರಾಣೋಜಿರಾಯ, ಮನೋಜಿರಾಯರು ಕ್ರಮವಾಗಿ ಬಳ್ಳಾರಿ ಅಧಿಕಾರಿಗಳಾಗಿದ್ದರು. ಹೈದರಾಲಿಯ ನಂತರ ಈತನ ಮಗನಾದ ಟಿಪ್ಪುಸುಲ್ತಾನನ ಆಳ್ವಿಕೆಯ ವ್ಯಾಪ್ತಿಗೆ ಒಳಪಟ್ಟಿತು ಬಳ್ಳಾರಿ. ಟಿಪ್ಪು ಸುಲ್ತಾನನು ಸಿದ್ದಿಮೋದಿಖಾನ್ ಎಂಬುವನನ್ನು ಇಲ್ಲಿಯ ಸುಬೇದಾರನನ್ನಾಗಿ ನೇಮಿಸಿದನು.

### ೨.೫. ಆಧುನಿಕ ಕಾಲದ ಇತಿಹಾಸ

### ವಸಾಹತುಶಾಹಿಯ ಅರ್ಥ

ಕನ್ನಡದ ವಸಾಹತುಶಾಹಿ ಎಂಬ ಪದ ಇಂಗ್ಲೀಷಿನ Colonialsimಗೆ ಸಂವಾದಿಯಾಗಿದೆ. Colony ಕಲೋನಿ ಎಂದರೆ, ವಸಾಹತು; ವಲಸೆಗಾರರು ನೆಲೆಸಿರುವ ಪ್ರದೇಶ;[೪೭] ವಲಸೆ ಬಂದ ಇನ್ನೊಂದು ನಾಡಿನಲ್ಲಿ ತಮ್ಮ ನಾಗರಿಕತೆಯನ್ನು ಸ್ಥಾಪಿಸುವವರ ಪ್ರದೇಶ[೪೮] ಎಂದರ್ಥ. ಒಂದು ದೇಶದ ಜನ ಮತ್ತೊಂದು ದೇಶದಲ್ಲಿ ನೆಲೆಸುವುದು; ವಸತಿ ಅಥವಾ ವಸಾಹತು

ಸ್ಥಾಪಿಸುವುದು ಎಂದರ್ಥ. ಅಂಥ ದೇಶ ಅಥವಾ ಪ್ರದೇಶವನ್ನು ವಲಸಿಗರ ನಾಡು ಅಥವಾ ವಸಾಹತು Colony ಎಂದು ಕರೆಯಲಾಗಿದೆ. ISM (ಇಜಮ್) ಎಂದರೆ, ಸಿದ್ಧಾಂತ; ನಿರ್ದಿಷ್ಟ ತತ್ವ[೪೯] ಎಂದರ್ಥ. ISM ತನ್ನಷ್ಟಕ್ಕೆ ತಾನು ಸ್ವತಂತ್ರವಾದುದಲ್ಲ, ಅದಕ್ಕೊಂದು ನಿರ್ದಿಷ್ಟ ಕಾರಣವಿರಬೇಕು. ಉದಾ:- ಸಮಾಜವಾದ, ಕೋಮುವಾದ, ಮಾರ್ಕ್ಸ್‌ವಾದ, ಮತೀಯವಾದ, ಸ್ತ್ರೀವಾದ ಮಾನವತಾವಾದ ಇತ್ಯಾದಿ ಇಲ್ಲೆಲ್ಲ ISMಗೆ ಸಹಾಯಕವಾದ ಒಂದು ನಿರ್ದಿಷ್ಟವಾದ ಕಾರಣವಿದೆ. ಆ ಕಾರಣವೇ ಕ್ರಮೇಣವಾಗಿ ಸಮಾಜದಲ್ಲಿ ಒಂದು ದೊಡ್ಡ ಸಮಸ್ಯೆಯಾಗಿಯೂ ಐಡಿಯಾಲಜಿಯಾಗಿಯೂ ರೂಪುಗೊಳ್ಳುತ್ತದೆ. Colonialism ರೂಪುಗೊಂಡಿದ್ದು ಕೂಡಾ ಇದೇ ಕ್ರಮದಲ್ಲಿ. ವಸಾಹತುಶಾಹಿ ಎನ್ನುವುದು ಆಧುನಿಕವಾದ, ಸಂಕೀರ್ಣವಾದ, ಬಂಡವಾಳ ಕೇಂದ್ರಿತವಾದ ಹಾಗೂ ವಿರೋಧಾಭಾಸಗಳಿಂದ ಕೂಡಿದ ಪರಿಕಲ್ಪನೆಯಾಗಿದೆ. ಅದು ಒಡಂಬಡಿಕೆ, ಹೇರಿಕೆ, ಬಲಪ್ರಯೋಗ ಮುಂತಾದ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದಿರುವಂತಹದ್ದು.

ವಸಾಹತುಶಾಹಿ ಎಂದರೆ ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದಲ್ಲಿ ತನ್ನ ಅಗತ್ಯ ಬೇಡಿಕೆಗಳ ಈಡೇರಿಕೆಗಾಗಿ ನೆಲಸು ನಾಡುಗಳನ್ನು ಸ್ಥಾಪಿಸಿಕೊಂಡು ಅಲ್ಲೇ ನೆಲೆನಿಲ್ಲುವಿಕೆಯನ್ನು ವಸಾಹತುಶಾಹಿ ಎಂದು ಕರೆಯಲಾಗಿದೆ. ಮತ್ತೊಂದು ಅರ್ಥದಲ್ಲಿ ಕೈಗಾರಿಕೆ, ತಂತ್ರಜ್ಞಾನ, ಆರ್ಥಿಕ, ಸೈನಿಕ ಮತ್ತು ವಿಜ್ಞಾನ ವಲಯಗಳಲ್ಲಿ ಅಭಿವೃದ್ಧಿ ಹೊಂದಿದ ದೇಶಗಳು ಅನಭಿವೃದ್ಧಿ ದೇಶಗಳ ಮೇಲೆ ಅಧಿಕಾರ ಹೇರಿ ಅಲ್ಲಿ ಉತ್ಪಾದನೆಯಾಗುವ ಸಂಪತ್ತನ್ನು ತಮ್ಮ ದೇಶಗಳ ಬೆಳವಣಿಗಾಗಿ ಕೊಂಡೆಯ್ಯುವ ಪ್ರಕ್ರಿಯೆಯೇ ವಸಾಹತುಶಾಹಿ ಎಂದು ಕರೆಯಲಾಗಿದೆ. ಆಕ್ಸ್‌ಫರ್ಡ್ ಇಂಗ್ಲೀಷ್ ನಿಘಂಟಿನಲ್ಲಿ ವಸಾಹತುಶಾಹಿ ಪರಿಕಲ್ಪನೆಯನ್ನು ಸೂಕ್ಷ್ಮವಾಗಿ ವ್ಯಾಖ್ಯಾನಿಸಲಾಗಿದೆ. ಆ ಪ್ರಕಾರ, ಒಂದು ಗುಂಪು ತನ್ನ ಮಾತೃ ಭೂಮಿಯೊಂದಿಗಿನ ಪೌರತನವನ್ನು ಉಳಿಸಿಕೊಂಡು ಇನ್ನೊಂದು ಗುಂಪಿಗೆ ಸೇರಿದ ಭೂ ಭಾಗದಲ್ಲಿ ಹೋಗಿ ನೆಲೆಸುವ ಪ್ರಕ್ರಿಯೆಯನ್ನು ವಸಾಹತುಶಾಹಿ[೫೦] ಎಂದು ಗ್ರಹಿಸಲಾಗಿದೆ. ಈ ವ್ಯಾಖ್ಯಾನವನ್ನು ಗಮನಿಸಿದಾಗ ವಸಾಹತುಶಾಹಿ ಎಂದರೆ, ಒಂದು ದೇಶ ಇನ್ನೊಂದು ದೇಶವನ್ನು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ವಶಪಡಿಸಿಕೊಂಡು ಶೋಷಿಸುವ ಒಂದು ವ್ಯವಸ್ಥೆ.

ಆಧುನಿಕ ತಂತ್ರಜ್ಞಾನದ ಪಶ್ಚಿಮವನ್ನು ವಸಾಹತು ಎಂದು ಕರೆದರೆ, ಬುಡಕಟ್ಟು ನೆಲದಲ್ಲಿ ಅದು ಪ್ರಭುತ್ವವಾಗಿ ನೆಲೆ ನಿಂತ ರಾಜಕೀಯ ಪ್ರಕ್ರಿಯೆಯನ್ನು ವಸಾಹತುಶಾಹಿ ಎಂದು ಕರೆಯಲಾಗಿದೆ. ಒಂದು ಜನವರ್ಗವು ಬೇರೆ ನಾಡಿನಿಂದ ಬಂದು ಇನ್ನೊಂದು ಜನವರ್ಗದ ಮೇಲೆ ಪ್ರಭುತ್ವ ಸಾಧಿಸಿ ಅವರನ್ನು ತನ್ನ ಸಾಂಸ್ಕೃತಿಕ ಚಹರೆಗಳಲ್ಲಿ ಭ್ರಮಾತ್ಮಕವಾಗಿ ವಿಹರಿಸುವಂತೆ ಮಾಡುವುದೇ ವಸಾಹತುಶಾಹಿ. ಇದರ ಹಿಂದೆ ಒಂದು ತತ್ವವೂ ಇದೆ, ಒಂದು ಶೋಷಣೆಯೂ ಇದೆ. ವಸಾಹತುಶಾಹಿ ತತ್ವ ಭಾರತದಲ್ಲಿ ಸುಧಾರಣೆ ತಂದರೆ ಅದರ ಶೋಷಣಾ ಕ್ರಮವು ಭಾರತದ ಸಾಂಸ್ಕೃತಿಕ ಬದುಕನ್ನು ಘಾಸಿಗೊಳಿಸಿತು.

೧೬ನೆಯ ಶತಮಾನದಲ್ಲಿ ಯುರೋಪಿಯನ್ನರು ಏಷ್ಯಾ, ಆಫ್ರಿಕಾ ಮತ್ತು ಅಮೇರಿಕಾ ಖಂಡಗಳಲ್ಲಿರುವ ಪ್ರದೇಶಗಳನ್ನು ಕಬಳಿಸಿಕೊಂಡಿರುವ ಬೆಳವಣಿಗೆಯನ್ನು ಮಾತ್ರ ವಸಾಹತುಶಾಹಿ ಎಂದು ಕರೆಯಲಾಗದು. ಏಕೆಂದರೆ, ಈ ಬಗೆಯ ಆಕ್ರಮಣ, ನಿಯಂತ್ರಣ ಮಾನವನ ಇತಿಹಾಸ ಆರಂಭ ಆದಂದಿನಿಂದ ಇತ್ತು. ಆದರೆ, ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ವಸಾಹತು ಸ್ವರೂಪದ ಚಟುವಟಿಕೆಗಳು ಆರಂಭವಾಗಿದ್ದೆ ಯುರೋಪಿಯನ್ ವ್ಯಾಪಾರಿಗಳ ಆಗಮನದಿಂದ. ಆದರೆ, ಇದಕ್ಕೂ ಪೂರ್ವದಲ್ಲಾದ ಮುಸ್ಲಿಂ ದಾಳಿಗಳು ಈ ಬಗೆಯ ವಸಾಹತುಗಳನ್ನು ಸ್ಥಾಪಿಸಲು ಆಗಲಿಲ್ಲ. ಯಾಕೆಂದರೆ ವಸಾಹತುಶಾಹಿಗೆ ಇರುವ ಆರ್ಥಿಕ ಪ್ರಣಾಳಿಕೆ ಅದಕ್ಕಿರಲಿಲ್ಲ, ಭಾರತೀಯ ಸಮಾಜದೊಳಗೆ ಅದು ಹಸ್ತಕ್ಷೇಪ ಮಾಡಲಿಲ್ಲ ಹಾಗೂ ಭಾರತ - ಇಂಗ್ಲೆಂಡಿನೊಡನೆ ಹೊಂದಿದ್ದ ಸಂಪರ್ಕಕ್ಕಿರುವಷ್ಟು ಮೂಲಭೂತ ಪ್ರಾಮುಖ್ಯ ಕೂಡ ಇದಕ್ಕಿದ್ದಿಲ್ಲ. ಹಾಗಾಗಿ ಪರಕೀಯ ವಸಾಹತುಗಳು ಬಲವಾಗಿ ಬೇರೂರಿದ್ದು ಮತ್ತು ಜೀವಂತಿಕೆ ಪಡೆದಿದ್ದು ಯೂರೋಪಿಯನ್ ಕಂಪನಿಗಳಿಂದ.

ಭಾರತವು ಪ್ರಾಚೀನ ಕಾಲದಿಂದಲೂ ಪಾಶ್ಚಿಮಾತ್ಯ ದೇಶಗಳೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿತ್ತು ಎಂಬುದರ ಬಗ್ಗೆ ಭಾರತದಲ್ಲಿ ನಡೆದ ಉತ್ಖನನಗಳಲ್ಲಿ ದೊರೆತ ಅವಶೇಷಗಳಿಂದ ಹಾಗೂ ವಿದ್ವಾಂಸರು ಕೈಗೊಂಡ ಅಧ್ಯಯನಗಳಿಂದ ದೃಢಪಟ್ಟಿದೆ. ಮಧ್ಯಕಾಲದಲ್ಲಿ ಯುರೋಪ್ ಮತ್ತು ಭಾರತ ನಡುವಿನ ವ್ಯಾಪಾರವು ಹಲವು ಮಾರ್ಗಗಳ ಮೂಲಕ ಭಾರತದ ವಸ್ತುಗಳಾದ ಹತ್ತಿ, ಮುತ್ತು, ಶ್ರೀಗಂಧ, ಸಾಂಬಾರ ಪದಾರ್ಥ ಮುಂತಾದ ನರಕುಗಳಿಗೆ ಯೂರೋಪಿನ ಮಾರುಕಟ್ಟೆಗಳಲ್ಲಿ ಹೆಚ್ಚಿನ ಬೇಡಿಕೆ ಇದ್ದಿರುವುದರಿಂದ ವ್ಯಾಪಾರವು ಹೆಚ್ಚು ಲಾಭದಾಯಕವಾಗಿತ್ತು. ಇದು ಪೂರ್ವ - ಪಶ್ಚಿಮ ನಡುವಿನ ವ್ಯಾಪಾರಿ ಮಾರ್ಗವಾಗಿದ್ದ ಕಾನ್‌ಸ್ಟಾಂಟಿನೋಪಲ್‌ನ ಮೂಲಕ ನಡೆಯುತ್ತಿತ್ತು. ಆದರೆ, ಏಷ್ಯಾ ಮೈನರ್‌ನ್ನು ಆಟೋಮನ್ ಟರ್ಕರು ಗೆದ್ದು, ೧೪೫೩ರಲ್ಲಿ ಕಾನ್‌ಸ್ಟಾಂಟಿನೋಪಲನ್ನು ವಶಪಡಿಸಿಕೊಂಡ ಮೇಲೆ ಪೂರ್ವ ಮತ್ತು ಪಶ್ಚಿಮಗಳ ನಡುವಿನ ವ್ಯಾಪಾರೀ ಮಾರ್ಗಗಳು ತುರ್ಕಿಗಳ ನಿಯಂತ್ರಣಕ್ಕೆ[೨೨] ಬಂದಿರುವುದರಿಂದ ಭೂ ಮಾರ್ಗದ ಸಂಪರ್ಕ ಮುಚ್ಚಲ್ಪಟ್ಟಿತು. ಇದರ ಪರಿಣಾಮವಾಗಿ ಯುರೋಪಿಯನ್ನರಿಗೆ ಪೂರ್ವ ದೇಶಗಳ ಸರಕುಗಳು ಅತ್ಯವಶ್ಯಕವಾಗಿದ್ದರಿಂದ ಅಗತ್ಯವಾಗಿ ಪರ್ಯಾಯಮಾರ್ಗ ಕಂಡು ಹಿಡಿಯುವುದು ಅನಿವಾರ್ಯವಾಗಿತ್ತು. ಪಶ್ಚಿಮ ಯುರೋಪಿನ ದೇಶಗಳು ಹಾಗೂ ವ್ಯಾಪಾರಿಗಳು ಭಾರತ ಮತ್ತು ಆರಂಭದಲ್ಲಿ ಈಸ್ಟ್ ಇಂಡೀಸ್ ಎಂದು ಕರೆಯಲಾಗುತ್ತಿದ್ದ ಇಂಡೋನೇಷ್ಯಾದ ಸಾಂಬಾರ ಪದಾರ್ಥಗಳನ್ನು ಬೆಳೆಯುತ್ತಿದ್ದ ದ್ವೀಪಗಳಿಗೆ ಹೊಸ ಮತ್ತು ಸುರಕ್ಷಿತ ಸಮುದ್ರ ಮಾರ್ಗಗಳನ್ನು ಶೋಧಿಸುವ ಕಾರ್ಯದಲ್ಲಿ ನಿರತರಾಗಿದ್ದರು. ಇದರಲ್ಲಿ ಮೊದಲ ಹೆಜ್ಜೆಯನ್ನು ಇಟ್ಟವರು ಪೋರ್ಚುಗಲ್ ಮತ್ತು ಸ್ಪೈನ್‌ನ ನಾವಿಕರು. ಹೆನ್ರಿ ದಿನ್ಯಾವಿಗೇಟರ್ ಎಂದೇ ಕರೆಯಲಾಗಿದ್ದ ಪೋರ್ಚುಗಲ್‌ನ ರಾಜಕುಮಾರ ಹೆನ್ರಿಯ ಪ್ರೋತ್ಸಾಹದಿಂದ ಲಿಸ್ಬನ್ ನಗರದಲ್ಲಿ ಅಂದಿನ ಯುರೋಪಿನ ತಜ್ಞ ನಾವಿಕರು, ಹಡಗು ಕಟ್ಟುವವರು, ಭೂಗೋಳಶಾಸ್ತ್ರಜ್ಞರು,

ನಕ್ಷೆಕಾರರು ಮುಂತಾದವರನ್ನೆಲ್ಲ ಕಲೆ ಹಾಕಿ ಒಂದು ನೌಕಾಯಾನ ಸಂಸ್ಥೆಯನ್ನು ಸ್ಥಾಪಿಸಿದ್ದ[೫೨] ಈ ಸಂಸ್ಥೆಯಲ್ಲಿ ತರಬೇತಿ ಪಡೆದ ನಾವಿಕರು ಪ್ರತಿ ವರ್ಷವೂ ಸೂಕ್ತ ಕಾಲದಲ್ಲಿ ಲಿಸ್ಬನ್ನಿನಿಂದ ಹಡಗುಗಳು ಸಜ್ಜಾಗಿ ಆಫ್ರಿಕಾಖಂಡದ ಪಶ್ಚಿಮ ತೀರವನ್ನು ಹಿಡಿದು ದಕ್ಷಿಣದತ್ತ ಹೊರಡುತ್ತಿದ್ದವು. ಅವುಗಳಲ್ಲೊಂದು ಹಡಗಿನ ಯಾನದಲ್ಲಿ ಬಾರ್ತೊಲೋಮಿಯಾ ಡಯಾಜ್ ೧೪೮೭ರಲ್ಲಿ ಗುಡ್ ಹೋಪ್ ಭೂಶಿರವನ್ನು ಸುತ್ತಿ ಹಿಂದೂ ಮಹಾಸಾಗರಕ್ಕೆ ಪ್ರವೇಶಿಸಿದ. ೧೪೯೨ರಲ್ಲಿ ಸ್ಪೈನ್‌ನ ಕೊಲಂಬಸ್ ಭಾರತವನ್ನು ತಲುಪಲು ಹೊರಟ್ಟಿದ್ದನು. ಆದರೆ, ಭಾರತದ ಬದಲಾಗಿ ಅಮೇರಿಕವನ್ನು ಅನ್ವೇಷಣೆ ಮಾಡಿದ. ಭಾರತಕ್ಕೆ ಹೊಸ ಸಮುದ್ರ ಮಾರ್ಗವನ್ನು ಕಂಡು ಹಿಡಿದ ಪೋರ್ಚುಗಲ್‌ನ ನಾವಿಕ.

ವಾಸ್ಕೋ-ಡಿ-ಗಾಮ ಗುಡ್ ಹೋಪ್ ಭೂಶಿರದ ಮಾರ್ಗವಾಗಿ ಆಫ್ರಿಕವನ್ನು ಸಮುದ್ರದ ಮೂಲಕ ಸುತ್ತಿ ಕ್ರಿ.ಶ. ೧೪೯೮ರಲ್ಲಿ ಕಲ್ಲಿಕೋಟೆಗೆ ಬಂದಿಳಿದನು. ಕಲ್ಲಿಕೋಟೆಯ ದೊರೆ ಜಾಮೊರಿನ್ ಈತನನ್ನು ಸ್ವಾಗತಿಸಿ, ಇಬ್ಬರ ನಡುವಿನ ಸೌಹಾರ್ದ ವ್ಯಾಪಾರ ಮಾತುಕತೆಯಿಂದ ಭಾರತ ಮತ್ತು ಯುರೋಪಿನ ಜೊತೆಗೆ ವ್ಯಾಪಾರ - ವಾಣಿಜ್ಯದ ಸಂಬಂಧವು ಪುನರ್ ಸ್ಥಾಪಿಸಲ್ಪಟ್ಟಿತು. ಅಂದಿನಿಂದ ಯುರೋಪಿಯನ್ನರಿಗೆ ಭಾರತ ಹಾಗೂ ಪೂರ್ವ ದೇಶಗಳ ಹೆದ್ದಾರಿ ತೆರೆದಿಟ್ಟಂತಾಯಿತು.

ಫ್ರಾನ್ಸಿಸ್ಕೋ - ಡಿ - ಆಲ್‌ಮಿಡಾ ಭಾರತದ ಪ್ರಥಮ ಪೋರ್ಚುಗೀಸ್ ಗೌವರ್ನರ್ ಆಗಿದ್ದನು. ಅಲ್ಫೆನ್ಸೊ - ಡಿ - ಅಲ್ಬುಕರ್ಕ್‌ನು ಇವನ ಉತ್ತರಾಧಿಕಾರಿಯಾಗಿದ್ದನು. ಇವನು ೧೫೧೦ರಲ್ಲಿ ಬಿಜಾಪುರದ ಆದಿಲ್‌ಶಾಹಿಗಳಿಂದ ಸಂಪದ್ಭರಿತವಾದ ಗೋವಾ ಬಂದರನ್ನು ವಶಪಡಿಸಿಕೊಂಡು ಅದನ್ನು ತಮ್ಮ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡನು. ೧೯೬೧ರವರೆಗೆ ಗೋವಾ ಪೋರ್ಚುಗೀಸರ ಅಧೀನದಲ್ಲಿತ್ತು. ಪೋರ್ಜುಗೀಸರು ಗೋವಾ, ದಿಯು, ದಾಮನ್, ಸಾಲ್‌ಸೆಟ್, ಬೇಸ್ಸಿನ್ ಬಾಂಬೆ ಮುಂತಾದ ಕಡೆಗಳಲ್ಲಿ ತಮ್ಮ ವಸಾಹತು ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದರು. ಇಂಗ್ಲೀಷ್ ಮತ್ತು ಡಚ್ಚರೊಂದಿಗೆ ಸ್ಪರ್ಧಿಸಲು ಅಸಮರ್ಥರಾಗಿದ್ದರಿಂದ ಪೋರ್ಚುಗೀಸರು ಭಾರತದಲ್ಲಿ ಬಹುಕಾಲ ಉಳಿಯಲಿಲ್ಲ.

ಸಾಂಬಾರ ಪದಾರ್ಥಗಳನ್ನು ಉತ್ಪತ್ತಿ ಮಾಡುವ ದ್ವೀಪಗಳು ಡಚ್ಚರ ಮನವನ್ನು ಸೆಳೆದವು. ಹಾಗಾಗಿ ಕ್ರಿ.ಶ. ೧೬೦೨ರಲ್ಲಿ "ದಿ ಯುನೈಟೆಡ್ ಈಸ್ಟ್ ಇಂಡಿಯಾ ಕಂಪನಿ ಆಫ್ ದಿ ನೆದರ್‌ಲ್ಯಾಂಡ್ಸ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಡಚ್ಚರು ಇಡೀ ದಕ್ಷಿಣ ಭಾರತದಲ್ಲಿ ಪೋರ್ಚುಗೀಸರ ಅಧಿಕಾರವನ್ನು ಗೋವಾ ಪ್ರಾಂತ್ಯಕ್ಕೆ ಸೀಮಿತಗೊಳಿಸಿ, ಭಾರತದ ನಾಗಾಪಟ್ಟಣವನ್ನು ತಮ್ಮ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು[೫೩], ಮಲಯ ಕೊಲ್ಲಿ ಮತ್ತು ಇಂಡೋನೇಷ್ಯಾ ದ್ವೀಪಗಳಿಂದ ಪೋರ್ಚುಗೀಸರನ್ನು ಹೊರೂಡಿ, ಅಲ್ಲಿ ನೆಲೆಸಲು ಪ್ರಯತ್ನಿಸುತ್ತಿದ್ದ ಆಂಗ್ಲರನ್ನು ಸೋಲಿಸಿದರು.[೫೪] ಜೊತೆಗೆ ಪಶ್ಚಿಮ ಭಾರತದ ಗುಜರಾತ್‌ನ ಸೂರತ್, ಬ್ರೋಚ್, ಕ್ಯಾಂಬೆ ಮತ್ತು ಅಹಮದಾಬಾದ್‌ಗಳಲ್ಲಿ, ಕೇರಳದ ಕೊಚ್ಚಿ, ಮದರಾಸ್‌ನ ನಾಗಪಟ್ಟಣ, ಆಂಧ್ರದ

ವಸೂಲಿ ಪಟ್ಟಣ, ಬಂಗಾಳದ ಚಿನ್ಸುರ, ಬಿಹಾರದ ಪಾಟ್ನಾ ಮತ್ತು ಉತ್ತರ ಪ್ರದೇಶದ ಆಗ್ರಾಗಳಲ್ಲಿ ವ್ಯಾಪಾರದ ಕೋಠಿಗಳನ್ನು ಸಹ ಸ್ಥಾಪಿಸಿದರು. ಇವರು ಭಾರತದಲ್ಲಿ ಸ್ಥಾಪಿಸಿದ್ಧ ಕೋಠಿಗಳನ್ನು ರಕ್ಷಿಸುವಲ್ಲಿ ಹಾಗೂ ಇಂಗ್ಲಿಷರಿಗೆ ಪ್ರತಿ ಸ್ಪರ್ಧಿಗಳಾಗಿ ನಿಲ್ಲಲು ಡಚ್ಚರಿಗೆ ಆಮೇಲೆ ಸಾಧ್ಯವಾಗಲೇ ಇಲ್ಲ.

ಭಾರತಕ್ಕೆ ಆಗಮಿಸಿದ ಯೂರೋಪಿಯನ್ನರಲ್ಲಿ ಫ್ರೆಂಚರೇ ಕೊನೆಯವರು. ಇವರು ಇಂಗ್ಲಿಷರು ಬಂದ ಅರ್ಧ ಶತಮಾನದ ಮೇಲೆ ಭಾರತಕ್ಕೆ ಬಂದರು. ಫ್ರೆಂಚ್ ದೇಶದ ರಾಜನಾದ ಹದಿನಾಲ್ಕನೆ ಲೂಯಿ ಮತ್ತು ಅವನ ಮಂತ್ರಿಯಾದ ಕೋಲ್‌ಬರ್ಟ್ ಎಂಬುವರು ಕ್ರಿ.ಶ. ೧೬೪೪ರಲ್ಲಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯನ್ನು ಸ್ಥಾಪಿಸಿದರು. ಭಾರತದೊಡನೆ ವಾಣಿಜ್ಯ ಸಂಬಂಧವನ್ನಿಟ್ಟುಕೊಳ್ಳಬೇಕೆಂಬುದು ಇದರ ಮುಖ್ಯೋದ್ದೇಶವಾಗಿತ್ತು. ಸೂರತ್ತಿನಲ್ಲಿ ೧೬೬೮ರಲ್ಲಿ ಫ್ರೆಂಚರು ತಮ್ಮ ಪ್ರಥಮ ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿದರು.[೩೩] ಪಾಂಡಿಚೇರಿ, ಸೂರತ್, ಚಂದ್ರನಾಗೋರ್, ಮಾಹೆ, ಕಾರೈಕಲ್, ಮಚಲಿಪಟ್ಟಣ ಮುಂತಾದೆಡೆಗಳಲ್ಲಿ ವ್ಯಾಪಾರೀ ಕೇಂದ್ರಗಳನ್ನು ಸ್ಥಾಪಿಸಿದರು. ಪಾಂಡಿಚೇರಿ ಭಾರತದಲ್ಲಿನ ಅವರ ರಾಜಧಾನಿಯಾಗಿತ್ತು. ವ್ಯಾಪಾರದ ಮಹತ್ವಾಕಾಂಕ್ಷೆ ಹೊಂದಿದ ಇಂಗ್ಲಿಷ್ ಮತ್ತು ಫ್ರೆಂಚರು ತಮ್ಮ ಅಸ್ತಿತ್ವಕ್ಕಾಗಿ ಹೋರಾಟ ಮಾಡುವುದು ಅನಿವಾರ್ಯವಾಗಿತ್ತು. ಅದಕ್ಕೆ ಕರ್ನಾಟಕ ಮತ್ತು ದಖ್ಖನ್ ರಾಜಕೀಯ ಸ್ಥಿತಿ ಪೂರಕವಾಗಿ ಪರಿಣಮಿಸಿತು. ಮರಾಠರ ಅಂತಃಕಲಹ ಹಾಗೂ ಅವರ ದಾಳಿಗಳು, ಹೈದರಾಬಾದ್ ನಿಜಾಮನ ಉತ್ತರಾಧಿಕಾರದ ಸಮಸ್ಯೆ ಹಾಗೂ ಕರ್ನಾಟಕದ ಅಸ್ಥಿರ ರಾಜಕೀಯ ಸ್ಥಿತಿಯಿಂದ ಆಂಗ್ಲರು - ಫ್ರೆಂಚ್‌ರ ಸಂಘರ್ಷದಲ್ಲಿ ತೊಡಗಿದರು. ಇಲ್ಲಿ ಯಾವೊಂದು ದೇಶೀಯ ಶಕ್ತಿ ನಿರ್ಣಾಯಕ ಪಾತ್ರ ವಹಿಸಲಿಲ್ಲ. ಹೀಗಾಗಿ ಇಂಗ್ಲಿಷರು ಮತ್ತು ಫ್ರೆಂಚ್‌ರ ನಡುವೆ ಮೂರು ಕದನಗಳೇರ್ಪಟ್ಟು, ಇಲ್ಲಿ ಫ್ರೆಂಚರು ನಿರ್ನಾಮಗೊಂಡರು. ಇಂಗ್ಲಿಷ್ ಕಂಪನಿಯೇ ಭಾರತದ ವ್ಯಾಪಾರದ ದಿಕ್ಕುಗಳನ್ನು ನಿರ್ಧರಿಸುವ ಶಕ್ತಿಯಾಗಿ ಬೆಳೆಯಿತು.

ಕ್ರಿ.ಶ. ೧೬೦೦ರಲ್ಲಿ ಇಂಗ್ಲಿಷ್ ವರ್ತಕರು 'ಈಸ್ಟ್ ಇಂಡಿಯಾ ಕಂಪನಿ' ಎಂಬ ಹೆಸರಿನ ವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಿದರು. ಕಂಪನಿಗೆ ಬೇಕಾಗಿದ್ದದ್ದು, ಭಾರತೀಯ ಮಾರುಕಟ್ಟೆ ಹಾಗೂ ಯೂರೋಪಿನ ಕೈಗಾರಿಕೆಗಳಿಗೆ ಅಗತ್ಯವಾಗಿದ್ದಂಥ ಕಚ್ಚಾ ವಸ್ತುಗಳು. ಇದನ್ನು ಗಮನದಲ್ಲಿಟ್ಟುಕೊಂಡು ಬ್ರಿಟಿಷರು ತನ್ನ ವ್ಯಾಪಾರ - ವಾಣಿಜ್ಯ ನೀತಿಯನ್ನು ರೂಪಿಸಿತು. ಕ್ರಿ.ಶ. ೧೬೦೦ನೆಯ ಡಿಸೆಂಬರ್ ೩೧ರಂದು ಬ್ರಿಟಿಷ್ ರಾಣಿ ಎಲಿಜಬತ್ ಈಸ್ಟ್ ಇಂಡಿಯಾ ಕಂಪನಿಗೆ ಭಾರತದ ಮತ್ತು ಇತರ ಪೂರ್ವದೇಶಗಳೊಂದಿಗೆ ವ್ಯಾಪಾರ ಮಾಡಲು ನನ್ನದ್ದು ನೀಡಿದಳು.[೩೬] ಈ ಸಣ್ಣ ಘಟನೆಯಿಂದ ಈಸ್ಟ್ ಇಂಡಿಯಾ ಕಂಪನಿ ಭಾರತದೊಡನೆ ವ್ಯಾಪಾರ ಮಾಡುವ ಹಕ್ಕನ್ನು ಪಡೆಯಿತು. ಕಂಪನಿಯು ೧೬೦೮ರಲ್ಲಿ ಭಾರತದ ಪಶ್ಚಿಮ ಸಮುದ್ರದ ಪೀಠದ ಸೂರತ್‌ನಲ್ಲಿ ವ್ಯಾಪಾರ ನಡೆಸಲು ಕಾರ್ಖಾನೆ(ಕೋಂಡಿ) ಎಂಬ ಹೆಸರಿನ ಸಂಸ್ಥೆಯನ್ನು ಆರಂಭಿಸಲು ನಿರ್ಧರಿಸಿ ರಾಜನ ಅನುಮತಿ ಪಡೆಯಲು ಜಹಾಂಗೀರನ ಆಸ್ಥಾನಕ್ಕೆ ಕ್ಯಾಪ್ಟನ್

ಹಾಕಿನ್ಸ್‌ನ್ನು ಕಳುಹಿಸಿತು. ಇದರಿಂದ ಪಶ್ಚಿಮತ ಕರಾವಳಿಯ ಹಲವು ಸ್ಥಳಗಳಲ್ಲಿ ವ್ಯಾಪಾರದ ಕೋಠಿಗಳನ್ನು ಆರಂಭಿಸಲು ಇಂಗ್ಲಿಷ್ ಕಂಪನಿಗೆ ಅನುಮತಿ ದೊರೆಯಿತು. ಕ್ರಿ.ಶ. ೧೬೧೧ರಲ್ಲಿ ನಿಜಾಂ ಪಟ್ಟಣದಲ್ಲಿ ಬ್ರಿಟಿಷರು ಮೊಟ್ಟ ಮೊದಲಬಾರಿಗೆ ದಕ್ಷಿಣ ಭಾರತದಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಗ್ಲೋಬ್ ಎಂಬ ಹಡಗಿನ ಕ್ಯಾಪ್ಟನ್ ಆಗಿದ್ದ ಹಿಪ್ಪಾನ್ ಎಂಬುವವನು ಅಲ್ಲಿ ಕೋಟೆಗಳನ್ನು ಕಟ್ಟಿದ್ದ.[೫೭] ಈ ಅನುಮತಿಯಿಂದ ಇಂಗ್ಲಿಷರು ತೃಪ್ತಿಪಡಲಿಲ್ಲ. ೧೬೧೫ರಲ್ಲಿ ರಾಯಭಾರಿ ಸರ್ ಥಾಮಸ್ ರೋ ಮುಘಲ್ ಆ ಸ್ಥಾನಕ್ಕೆ ಹೋಗಿ, ಮುಘಲ್ ಸಾಮ್ರಾಜ್ಯದ ಎಲ್ಲಾ ಭಾಗಗಳಲ್ಲೂ ವ್ಯಾಪಾರೀ ಕೋಠಿಗಳನ್ನು ಸ್ಥಾಪಿಸಲು ಮತ್ತು ವ್ಯಾಪಾರ ನಡೆಸಲು ರಾಜಾಜ್ಞೆಯನ್ನು ಪಡೆಯುವಲ್ಲಿ ಯಶಸ್ವಿಯಾದ. ಕ್ರಿ.ಶ. ೧೬೩೪ರಲ್ಲಿ ಕಲ್ಕತ್ತ, ೧೬೪೦ರಲ್ಲಿ ಮದರಾಸು ಕೋಠಿಗಳು ನಿರ್ಮಾಣವಾದವು. ಕ್ರಿ.ಶ. ೧೬೬೧ರಲ್ಲಿ ಇಂಗ್ಲೆಂಡಿನ ಎರಡನೆಯ ಚಾರ್ಲ್ಸ್‌ನು ಪೋರ್ಚುಗೀಸ್ ರಾಜಕುಮಾರಿಯನ್ನು ಮದುವೆಯಾದದ್ದಕ್ಕಾಗಿ ಪೋರ್ಚುಗೀಸರು ಮುಂಬಯಿ ದ್ವೀಪವನ್ನು ಬಳುವಳಿಯಾಗಿ ನೀಡಿದರು. ಇದರ ಪರಿಣಾಮವಾಗಿ ಪೋರ್ಚುಗೀಸರು ಗೋವಾಲ, ಡಿಯು, ಧಾಮನ್‌ಗಳನ್ನು ಬಿಟ್ಟು, ಭಾರತದ ಉಳಿದ ಎಲ್ಲಾ ಪ್ರದೇಶಗಳ ಮೇಲಿನ ಅಧಿಕಾರವನ್ನು ಕಳೆದುಕೊಂಡರು. ಇಂಡೋನೇಷ್ಯಾ ದಿಟಪದಗಳ ಸಂಬಾರ ಪದಾರ್ಥಗಳ ವ್ಯಾಪಾರದ ಹಂಚಿಕೆಗೆ ಸಂಬಂಧಿಸಿದಂತೆ ವಿವಾಹರ ಹುಟ್ಟಿ, ಇಂಗ್ಲಿಷ್ ಕಂಪನಿಯು ಡಚ್ ಕಂಪನಿಯಿಂದ ಬೇರೆ ಆಯಿತು. ಭಾರತದಲ್ಲಿ ಎರಡೂ ಶಕ್ತಿಗಳ ನಡುವೆ ಆಂತರಿಕ ಯುದ್ಧವು ೧೬೫೪ರಲ್ಲಿ ಆರಂಭವಾಗಿ ೧೬೬೭ರಲ್ಲಿ ಮುಗಿಯಿತು.[೫೮] ಡಚ್ಚರು ಬ್ರಿಟಿಷ್‌ರಿಗೆ ಪ್ರತಿಸ್ಪರ್ಧಿಗಳಾಗದೆ ಭಾರತದಲ್ಲಿನ ತಮ್ಮ ಎಲ್ಲಾ ನೆಲೆಗಳನ್ನು ಇಂಗ್ಲಿಷ್‌ರಿಗೆ ಬಿಟ್ಟುಕೊಟ್ಟರು.

೧೮ನೆಯ ಶತಮಾನದಲ್ಲಿ ಭಾರತದ ರಾಜಕೀಯ ಸ್ಥಿತಿ ಜಟಿಲ ಹಾಗೂ ಗೊಂದಲಮಯ ವಾಗಿ ನಾನಾ ಬಲಗಳ ಸೆಣಸಟದ ಕಣವಾಗಿ ಮಾರ್ಪಟ್ಟಿತ್ತು. ಕಾರಣ, ಮೊಘಲ್ ಸಾಮ್ರಾಜ್ಯವು ಕ್ರಮಕ್ರಮವಾಗಿ ದುಬರ್ಲಗೊಂಡು ಅವನತಿ ಹೊಂದುವುದರೊಂದಿಗೆ ಸ್ಥಳೀಯ ಮತ್ತು ದುರ್ಬಲಗೊಂಡು ಅವನಿತಿ ಹೊಂದುವುದರೊಂದಿಗೆ ಸ್ಥಳೀಯ ಮತ್ತು ಪ್ರಾದೇಶಿಕ ಸಂಸ್ಥಾನಗಳು ಐದು ನೂರ ಅರವತ್ತೈದಕ್ಕೂ ಐದು ನೂರ ಅರವತ್ತೈದಕ್ಕೂ ಹೆಚ್ಚು ಸಂಸ್ಥಾನಗಳು ಹುಟ್ಟಿಕೊಳ್ಳಲಾರಂಭಿಸಿ ತಮ್ಮ ತಾವು ದೃಢೀಕರಿಸಿಕೊಂಡವು.[೫೯] ಅವುಗಳೆಂದರೆ ಪ್ರಮುಖವಾಗಿ ಬಂಗಾಳ, ಅವಧ್, ಹೈದರಾಬಾದ್, ಮೈಸೂರು ಮತ್ತು ಮಾರಾಠಾ ರಾಜ್ಯ. ಇತ್ಯಾದಿ ಇವುಗಳಲ್ಲಿ ಒಂದು ಸಂಸ್ಥಾನವೂ ಸಹ ಏಕಮುಖವಾಗಿರಲಿಲ್ಲ. ಅವರಲ್ಲಿಯೇ ಮೇಲುಗೈಯಾಗ ಬಯಸುವ ಮಹತ್ವಾಕಾಂಕ್ಷಿಗಳು ಹೊಂಚು ಹಾಕುತ್ತಿದ್ದರು. ಇದೇ ಸಮಯದಲ್ಲಿ ಭಾರತಕ್ಕೆ ವ್ಯಾಪಾರೀಗಳಾಗಿ ಬಂದಿದದ್ದ ಯೂರೋಪಿಯನ್ ಕಂಪನಿಗಳು ದೇಶಿ ಸಂಸ್ಥಾನಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಿದ್ದ ಕಾರಣದಿಂದ ಅವುಗಳ ಜೊತೆಗೆ ಪ್ರತಿಸ್ಪರ್ಧಿಸಿ, ಸಾರ್ವಭೌಮತ್ವವನ್ನು ಸ್ಥಾಪಿಸಲು ಮುಂದಾದರು. ಇದರಲ್ಲಿ ಬ್ರಿಟಿಷರು ನಿರ್ಣಾಯಕ ವಿಜಯಶಾಲಿಗಳಾದರು.

ಈಸ್ಟ್ ಇಂಡಿಯಾ ಕಂಪನಿಯು ೧೭೫೭ರ ಪ್ಲಾಸಿ ಕದನದಲ್ಲಿ ಜಯಗಳಿಸಿದ ನಂತರ ಬಂಗಾಳದಲ್ಲಿ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿಕೊಳ್ಳುವುದರ ಮೂಲಕ ಭಾರತವನ್ನು ವಸಾಹತು ನೆಲೆಯನ್ನಾಗಿಸಿಕೊಂಡಿತು. ಏಕೆಂದರೆ, ಬಂಗಾಳವು ಅತಿ ಫಲವತ್ತಾದ, ಭೂಮಿ ಹಾಗೂ ಶ್ರೀಮಂತ ಪ್ರಾಂತ್ಯವಾಗಿತ್ತು. ಇಲ್ಲಿನ ಕೈಗಾರಿಕೆ ಮತ್ತು ವ್ಯಾಪಾರೋದ್ಯಮವು ಅಭಿವೃದ್ಧಿ ಹೊಂದಿದ್ದಿತು. ಕ್ರಿ.ಶ. ೧೭೧೭ರಲ್ಲಿ ಮೊಘಲ್ ಚಕ್ರವರ್ತಿಯಿಂದ ದೊರೆತಿದ್ದು ರಾಜಫರ್ಮಾನಿನ ಮೂಲಕ ಕಂಪನಿಯು ಬಂಗಾಳದಲ್ಲಿ ಯಾವುದೇ ತೆರಿಗೆ ಇಲ್ಲದೆ, ಸರಕುಗಳ ಆಮದು ಮತ್ತು ರಫ್ತು ಮಾಡುವ ಹಾಗೂ ಸರಕುಗಳ ಸಾಗಣೆಗೆ ಬೇಕಾದ ಪರವಾನಿಗೆ ಪತ್ರ ಅಥವಾ ಶತ್ತಕ್ ನೀಡುವ ಅಧಿಕಾರವನ್ನು ಪಡೆದಿತ್ತು. ಈ ಫರ್ಮಾನ್ ಕಂಪನಿ ಮತ್ತು ಬಂಗಾಳದ ನವಾಬರ ನಡುವೆ ನಿರಂತರ ಸಂಘರ್ಷಕ್ಕೆ ಕಾರಣವಾಗಿತ್ತು.[೬೦] ಇದಕ್ಕೆ ಕಾರಣಗಳೆಂದರೆ, ಒಂದು ಬಂಗಾಳದ ಸರ್ಕಾರದ ಕಂದಾಯದಲ್ಲಿ ಉಂಟಾಗುತ್ತಿದ್ದ ನಷ್ಟ. ಎರಡು ಬಂಗಾಳದ ನವಾಬ ಸಿರಾಜ್-ಉದ್-ದೌಲನು ಕಂಪನಿ ಪಡೆದಿದ್ದು ವಿಶೇಷ ಹಕ್ಕುಗಳನ್ನು ಒಪ್ಪಲು ನಿರಾಕರಿಸಿದನು. ಮೂರು ಬ್ರಿಟಿಷರು ನವಾಬನ ಅನುಮತಿ ಇಲ್ಲದೆ ಕಲ್ಕತದಲ್ಲಿ ನಿರ್ಮಿಸಿರುವ ಕೋಟೆಗಳನ್ನು ಕೆಡುವಲು ಆಜ್ಞಾಪಿಸಿದರು[೬೧] ಇತ್ಯಾದಿ ಅಂಶಗಳಿಂದ ಪ್ಲಾಸಿ ಕದನವು ೨೩ನೆಯ ಜೂನ್ ೧೭೫೭ರಲ್ಲಿ ಬಂಗಾಳದ ನವಾಬ ಸಿರಾಜ್-ಉದ್-ದೌಲ ಮತ್ತು ರಾಬರ್ಟ್ ಕ್ಲೈವ್ ನಡುವೆ ಮುರ್ಷಿಬಾದ್‌ನಿಂದ ೩೦ ಕಿ.ಮೀ. ದೂರದಲ್ಲಿರುವ ಪ್ಲಾಸಿ ಎಂಬ ಒಂದು ಚಿಕ್ಕ ಗ್ರಾಮದಲ್ಲಿ ನಡೆಯಿತು. ಪ್ಲಾಸಿ ಕದನದಲ್ಲಿ ಕ್ಲೈವ್ ಜಯ ಗಳಿಸಿದ ಪರಿಣಾಮವಾಗಿ ಭಾರತದಲ್ಲಿ ಬ್ರಿಟಿಷ್ ಯಜಮಾನಿಕೆಗೆ ದಾರಿ ಮಾಡಿಕೊಟ್ಟಿತು.

ಬಂಗಾಳದ ನವಾಬ ಮೀರ್‌ಖಾಸಿಮ್, ಅವಧ್‌ನ ನವಾಬ ಶೂಜಾ-ಉದ್ದೌಲ ಮತ್ತು ಮೊಘಲ್ ದೊರೆ ೨ನೆಯ ಷಾ ಆಲಂ. ಈ ಮೂವರು ತ್ರಿಪಕ್ಷೀಯ ಒಕ್ಕೂಟವನ್ನು ರಚಿಸಿಕೊಂಡು ಬ್ರಿಟಿಷರ ಮೇಲೆ ೧೭೬೪ರಲ್ಲಿ ಯುದ್ಧ ಸಾರಿದರು.[೬೨] ಕ್ರಿ.ಶ. ೧೭೬೪ ಅಕ್ಟೋಬರ್ ೨೨ ರಂದು ಬಕ್ಸಾರ್ ಎಂಬಲ್ಲಿ ನಡೆದ ನಿರ್ಣಾಯಕ ಯುದ್ಧದಲ್ಲಿ ಮೂರು ಜನ ಮಿತ್ರರು ಸೋತು ಬ್ರಿಟೀಷರು ಜಯಗಳಿಸಿದರು. ಬಕ್ಸಾರ್ ಕದನದಿಂದ ಬ್ರಿಟಿಷರು ಬಂಗಾಳ, ಬಿಹಾರ ಮತ್ತು ಒರಿಸ್ಸಾಗಳ ನಿಜವಾದ ಒಡೆಯರೆಂದು ದೃಢೀಕರಿಸಿತು. ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಗೆ ಪೂರ್ವ ಜಗತ್ತಿನ ಸಂಪದ್ಭರಿತ ರಾಷ್ಟ್ರವಾಗಿದ್ದ ಭಾರತದ ಮೇಲೆ ರಾಜಕೀಯ ಹತೋಟಿಯನ್ನು ಸಾಧಿಸುವುದು ಅನಿವಾರ್ಯವಾಯಿತು. ಬಂಗಾಳದಲ್ಲಿ ಕಂಪನಿಯ ಪ್ರಾಬಲ್ಯವು ಹರಡಿದಂತೆ ಭಾರತದ ವಿವಿಧ ಭಾಗಗಳಿಗೂ ಹರಡಿತು. ಕ್ರಿ.ಶ. ೧೭೬೫ರ ನಂತರ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ವ್ಯವಸ್ಥೆಯ ಹತೋಟಿಯಲ್ಲಿ ಬಂಗಾಳ, ಬೊಂಬಾಯಿ ಮತ್ತು ಮದ್ರಾಸ್ ಪ್ರಾಂತ್ಯಗಳು ಅಸ್ತಿತ್ವಕ್ಕೆ ಬಂದವು.[೬೩] ಈ ಮೂರು ಪ್ರೆಸಿಡೆನ್ಸಿಗಳು ಬ್ರಿಟಿಷರಿಗೆ ಜಲಮಾರ್ಗ ಸಂಪರ್ಕವನ್ನು ಹೊಂದಿರುವುದರಿಂದ ಕಂಪನಿಯ ಆಡಳಿತ ವ್ಯವಸ್ಥೆಯಲ್ಲಿ ಕೇಂದ್ರ ಪ್ರಾಂತ್ಯಗಳಾದವು. ಕ್ರಿ.ಶ. ೧೭೭೪ರಲ್ಲಿ ಬಂಗಾಳದ ಗವರ್ನರ್ ಜನರಲ್ ಆಗಿದ್ದ

ವಾರನ್ ಹೇಸ್ಟಿಂಗ್ಸ್‌ನನ್ನು ೧೭೭೩ರ ರೆಗ್ಯುಲೇಟಿಂಗ್ ಕಾಯ್ದೆಯು ಬಂಗಾಳದ ಗವರ್ನರ್ ಜನರಲ್ ಎಂದು ಪುನರ್ ನಾಮಕರಣಗೊಳಿಸಿ,[೬೪] ಮದರಾಸು ಮತ್ತು ಬೊಂಬಾಯಿ ಪ್ರಾಂತ್ಯಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿತು. ಸಮರ್ಥನೀಯ ಗುಣಗಳನ್ನು ಬೆಳೆಸಿಕೊಂಡಿದ್ದ ವಾರನ್ ಹೇಸ್ಟಿಂಗ್ಸ್‌ನನ್ನು ಭಾರತದಲ್ಲಿದ್ದ ಕಂಪನಿಯ ವಸಾಹತು ಪ್ರದೇಶಗಳ ರೆಸಿಡೆಂಟ್(ಸ್ಥಾನಿಕ ಅಧಿಕಾರಿ) ಅಥವಾ ಗೌವರ್ನರ್ ಜನರಲ್ ಅಥವಾ ಕಂಪನಿ ಪ್ರಭುತ್ವದ ನಿರ್ಮಾಪಕ ಎಂದು ಕರೆಯಲಾಗಿದೆ. ಗವರ್ನರ್ ಜನರಲ್‌ನಿಗೆ ಆಡಳಿತದಲ್ಲಿ ಸೂಕ್ತ ಸಲಹೆಗಳನ್ನು ನೀಡಲು ಗವರ್ನರ್ ಜನರಲ್ ಕೌನ್ಸಿಲ್ ಎಂದು ನಾಲ್ಕು ಸದಸ್ಯರ ಸಮಿತಿಯನ್ನು ರಚಿಸಲಾಯಿತು. ಕಲ್ಕತವನ್ನು ಈಸ್ಟ್ ಇಂಡಿಯಾ ಕಂಪನಿಯ ಪ್ರಭುತ್ವದ ಮೊದಲ ರಾಜಧಾನಿಯನ್ನಾಗಿ ರಚಿಸಿ, ನ್ಯಾಯಾಂಗ ಕ್ಷೇತ್ರದಲ್ಲಿ ಸುಧಾರಣೆಗಳನ್ನು ಜಾರಿಗೊಳಿಸುವ ದೃಷ್ಟಿಯಿಂದ ಒಂದು ಉಚ್ಚನ್ಯಾಯಾಲಯವನ್ನು ಕಲ್ಕತ್ತಾದಲ್ಲಿ ಸ್ಥಾಪಿಸಲಾಯಿತು. ಮದರಾಸ್ ಮತ್ತು ಬೊಂಬಾಯಿ ಪ್ರಾಂತ್ಯಗಳ ಮೇಲೆ ಗವರ್ನರ್ ಜನರಲ್ ಅಧಿಕಾರವನ್ನು ವಿಸ್ತರಿಸಲಾಯಿತು.[೬೫]

ಹೈದರಾಲಿ ಮತ್ತು ಟಿಪ್ಪು ಸುಲ್ತಾನನು, ಮೊಗಲರು, ಮರಾಠರು ಮತ್ತು ಬ್ರಿಟಿಷರ ನಡುವೆ ಹೋರಾಟ ನಡೆಯುತ್ತಿದ್ದ ಅವಧಿಯಲ್ಲಿ ಭಾರತದ ರಾಜಕೀಯ ತೆರೆಯ ಮೇಲೆ ಕಾಣಿಸಿಕೊಂಡರು. ಆಗಾಗಲೇ ಮೊಗಲ್ ಸಾಮ್ರಾಜ್ಯ ತನ್ನ ಅವನತಿಯ ಪಥದಲ್ಲಿತ್ತು. ಮರಾಠರು ಬಲಿಷ್ಠರಾಗಿದ್ದರು. ಇಂಗ್ಲೀಷರು ಆಗತಾನೆ ತಮ್ಮ ಬಲವನ್ನು ಸ್ಥಾಪಿಸುತ್ತಿದ್ದರು. ಇದೇ ಸಮಯದಲ್ಲಿ ಮೈಸೂರು ಒಡೆಯರ ರಾಜಕೀಯ ಅಸಮರ್ಥತೆ ಹಾಗೂ ಅಧಿಕಾರಕ್ಕಾಗಿ ಕಿತ್ತಾಟ ಆರಂಭವಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಹೈದರ್‌ಆಲಿ ಕ್ರಿ.ಶ. ೧೭೬೧ರಲ್ಲಿ ದಳವಾಯಿ ನಂಜರಾಜಯ್ಯನನ್ನು ನಾಮ ಮಾತ್ರ ದೊರೆಯನ್ನಾಗಿ ಇರಿಸಿಕೊಂಡು ಮೈಸೂರು ಸಂಸ್ಥಾನದ ಸರ್ವಾಧಿಕಾರಿಯಾಗಿ ಆಳ್ವಿಕೆ ಆರಂಭಿಸಿದನು. ಕ್ರಿ.ಶ. ೧೭೬೧ ರಿಂದ ೧೭೯೯ರವರೆಗೆ ಮೈಸೂರು ಸಂಸ್ಥಾನದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನನು ಪ್ರಮುಖ ಪಾತ್ರ ವಹಿಸಿದರು. ಕಾರಣ, ಚಿಕ್ಕ ರಾಜ್ಯವಾಗಿದ್ದ ಮೈಸೂರನ್ನು ಇದರ ಪ್ರಸಿದ್ಧ ಸಂಸ್ಥಾನಗಳೊಡನೆ ಸರಿಸಾಟಿಯಾಗಿ ನಿಲ್ಲುವಂತೆ ಮಾಡುವ ಸಂದರ್ಭದಲ್ಲಿ ನಾಲ್ಕು ಆಂಗ್ಲೋ - ಮೈಸೂರು ಯುದ್ಧಗಳು ನಡೆದವು. ಹೈದರಾಲಿ ಮತ್ತು ಟಿಪ್ಪು ಸುಲ್ತಾನನಿಗೆ ಬ್ರಿಟಿಷರನ್ನು ಭಾರತದಿಂದ ಹೊರಗಟ್ಟುವುದೇ ಅವರ ದೃಡಸಂಕಲ್ಪವಾಗಿತ್ತು. ಆದ್ದರಿಂದಲೇ ವಸಾಹತುವಾದಿ ಬರಹಗಾರರಾಗಿದ್ದು ಕರ್ನಲ್ ಮಾರ್ಕ್ಸ್ ವಿಲ್ಕ್ಸ್ ತನ್ನ ಕೃತಿಗಳಲ್ಲಿ ಟಿಪ್ಪುವನ್ನು ಕಟುವಾಗಿ ಟೀಕಿಸಿದ್ದಾನೆ.[೬೬] ವೆಲ್ಲೆಸ್ಲಿ ಮತ್ತು ವಿಲ್ಕ್ಸ್ ತಮ್ಮ ಬರಹಗಳಲ್ಲಿ ಹೈದರಾಲಿ ಮೈಸೂರು ಗಾದಿಗೇರಿದ್ದನ್ನು 'ದುರಾಕ್ರಮಣ'ವೆಂದು ಕರೆದರು. ಏಕೆಂದರೆ, ಇಡೀ ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಸಿಂಹಸ್ವಪ್ನರಾಗಿದ್ದ ಇವರನ್ನು ಯುದ್ಧ ತಂತ್ರಗಳಿಂದ ಸೋಲಿಸಲು ಬ್ರಿಟಿಷರು ಹೈದರಾಬಾದ್ ನಿಜಾಮ್ ಮತ್ತು ಮರಾಠರೊಂದಿಗೆ ತ್ರಿಪಕ್ಷವನ್ನು ರಚಿಸಿಕೊಂಡು ಆಂಗ್ಲೋ-ಮೈಸೂರು ಯುದ್ಧಗಳಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ವಿರುದ್ಧ ಹೋರಾಡಿ ಕ್ರಿ.ಶ. ೧೭೮೨ರಲ್ಲಿ ಹೈದರಾಲಿಯನ್ನು ಕ್ರಿ.ಶ. ೧೭೯೯ರಲ್ಲಿ ಟಿಪ್ಪು ಸುಲ್ತಾನನ್ನು ಸೋಲಿಸಿದರು.

ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರ ತ್ರಿಪಕ್ಷೀಯ ಕೂಟಕ್ಕೂ ಹಾಗೂ ಟಿಪ್ಪುವಿಗೂ ಮಳವಳ್ಳಿ, ಸಿದ್ಧೇಶ್ವರ ಮತ್ತು ಶ್ರೀರಂಗಪಟ್ಟಣಗಳಲ್ಲಿ ನಡೆದ ಕದನಗಳಲ್ಲಿ ಟಿಪ್ಪು ಸೋತು, ಮೃತನಾದ ಬಳಿಕ ಮೈಸೂರು ಪ್ರಾಂತ್ಯವನ್ನು ನಾಲ್ಕು ಭಾಗಗಳಾಗಿ ಹಂಚಿಕೊಂಡರು. ಕರ್ನಾಟಕದಲ್ಲಿ ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟ ಮೊಟ್ಟಮೊದಲ ಪ್ರದೇಶವೆಂದರೆ 'ಕೆನರಾ' ಕ್ರಿ.ಶ. ೧೭೯೯ರಲ್ಲಿ ಅದು ಟಿಪ್ಪುವಿನಿಂದ ದೊರೆತದ್ದು.[೬] ನಂತರ ಕ್ರಿ.ಶ. ೧೮೦೦ರಲ್ಲಿ ನಿಜಾಮನಿಂದ ಬಳ್ಳಾರಿಯನ್ನು ಪಡೆಯಲಾಯಿತು. ಇದೇ ಕಾಲಾವಧಿಯಲ್ಲಿ ರಾಜಕೀಯ ಶಕ್ತಿಯಾಗಿ ಬೆಳೆಯುತ್ತಿದ್ದ ಮರಾಠರು ತಮ್ಮ ಆಂತರಿಕ ರಾಜಕೀಯ ಕಲಹಗಳಿಂದಾಗಿ ಮೂರನೆಯ ಆಂಗ್ಲೋ - ಮರಾಠ ಯುದ್ಧ ಕ್ರಿ.ಶ. ೧೮೧೭-೧೮ರಲ್ಲಿ ನಡೆಯಿತು. ಈ ಯುದ್ಧದಲ್ಲಿ ಮರಾಠರು ಸೋತು ಸಹಾಯಕ ಸೈನ್ಯ ಒಪ್ಪಂದಕ್ಕೆ ಸಹಿ ಹಾಕಿದರು.[೮] ಹೀಗೆ ಕರ್ನಾಟಕ ಸೇರಿದಂತೆ ಇಡೀ ದಕ್ಷಿಣ ಭಾರತ ಬ್ರಿಟಿಷರ ನೇರ ಆಡಳಿತದ ಪ್ರಭುತ್ವದೊಳಗೆ ವಿಲೀನಗೊಂಡವು. ಈಸ್ಟ್ ಇಂಡಿಯಾ ಕಂಪನಿಯ ಅಧೀನಕ್ಕೆ ಒಳಪಟ್ಟ ಭಾರತವನ್ನು ಆಡಳಿತ ದೃಷ್ಟಿಯಿಂದ ಮೂರು ಪ್ರಮುಖ ವಿಭಾಗಗಳನ್ನಾಗಿ ಮಾಡಲಾಗಿತ್ತು. ಕಲ್ಕತ್ತ, ಮುಂಬೈ ಮತ್ತು ಮದರಾಸು ಆ ವಿಭಾಗಗಳ ಆಡಳಿತ ಕೇಂದ್ರಗಳಾಗಿದ್ದವು. ಇದೇ ವ್ಯವಸ್ಥೆ ವಿಕ್ಟೋರಿಯ ರಾಣಿಯ ನೇರ ಆಡಳಿತಕ್ಕೆ ಒಳಗಾದ ಮೇಲೂ ಮುಂದುವರಿಯಿತು. ಈ ರಾಜಕೀಯ ಬೆಳವಣಿಗೆಯಿಂದ ಸ್ಥಳೀಯ ರೀತಿ-ನೀತಿಗಳು ಹಿಂದೆ ಸರಿದು ಪಾಶ್ಚಿಮಾತ್ಯ ಸಂಪ್ರದಾಯಗಳು, ಭಾವನೆಗಳು, ತಾಂತ್ರಿಕ ಸಾಧನೆಗಳು, ಕಲೆ ಮತ್ತು ವಾಸ್ತುಶಿಲ್ಪ ಕಾಲಕ್ರಮೇಣ ಈ ನೆಲದಲ್ಲಿ ನೆಲೆಯೂರಿದವು.

ಭಾರತಕ್ಕೆ ವ್ಯಾಪಾರಿಗಳಾಗಿ ಆಗಮಿಸಿದ್ದ ಬ್ರಿಟಿಷರು ಭಾರತದ ರಾಜಕೀಯ ಚರಿತ್ರೆಯನ್ನು ಕೆಲವೇ ಕಾಲದಲ್ಲಿ ಅರಿತರು ಸಿಂಹಾಸನಕ್ಕಾಗಿ ನಡೆಯುತ್ತಿದ್ದ ಒಳಸಂಚುಗಳು ದೇಶೀ ಸಂಸ್ಥಾನಗಳಲ್ಲಿ ಸಾಮಾನ್ಯವಾಗಿದ್ದವು. ಇದರ ಲಾಭವನ್ನು ಪಡೆಯುವ ನಿಟ್ಟಿನಲ್ಲಿ ದೇಶೀ ಅರಸರ ಆಂತರಿಕ ವಿದ್ಯಾಮಾನಗಳಲ್ಲಿ ಪ್ರವೇಶ ಮಾಡಿದ್ದರಿಂದ ತಮ್ಮ ವ್ಯಾಪಾರಕ್ಕೆ ಪೂರಕವಾಗುವಂತೆ ಭಾರತವನ್ನು ಸಜ್ಜುಗೊಳಿಸಿಕೊಂಡರು. ಈ ವ್ಯಾಪಾರವು ಬ್ರಿಟಿಷ್ ಸಾಮ್ರಾಜ್ಯದ ಅಡಿಪಾಯವಾಗಿತ್ತು. ಕ್ರಮೇಣ ಬ್ರಿಟಿಷರು ಭಾರತದ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಏಕಸ್ವಾಮ್ಯವನ್ನು ಹಾಗೂ ಯಜಮಾನಿಕೆಯನ್ನು ಸ್ಥಾಪಿಸಿಕೊಂಡರು.

ಬ್ರಿಟಿಷರು ತಮ್ಮ ಒಡೆದು ಆಳುವ ನೀತಿನಿಯಂದ ಭಾರತದ ಭೂಭಾಗಗಳನ್ನು ದೇಶಿ ಅರಸರಿಂದ ಗೆದ್ದ ಅಥವಾ ಗಳಿಸಿದ ಪ್ರದೇಶಗಳನ್ನು ತಮ್ಮ ಆಡಳಿತದ ಹಿತದೃಷ್ಟಿಯಿಂದ ವಿಭಾಗಿಸಿ, ಮುಂಬಯಿ ಮತ್ತು ಮದರಾಸು ಪ್ರೆಸಿಡೆನ್ಸಿಗಳನ್ನು ಸ್ಥಾಪಿಸಿಕೊಂಡರು. ಇವು ಬ್ರಿಟಿಷರ ಪ್ರಮುಖ ಆಡಳಿತ ಕೇಂದ್ರಗಳಾಗಿದ್ದವು.

ವಸಾಹತುಶಾಹಿ ಆಳ್ವಿಕೆಯ ಪೂರ್ವದಲ್ಲಿ ಕರ್ನಾಟಕಕ್ಕೆ ಅದರದ್ದೇ ಆದ ಖಚಿತವಾದ ಭೌಗೋಳಿಕ ಎಲ್ಲೆಕಟ್ಟುಗಳಿರಲಿಲ್ಲ. ಅದರ ಗಡಿಗಳು ನಿರಂತರ ಬದಲಾವಣೆಗೆ ಒಳಗಾಗುತ್ತಿದ್ದವು.

ಕರ್ನಾಟಕದ ಗಡಿಗಳು ಆಯಾ ಆರಸುಮನೆತನದ ಆಳ್ವಿಕೆ ಹಾಗೂ ಅದರ ಸಾಮರ್ಥ್ಯದ ಮೇಲೆ ನಿರ್ಧಾರವಾಗುತ್ತಿದ್ದವು. ಕೆಲವೊಮ್ಮೆ ಕರ್ನಾಟಕದ ವ್ಯಾಪ್ತಿ ದಕ್ಷಿಣ ಭಾರತದ ಗಡಿಯನ್ನು ಮೀರಿದ್ದು ಉಂಟು. ಅದೇ ರೀತಿ ನೆರೆಯ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಮತ್ತು ಕೇರಳದ ಬಹುಭಾಗ ಕರ್ನಾಟದ ವ್ಯಾಪ್ತಿಗೆ ಬಂದಿತ್ತು.[೬೯] ಆದರೆ, ಚಾರಿತ್ರಿಕ ದಾಖಲೆಗಳನ್ನು ಇಟ್ಟುಕೊಂಡು ಆ ಪ್ರದೇಶಗಳೆಲ್ಲವೂ ಕರ್ನಾಟಕ ಎಂಬುದಾಗಿ ಪರಿಗಣಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ವಸಾಹತುಶಾಹಿ ಆಳ್ವಿಕೆಯ ಕರ್ನಾಟಕಕ್ಕೂ, ಅದಕ್ಕಿಂತ ಹಿಂದಿನ ಕರ್ನಾಟಕಕ್ಕೂ ಹಾಗೂ ಏಕೀಕರಣೋತ್ತರ ಕರ್ನಾಟಕಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ.

ದಕ್ಷಿಣ ಭಾರತದಲ್ಲಿ ಬ್ರಿಟಿಷರಿಗೆ ಪ್ರಬಲ ಪ್ರತಿಸ್ಪರ್ಧಿಯಾಗಿದ್ದ ಟಿಪ್ಪು ಸುಲ್ತಾನನು ಕ್ರಿ.ಶ. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ - ಮೈಸೂರು ಯುದ್ಧದಲ್ಲಿ ಸೋತು ಸಾವನ್ನಪ್ಪಿದಾಗ ಬ್ರಿಟಿಷರು ಕರ್ನಾಟಕವನ್ನು ಮೈತ್ರಿಕೂಟದೊಂದಿಗೆ ಹಂಚಿಕೊಂಡರು. ಇದರ ಜೊತೆಗೆ ಕರ್ನಾಟಕದಲ್ಲಿದ್ದ ದೇಶಿ ಸಂಸ್ಥಾನಗಳು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಾಗ ಕರ್ನಾಟಕವು ಹಲವು ತುಂಡುಗಳಾಗಿ ಒಡೆದು ಹೋಯಿತು. ಕರ್ನಾಟಕವನ್ನು ಮೈಸೂರು ಸಂಸ್ಥಾನ, ಹೈದರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕ, ಮದರಾಸು ಕರ್ನಾಟಕ, ಕೊಡಗು ಮುಂತಾದ ೨೨ ಭಾಗಗಳನ್ನಾಗಿ ವಿಂಗಡಿಸಲಾಯಿತು. ಬ್ರಿಟಿಷರು ಈ ಇಪ್ಪತ್ತೆರಡು ವಿಭಾಗಗಳನ್ನು ಸ್ವಾನುಕೂಲ ದೃಷ್ಟಿಯಿಂದ ಐದು ವಿಭಾಗಗಳನ್ನಾಗಿ ಹಂಚಿಕೆ ಮಾಡಿಕೊಂಡಿದ್ದರು. ಅವುಗಳೆಂದರೆ;

೧. ಮೈಸೂರು ಕರ್ನಾಟಕ, ೨. ಮದರಾಸು ಕರ್ನಾಟಕ, ೩. ಮುಂಬಯಿ ಕರ್ನಾಟಕ, ೪. ಹೈದರಾಬಾದ್ ಕರ್ನಾಟಕ, ೫. ಕೊಡಗು.

೧೯ನೆಯ ಶತಮಾನದ ಆರಂಭದಲ್ಲಿಯೇ ಕರ್ನಾಟಕವನ್ನು ಐದು ವಿಭಾಗಗಳಾಗಿ ಹಂಚಲ್ಪಟ್ಟಾಗ ಬ್ರಿಟಿಷರು ಯಾವುದೇ ವೈಚಾರಿಕ ತಳಹದಿಯನ್ನು ಇಟ್ಟುಕೊಂಡಿರಲಿಲ್ಲ. ಭಾಷಾ ವಿಷಯಕವಾಗಲಿ ಅಥವಾ ಭೌಗೋಳಿಕ, ಆರ್ಥಿಕ, ಜನಾಂಗೀಯ ತಾತ್ವಿಕತೆಯನ್ನು ಆಧರಿಸಿದ ಈ ಹಂಚಿಕೆ ತಮ್ಮ 'ಒಡೆದು ಆಳುವ' ನೀತಿಗೆ ಅನುಸಾರವಾಗಿ ಸ್ವಾರ್ಥಪೂರಿತವಾಗಿತ್ತು. ಇಂತಹ ತೀರ್ಮಾನಗಳು ಕೇವಲ ಲಷ್ಕರೀ(ಮಿಲಿಟರಿ) ಮತ್ತು ಆಯಕಟ್ಟಿನ ಭದ್ರತಾ ದೃಷ್ಟಿಯಿಂದ ಜಾರಿಯಾಗಿದ್ದವು. ಇದರ ಪರಿಣಾಮವಾಗಿ ಕನ್ನಡಿಗರು ಆಡಳಿತ ಘಟಕಗಳಲ್ಲಿ ಹಂಚಿ ಹೋದದ್ದು ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಹಲವು ಮುಖ್ಯ ತೊಂದರೆಗಳನ್ನು ಅನುಭವಿಸುವಂತಾಯಿತು. ಪ್ರಸ್ತುತವು ಭಾಷಾ ಗಡಿಗಳು ಇಂದಿಗೂ ಸಮಸ್ಯೆಗಳಾಗಿಯೇ ಉಳಿದಿವೆ. ಅವುಗಳ ವಿಮುಕ್ತಿಗಾಗಿ ಆಲೋಚಿಸುವಂತಾಗಿದೆ. ಕರ್ನಾಟಕ ಐದು ಭಾಗಗಳಾಗಿ ವಿಭಾಗಿಸಲಾಗಿತ್ತು.

೧. ಮೈಸೂರು ಸಂಸ್ಥಾನ, ೨. ಮದರಾಸ್ ಕರ್ನಾಟಕ, ೩. ಮುಂಬಯಿ ಕರ್ನಾಟಕ, ೪. ಹೈದರಾಬಾದ್ ಸಂಸ್ಥಾನ, ೫. ಕೊಡಗು.

**೧. ಮೈಸೂರು ಸಂಸ್ಥಾನ :** ವಸಾಹತು ಭಾರತದ ಸುಮಾರು ೫೬೫ಕ್ಕಿಂತ ಹೆಚ್ಚು ದೇಶೀ ಸಂಸ್ಥಾನಗಳಲ್ಲಿ ಮೈಸೂರು ವಿಸ್ತೀರ್ಣದಲ್ಲಿ ಎರಡನೆಯ ದೊಡ್ಡ ಸಂಸ್ಥಾನ. ಕ್ರಿ.ಶ. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪು ಸೋತು ಕೊಲ್ಲಲ್ಪಟ್ಟ ನಂತರ ಆತನ ರಾಜ್ಯವನ್ನು ಹರಿದು ಹಂಚಿಕೊಳ್ಳಲಾಯಿತು. ಒಂದು ಬಾಗ ಬ್ರಿಟಿಷರಿಗೆ, ಇನ್ನೊಂದು ಭಾಗ ಹೈದರಾಬಾದ್ ನಿಜಾಮನ ಪಾಲಿಗೆ ಹೋದರೆ ಉಳಿದ ೫೦ ಲಕ್ಷ ರೂಪಾಯಿ ಉತ್ಪತ್ತಿಯಿರುವ ಪ್ರದೇಶವನ್ನು ಮೈಸೂರು ಅರಸರಿಗೆ ಬಿಟ್ಟುಕೊಟ್ಟು ಮೈಸೂರು ಸಂಸ್ಥಾನವನ್ನು ನಿರ್ಮಿಸಲಾಯಿತು.[೨೦] ಬೆಂಗಳೂರು, ಮೈಸೂರು, ಮಂಡ್ಯ, ಚಿಕ್ಕಮಗಳೂರು, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಕೋಲಾರ ಹಾಗೂ ಹಾಸನ ಜಿಲ್ಲೆಗಳನ್ನು ಒಳಗೊಂಡಿದ್ದ ಈ ಭಾಗವನ್ನು ದೀರ್ಘಕಾಲದಿಂದ ಮೈಸೂರು ಮಹಾರಾಜರು ಆಳುತ್ತಿದ್ದರು. ಆದರೆ, ಅದು ಬ್ರಿಟಿಷರ ನೇರ ಹತೋಟಿಯಲ್ಲಿದ್ದ ಆಶ್ರಿತ ಸಂಸ್ಥಾನವಾಗಿತ್ತು. ಕರ್ನಾಟಕದ ಕೇಂದ್ರವಾಗಿ ಮೈಸೂರು ಪ್ರಗತಿಪರ ಸಂಸ್ಥಾನವಾಗಿ ಬೆಳೆಯುತ್ತಿತ್ತು. ಅದು ಕನ್ನಡ ಸಂಸ್ಕೃತಿಯನ್ನು ಪೋಷಿಸುವತ್ತ ಮುಂದಾಗಿತ್ತು. ಅಂದಿನ ಕರ್ನಾಟಕದ ರಾಜಕೀಯದ ಸಂದರ್ಭದಲ್ಲಿ ಮೈಸೂರು ಸಂಸ್ಥಾನವು ಇಲ್ಲದೇ ಇದ್ದಲ್ಲಿ ಕರ್ನಾಟಕವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿತ್ತು ಎಂದರೆ ತಪ್ಪಾಗದು. ಬಾಲಕರಾಗಿದ್ದ ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ಪೂರ್ಣಯ್ಯನವರು ದಿವಾನರಾಗಿ ಆಳ್ವಿಕೆ ಮಾಡಿ ಮೈಸೂರನ್ನು ಅಭಿವೃದ್ಧಿಯ ಹಾದಿಗೆ ಕೊಂಡೊಯ್ದರು. ೧೮೧೦ರಲ್ಲಿ ಕೃಷ್ಣ ರಾಜರೇ ಆಡಳಿತವನ್ನು ವಹಿಸಿಕೊಂಡರು. ಆದರೆ, ೧೮೩೧ರಲ್ಲಿ ನಡೆದ ನಗರ ದಂಗೆಯಿಂದ ವಸಾಹತುಶಾಹಿಗಳು ನೇರವಾಗಿ ಮೈಸೂರಿನ ಆಡಳಿತ ವಹಿಸಿಕೊಳ್ಳುವಂತೆ ಮಾಡಿತು.[೨೧] ಈ ಘಟನೆಯಿಂದಾಗಿ ಮೈಸೂರು ಸಂಸ್ಥಾನವನ್ನು ವಸಾಹತುಶಾಹಿಗಳು ಐವತ್ತು ವರ್ಷಗಳ ಕಾಲ ಆಳಿದರು.

**೨. ಮದರಾಸು ಕರ್ನಾಟಕ :** ಮದರಾಸು ಭಾರತದ ನಾಲ್ಕನೆಯ ದೊಡ್ಡ ಪಟ್ಟಣ ಹಾಗೂ ಬಂದರು. ತಮಿಳುನಾಡಿನ ರಾಜಧಾನಿಯಾಗಿದ್ದ ಮದರಾಸನ್ನು ತಮಿಳಿನಲ್ಲಿ ಚೆನ್ನಪುರಿ, ಚೆನ್ನಪಟ್ಟಣ, ಚೆನ್ನೈ[೨೨] ಎಂದೂ ಕರೆಯುತ್ತಾರೆ. ಹದಿನೇಳನೆಯ ಶತಮಾನದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಫ್ರಾನ್ಸಿಸ್ ಡೇ ತಮಿಳುನಾಡಿನ ಆರ್ಮಗಂ ಬಳಿ ಒಂದು ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿಕೊಂಡು, ಯುರೋಪಿನ ಕೈಗಾರಿಕೆಗಳಿಗೆ ಅಗತ್ಯವಾಗಿದ್ದಂಥ ಕಚ್ಚಾ ವಸ್ತುಗಳನ್ನು ರಫ್ತು ಮಾಡುತ್ತಿದ್ದನು. ಇಲ್ಲಿನ ಮಾರುಕಟ್ಟೆಗೆ ಬೇಕಾಗಿದ್ದ ಸರಕುಗಳನ್ನು ಆಮದು ಮಾಡಿಕೊಂಡು ವ್ಯಾಪಾರ ಮಾಡುತ್ತಿದ್ದನು. ವಿಜಯನಗರ ಸಾಮ್ರಾಜ್ಯದ ಆಂಧ್ರಪ್ರದೇಶದಲ್ಲಿ ಆಡಳಿತ ಕೇಂದ್ರವಾಗಿದ್ದ ಚಂದ್ರಗಿರಿಯ ಮಹಾರಾಜನಿಂದ ಕ್ರಿ.ಶ. ೧೬೩೯ರಲ್ಲಿ ಮದರಾಸನ್ನು ವಶಪಡಿಸಿಕೊಂಡು 'ಮದರಾಶಿ ಪಟ್ಟಣಂ' ಎಂಬ ಪ್ರದೇಶದಲ್ಲಿ ಕೋಟೆಯೊಂದನ್ನು ಕಟ್ಟಿಕೊಂಡನು. ಅದೇ ಸೇಂಟ್ ಜಾರ್ಜ್ ಕೋಟೆ.[೨೩] ಭಾರತದ ಚೋಳ ಮಂಡಳ ತೀರವೆಂದು ಪ್ರಸಿದ್ಧವಾಗಿದ್ದ ಮದರಾಸು ಪೂರ್ವ ಕರಾವಳಿಯ ಮುಖ್ಯ ರೇವುಪಟ್ಟಣವಾಗಿ, ವ್ಯಾಪಾರ ಕೇಂದ್ರವಾಗಿ, ಬ್ರಿಟಿಷ್ ಆಡಳಿತದ ಕೇಂದ್ರವಾಗಿ

ಹಾಗೂ ಮಿಲಿಟರಿ ಸೇನೆಯು ನೆಲೆ ನಿಂತ ದಂಡು ಪ್ರದೇಶವಾಗಿತ್ತು. ಹೀಗೆ ಹಂತ ಹಂತವಾಗಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತಾ ಬೆಳೆದು ಬಂದ ಕಾರಣಕ್ಕಾಗಿ ಮದರಾಸು ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಪ್ರಬಲ ಹಾಗೂ ದೊಡ್ಡ ಪ್ರಾಂತವಾಗಿತ್ತು. ಇದರ ವ್ಯಾಪ್ತಿಯಲ್ಲಿ ಬಳ್ಳಾರಿ, ಕಡಪ, ಅನಂತಪುರ, ಬೆಂಗಳೂರಿನ ಕಂಟೋನ್ಮೆಂಟ್ ಏರಿಯಾ ನೀಲಗಿರಿ ಜಿಲ್ಲೆ ಹಾಗೂ ೧೮೬೨ರಲ್ಲಿ ಕೆನರಾ ಪ್ರಾಂತ್ಯವು ವಿಭಜನೆಗೊಂಡಾಗ ದಕ್ಷಿಣ ಕನ್ನಡವು ಮದರಾಸು ಪ್ರೆಸಿಡೆನ್ಸಿಯಲ್ಲಿ ಉಳಿಯಿತು.

**೩. ಮುಂಬಯಿ ಕರ್ನಾಟಕ :** ತುಂಗಭದ್ರಾ ನದಿಯ ಬಹುತೇಕ ಉತ್ತರ ಭಾಗವನ್ನು ಕ್ರಿ.ಶ. ೧೮೧೮ರವರೆಗೆ ಮರಾಠ ಪೇಶ್ವೆಗಳೇ ಆಳಿದರು. ಪೇಶ್ವೆಗಳ ಅಧಿಕಾರ ಕೊನೆಗೊಂಡಾಗ ಅವೆಲ್ಲವೂ ಬ್ರಿಟಿಷರ ವಶವಾಗಿ ನಂತರ ಮುಂಬಯಿ ಪ್ರಾಂತಕ್ಕೆ ಸೇರಿಸಲ್ಪಟ್ಟವು. ಕ್ರಿ.ಶ. ೧೬೬೨ರಲ್ಲಿ ಇಂಗ್ಲೆಂಡಿನ ಎರಡನೆಯ ಚಾರ್ಲ್ಸ್‌ನು ಪೋರ್ಚುಗಲ್‌ನ ರಾಜಕುಮಾರಿಯಾದ ಕ್ಯಾಥರೀನ್‌ಳನ್ನು ಮದುವೆಯಾದದ್ದಕ್ಕಾಗಿ ಪೋರ್ಚುಗೀಸನ ರಾಜ ತನ್ನ ಅಧೀನದಲ್ಲಿದ್ದ ಮುಂಬಯಿಯನ್ನು ವರದಕ್ಷಿಣೆಯಾಗಿ ನೀಡಿದನು.[೭] ಅಂದು ಮುಂಬಯಿ ಯುರೋಪಿಯನ್ನರಿಗೆ ಪ್ರಮುಖ ವ್ಯಾಪಾರ ಕೇಂದ್ರ ಹಾಗೂ ಬಂದರು ಪ್ರದೇಶವಾಗಿತ್ತು. ಇಂದು ಭಾರತದ ಅತಿ ದೊಡ್ಡ ನಗರಗಳಲ್ಲಿ ಎರಡನೆಯದು(ಮೊದಲನೆಯದು ಕಲ್ಕತ್ತ), ಇಲ್ಲಿ 'ಗೇಟ್ ವೇ ಆಫ್ ಇಂಡಿಯಾ' ಸಮುದ್ರ ತೀರದಲ್ಲಿರುವುದರಿಂದ ನಿಜವಾಗಿಯೂ ಭಾರತದ ಹೆಬ್ಬಾಗಿಲೆನಿಸಿದೆ.

ಮುಂಬಾದೇವಿಯ ಊರು ಮುಂಬಯಿ ಎಂದಾಯಿತು. ಐರೋಪ್ಯರು ಇದನ್ನು ಬಾಂಬೈ ಎಂದು ಕರೆದರು.[೮] ನಂತರ ದಿನಗಳಲ್ಲಿ ಸ್ಥಳೀಯರು ಬೊಂಬಾಯಿ ಎಂದು ಕರೆಯುತ್ತಿದ್ದರು.

೧೮ನೆಯ ಶತಮಾನದಲ್ಲಿ ಪೇಶ್ವೆಗಳ ವ್ಯಾಪ್ತಿಯಲ್ಲಿದ್ದ ಉತ್ತರ ಕರ್ನಾಟಕವು ೧೮೧೮ರಲ್ಲಿ ಪೇಶ್ವೆಗಿರಿ ಅವನತಿಯ ತರುವಾಯ ಇವರ ಅಧೀನದಲ್ಲಿದ್ದ ಎಲ್ಲಾ ಪ್ರದೇಶಗಳು ನೇರ ಆಳ್ವಿಕೆಗೆ ಒಳಗಾಗಿದ್ದವು. ಅದರಲ್ಲಿ ಗುಜರಾತಿನ ಕೆಲವು ಭಾಗಗಳು ಇಡೀ ಪಶ್ಚಿಮ ದಖ್ಖನ್, ಇಡೀ ಖಾಂದೇಶ, ಬೆಳಗಾವಿಯನ್ನು ಒಳಗೊಂಡ ಧಾರವಾಡ ಜಿಲ್ಲೆ, ಕ್ರಿ.ಶ. ೧೮೬೨ರಲ್ಲಿ ಕೆನರಾ ಪ್ರಾಂತ್ಯವು ವಿಭಜನೆಗೊಂಡಾಗ ಉತ್ತರ ಕನ್ನಡವು,[೬] ರತ್ನಗಿರಿ ಮತ್ತು ಕೊಲಾಬಾ ೧೮೪೮ರಲ್ಲಿ ಸಾತಾರ ರಾಜನ ಪ್ರದೇಶದಲ್ಲಿ ಸೇರಿದ್ದ ಬಿಜಾಪುರ ಜಿಲ್ಲೆ[೬] ಮುಂಬಯಿ ಪ್ರೆಸಿಡೆನ್ಸಿಗೆ ಸೇರಿದ್ದವು.

**೪. ಹೈದರಾಬಾದ್ ಸಂಸ್ಥಾನ :** ಹೈದರಾಬಾದ್ ಸಂಸ್ಥಾನವು ಕ್ರಿ.ಶ. ೧೭೨೪ರಲ್ಲಿ ನಿಜಾಮ್ ಎಲ್. ಮುಲ್ಕ್ ಅಸಫ್ ಝಾನಿಂದ ಸ್ಥಾಪಿಸಲ್ಪಟ್ಟಿತು. ೧೭೪೮ರ ನಂತರ ನವಾಬ ಪದವಿಗಾಗಿ ಮತ್ತೆ ಮತ್ತೆ ನಡೆದ ಯುದ್ಧಗಳು ಕರ್ನಾಟಕ್‌ನ ವ್ಯವಹಾರಗಳನ್ನು ಹದಗೆಡಿಸಿ, ಯುರೋಪಿನ ವ್ಯಾಪಾರೀ ಸಂಸ್ಥೆಗಳು ಭಾರತದ ರಾಜಕೀಯದಲ್ಲಿ ನೇರವಾಗಿ ಹಸ್ತಕ್ಷೇಪ ಮಾಡಲು ಅವಕಾಶ ಕಲ್ಪಿಸಿದವು. ಮುಸಲ್ಮಾನ ದೊರೆಗಳಾದ ಬಹಮನಿ ಅರಸರು ಹೈದರಾಬಾದ್ ಕರ್ನಾಟಕವೆಂದು ಹೆಸರಾಗಿರುವ ಬೀದರ್, ಗುಲ್ಬರ್ಗವನ್ನು ಆಳಿದರು. ಅನಂತರದಲ್ಲಿ ರಾಯಚೂರನ್ನೂ ಒಳಗೊಂಡ

ಬಿಜಾಪುರದ ಆದಿಲ್‌ಷಾಹಿಗಳು ಮತ್ತು ಬೀದರ್‌ನ ಬರೀದ್ ಷಾಹಿಗಳು ಆಳ್ವಿಕೆ ನಡೆಸಿದರು. ಷಾಹಿ ಸುಲ್ತಾನರ ನಂತರ ಈ ಮೂರು ಜಿಲ್ಲೆಗಳಲ್ಲಿ ಮರಾಠ ಪೇಶ್ವೆಗಳ ಪ್ರಭಾವದಿಂದ ಹೈದರಾಬಾದ್ ಕರ್ನಾಟಕದ ಕನ್ನಡದ ಜನತೆಯು ಮರಾಠಿ, ಉರ್ದು, ತೆಲುಗು ಭಾಷೆಗಳ ದಬ್ಬಾಳಿಕೆಗೆ ಈಡಾಗಿದ್ದರು. ಕ್ರಿ.ಶ. ೧೮ನೆಯ ಶತಮಾನದ ಆದಿಭಾಗದಲ್ಲಿ ಹೈದರಾಬಾದಿನ ನಿಜಾಮನು ಇದರ ಅಧಿಪತ್ಯವನ್ನು ವಹಿಸಿದ್ದನು. ಕ್ರಿ.ಶ. ೧೭೯೮ ಹಾಗೂ ೧೮೦೦ರಲ್ಲಿ ಹೈದರಾಬಾದ್ ನಿಜಾಮನಿಗೂ ಮತ್ತು ಬ್ರಿಟಿಷರಿಗೂ ಆದ ಒಪ್ಪಂದದ ಪ್ರಕಾರ ೨೪ ಲಕ್ಷ ರೂಪಾಯಿ ಕಂದಾಯ ಬರುವ ಪಾಲನ್ನು ನಿಜಾಮನಿಗೆ ಕೊಡಲಾಯಿತು.[೮] ನಿಜಾಮನು ಬ್ರಿಟಿಷರಿಗೆ ಕಂದಾಯ ಕಟ್ಟುವ ಬದಲಾಗಿ ತನ್ನ ವ್ಯಾಪ್ತಿಯಲ್ಲಿದ್ದ ಬಳ್ಳಾರಿ, ಕಡಪ, ಅನಂತಪುರ, ಜಿಲ್ಲೆಗಳನ್ನು ಸೀಡೆಡ್ ಡಿಸ್ಟ್ರಿಕ್ಟ್‌ಗಳೆಂದು ಘೋಷಿಸಿ, ಬಿಟ್ಟುಕೊಟ್ಟನು.

ಹೈದರಾಬಾದ್ ಸಂಸ್ಥಾನದಿಂದ ಹೊರಬಂದು ವಿಶಾಲ ಕರ್ನಾಟಕದಲ್ಲಿ ವಿಲೀನಗೊಂಡ ಕನ್ನಡದ ಮೂರು ಜಿಲ್ಲೆಗಳಾದ ರಾಯಚೂರು, ಕಲಬುರ್ಗಿ ಮತ್ತು ಬೀದರ್ ಪ್ರದೇಶವು ಹೈದರಾಬಾದ್ ಕರ್ನಾಟಕವೆಂದಾಗಿದೆ. ಸುದೀರ್ಘ ವರ್ಷಗಳ ನಂತರ ಹೈದರಾಬಾದ್ ಕರ್ನಾಟಕ ಈಗ 'ಕಲ್ಯಾಣ ಕರ್ನಾಟಕ'ವೆಂಬ ಹೊಸ ಹೆಸರನ್ನು ಪಡೆಯುವ ಸುದಿನ ಒದಗಿ ಬಂದಿರುವುದು ಸಂತೋಷದಾಯಕ, ಡಿಸೆಂಬರ್ ೧೧ ರಂದು ಕಲಬುರ್ಗಿಯಲ್ಲಿ ನಡೆದ ಗಣ್ಯರ ಸಭೆಯಲ್ಲಿ, ಕೇಂದ್ರ ಸಚಿವ ವೆಂಕಯ್ಯ ನಾಯ್ಡು ಅವರ ಸಮ್ಮುಖದಲ್ಲಿ ಈ ಪ್ರದೇಶವನ್ನು 'ಕಲ್ಯಾಣ ಕರ್ನಾಟಕ'ವೆಂದು ಘೋಷಿಸಲಾಯಿತು.[೯] ಆದರೆ, ಕೇಂದ್ರ ಸರ್ಕಾರದ ಮುದ್ರೆ ಬೀಳುವುದು ಬಾಕಿ ಉಳಿದಿದೆ.

ರಾಯಚೂರು, ಕಲಬುರ್ಗಿ ಮತ್ತು ಬೀದರ್ ಮೂಲದ ಈ ಮೂರು ಜಿಲ್ಲೆಗಳನ್ನು (ಕೊಪ್ಪಳ, ಯಾದಗಿರಿ ಜಿಲ್ಲೆಗಳು ಒಳಗೊಂಡಂತೆ) ಕಲ್ಯಾಣ ಕರ್ನಾಟಕ ಎಂಬ ನೂತನ ಹೆಸರಿಗೆ ತೊಡಕುಗಳು ಉದ್ಭವಿಸುತ್ತವೆ.

ಒಂದನೆಯದು: ಹೈದರಾಬಾದ್ ಸಂಸ್ಥಾನದಿಂದ ಬಂದ ಈ ಮೂರು ಜಿಲ್ಲೆಗಳಿಗೆ 'ಕಲ್ಯಾಣ ಕರ್ನಾಟಕ'ವೆಂದು ಕರೆಯುವುದು ಸೂಕ್ತ. ಈ ಮೂರು ಜಿಲ್ಲೆಗಳಷ್ಟೇ ಅಲ್ಲದೆ ಬಳ್ಳಾರಿ ಜಿಲ್ಲೆ ಸೇರಿ ನಾಲ್ಕೂ ಜಿಲ್ಲೆಗಳಿರುವ ಈ ಕಂದಾಯ ವಿಭಾಗವನ್ನು ಹೈದರಾಬಾದ್ ಕರ್ನಾಟಕವೆಂದು ಕರೆಯಲಾಗುತ್ತದೆ. ಈ ಕಂದಾಯ ವಿಭಾಗವನ್ನು ಈಗ ಕಲ್ಯಾಣ ಕರ್ನಾಟಕವೆಂದು ಹೆಸರಿಸುವುದು ಎಷ್ಟರಮಟ್ಟಿಗೆ ಸರಿ?

ಎರಡನೆಯದು: ಈ ಕಂದಾಯ ವಿಭಾಗದಿಂದ ಬಳ್ಳಾರಿ ಜಿಲ್ಲೆಯನ್ನು ಬೇರ್ಪಡಿಸಿ ಉಳಿದ ಮೂರು ಜಿಲ್ಲೆಗಳ ಕಂದಾಯ ವಿಭಾಗಕ್ಕೆ ಮಾತ್ರ ಕಲ್ಯಾಣ ಕರ್ನಾಟಕವೆಂದು ಹೊಸ ಹೆಸರಿನಿಂದ ಕರೆಯುವುದಾದರೆ ಮದರಾಸ್ ಪ್ರಾಂತ್ಯದಿಂದ ಬಂದ ಕನ್ನಡದ ಬಳ್ಳಾರಿ ಜಿಲ್ಲೆ ಯಾವ ವಿಭಾಗಕ್ಕೆ ಸೇರ್ಪಡೆಯಾಗುತ್ತದೆ? ಅದನ್ನೊಂದೇ 'ಮದರಾಸ್ ಕರ್ನಾಟಕ'ವೆಂದು ಕರೆಯಬೇಕೇ?

ಅದನ್ನು ಗುರುತಿಸುವುದಾದರೂ ಹೇಗೆ? ಇಲ್ಲಿದೆ ತೊಡಕು. ಈ ತೊಡಕನ್ನು ಬಿಡಿಸದೆಯೇ, ಕಲ್ಯಾಣ ಕರ್ನಾಟಕ ಎಂಬ ಹೊಸ ನಾಮಕರಣ ಅಷ್ಟು ಸುಲಭವಾಗಿ ಕಾಣಿಸದು. ಈ ತೊಡಕನ್ನು ಐತಿಹಾಸಿಕ, ಭೌಗೋಳಿಕ ಹಾಗೂ ವಾಸ್ತವಗಳ ದೃಷ್ಟಿಯಿಂದ ನಿವಾರಿಸಿ ಪರಿಹಾರ ಕಂಡುಕೊಳ್ಳಬೇಕಾಗಿದೆ. ಇದೊಂದು ಸವಾಲಾಗಿ ಪರಿಣಮಿಸಬಹುದು.

**೫. ಕೊಡಗು** : ವಿಜಯನಗರ ಸಾಮ್ರಾಜ್ಯ ಪತನದ ನಂತರ ಕೊಡಗು ಒಂದು ಚಿಕ್ಕಪಾಳೆಯಪಟ್ಟು. ಈ ಪ್ರದೇಶದಲ್ಲಿ ಕೊಡಗಿನ ೧೨ ಜನ ರಾಜ ಒಡೆಯರು ಕ್ರಿ.ಶ. ೧೬೦೦ರಿಂದ ೧೮೩೪ರವರೆಗೆ ಆಡಳಿತ ನಡೆಸಿದರು. ಏಪ್ರಿಲ್ ೧೮೩೪ರಲ್ಲಿ ಆಳ್ವಿಕೆ ಮಾಡುತ್ತಿದ್ದ ಚಿಕ್ಕವೀರರಾಜನ ಮೇಲೆ ಬ್ರಿಟಿಷರ ಸೈನ್ಯವು ದಾಳಿ ಮಾಡಿ, ಆತನ ಅಧಿಕಾರವನ್ನು ಪದಚ್ಯುತಗೊಳಿಸಿ, ತಾವೇ ನೇರ ಅಧಿಕಾರವನ್ನು ವಹಿಸಿಕೊಂಡರು. ಕೊಡಗು ಭಾರತ ಸರಕಾರದ ಒಂದು 'ನಾನ್ ರೆಗ್ಯೂಲೇಶನ್' ಪಾಂತ್ಯವೆಂದು ಪರಿಗಣಿತವಾಯಿತು.[೮೦](ಅಂದರೆ, ಯಾವುದೇ ಶಾಸನವನ್ನು ವಿಶೇಷ ನಿರ್ಣಯದಿಂದ ಜಾರಿ ಮಾಡಬಹುದಾಗಿತ್ತು). ಈ ಪ್ರಾಂತ್ಯದಲ್ಲಿ ಆರು ತಾಲೂಕುಗಳಿದ್ದವು. ಅವುಗಳೆಂದರೆ ಮಡಿಕೇರಿ, ಪಾಡಿನಾಲ್ಕು ನಾಡು(ನಾಪೊಕ್ಲು), ಎಡೆನಾಲ್ಕುನಾಡು (ವೀರರಾಜೇಂದ್ರ ಪೇಟೆ), ಕಿಗ್ಗಟ್ಟುನಾಡು(ಹುದಿಕೇರಿ), ನಂಜರಾಜಪಟ್ಟಣ(ಫ್ರೇಸರ್ ಪೇಟೆ) ಮತ್ತು ಏಳು ಸಾವಿರ ಸೀಮೆ(ಶನಿವಾರ ಪೇಟೆ)[೮೧] ಇವೆಲ್ಲವೂ ಬ್ರಿಟಿಷ್ ಆಡಳಿತಕ್ಕೆ ನೇರವಾಗಿ ಒಳಪಟ್ಟಿದ್ದವು.

**ವಸಾಹತುಕಾಲೀನ ಬಳ್ಳಾರಿ ಜಿಲ್ಲೆ**

ಬಳ್ಳಾರಿ ಪ್ರದೇಶವು ಒಂದು ಜಿಲ್ಲೆಯಾಗಿ ರೂಪುಗೊಂಡ ಚರಿತ್ರೆ ಕುತೂಹಲಕಾರಿಯಾಗಿದೆ. ಏಕೆಂದರೆ, ೧೮ನೆಯ ಶತಮಾನದ ಕೊನೆಯ ಘಟ್ಟದಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ, ಹೈದರಾಬಾದ್ ನಿಜಾಮ ಮತ್ತು ಮರಾಠರು ಮೂವರು ಒಂದು ಒಪ್ಪಂದ ಮಾಡಿಕೊಂಡು ಒಟ್ಟಾಗಿ ಟಿಪ್ಪು ಸುಲ್ತಾನನ ಮೇಲೆ ಕ್ರಿ.ಶ. ೧೭೯೨ರಲ್ಲಿ ಆಕ್ರಮಣ ನಡೆಸಿದರು. ಈ ಯುದ್ಧದಲ್ಲಿ ಟಿಪ್ಪುಸುಲ್ತಾನನು ಸೋತನು. ಇದರಿಂದಾಗಿ ಹರಪನಹಳ್ಳಿ, ರಾಯದುರ್ಗ, ಸಂಡೂರು ಸಂಸ್ಥಾನಗಳನ್ನು ಆಯಾ ಪಾಳೆಯಗಾರರಿಗೆ ಹಿಂತಿರುಗಿಸಲ್ಪಟ್ಟವು.[೮೨] ಉಳಿದ ಪ್ರದೇಶವು ನಿಜಾಮನ ವಶವಾಯಿತು. ಕ್ರಿ.ಶ. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ - ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನ ಮೇಲೆ ಬ್ರಿಟಿಷರು, ಮರಾಠರು ಹಾಗೂ ಹೈದರಾಬಾದ್ ನಿಜಾಮ್ - ಇವರುಗಳ ಸೈನ್ಯ ಆಕ್ರಮಣ ನಡೆಸಿತು. ಈ ಯುದ್ಧದಲ್ಲಿ ಹೋರಾಟ ಮಾಡುತ್ತಾ ಟಿಪ್ಪು ಶ್ರೀರಂಗಪಟ್ಟಣದಲ್ಲಿ ಹತನಾದನು. ಹರಪನಹಳ್ಳಿ ಸೇರಿದಂತೆ ಆರು ತಾಲೂಕುಗಳನ್ನು (ಹೊಸಪೇಟೆ ಪ್ರದೇಶವು ಸೇರಿತ್ತು) ಪೇಶ್ವೆಗೆ ವಹಿಸಲಾಯಿತು. ಜಿಲ್ಲೆಯ ಉಳಿದ ಭಾಗವನ್ನು ನಿಜಾಮನಿಗೆ ನೀಡಲಾಯಿತು. ಆದರೆ ಪೇಶ್ವೆಯು ಈ ಹಂಚಿಕೆಯನ್ನು ತಿರಸ್ಕರಿಸಿದನು. ನಂತರ ನಿಜಾಮ ಮತ್ತು ಬ್ರಿಟಿಷರು ಈ ಪ್ರದೇಶವನ್ನು ಹಂಚಿಕೊಂಡರು.[೮೩] ಅಂದು ಬ್ರಿಟಿಷರ ವಸಾಹತು ಅಧಿಪತ್ಯವು ಗಟ್ಟಿಯಾಗಿ ನೆಲೆಯೂರಿರಲಿಲ್ಲ.

ಕ್ರಿ.ಶ. ೧೭೯೮ರಲ್ಲಿ ಭಾರತಕ್ಕೆ ಗೌವರ್ನರ್ ಜನರಲ್ ಆಗಿ ಬಂದ ಲಾರ್ಡ್ ವೆಲ್ಲೆಸ್ಲಿಯು ತಮ್ಮ ರಾಜ್ಯ (ಸಾಮ್ರಾಜ್ಯಶಾಹಿಯ) ವಿಸ್ತರಣಾ ನೀತಿಯನ್ನು ಸಾಧಿಸಲು ಮೂರು ವಿಧಾನಗಳ ಮೇಲೆ ಅವಲಂಬಿತನಾಗಿದ್ದ. ಒಂದು ಸಹಾಯಕ ಸೈನ್ಯ ಪದ್ಧತಿ, ಎರಡು ಪೂರ್ಣ ಪ್ರಮಾಣದ ಯುದ್ಧ, ಮೂರು ಹಿಂದಿನ ಅಧೀನ ರಾಜರ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುವುದು.[೮೪] ಲಾರ್ಡ್ ವೆಲ್ಲೆಸ್ಲಿಯು ಕ್ರಿ.ಶ. ೧೭೯೮ರಲ್ಲಿ ಜಾರಿಗೆ ತಂದ ಸಹಾಯಕ ಸೈನ್ಯ ಪದ್ಧತಿಯಿಂದ ಭಾರತೀಯ ರಾಜ್ಯದ ರಾಜನು ಬ್ರಿಟಿಷ್ ಸೈನ್ಯಕ್ಕೆ ತನ್ನ ರಾಜ್ಯದಲ್ಲಿ ಶಾಶ್ವತ ನೆಲೆಯನ್ನು ನೀಡಬೇಕಾಗುತ್ತಿತ್ತು ಮತ್ತು ಸೈನ್ಯದ ವ್ಯವಸ್ಥೆಯ ವೆಚ್ಚವನ್ನು ನೀಡಬೇಕಾಗಿತ್ತು. ಇದೆಲ್ಲವನ್ನು ವೆಲ್ಲೆಸ್ಲಿಯು ತನ್ನ ರಕ್ಷಣೆಯ ನೆಪಕ್ಕಾಗಿ ಮಾಡಿಕೊಂಡರೂ, ಭಾರತೀಯ ರಾಜರು ಕಂಪನಿಗೆ ಕಾಣಿಕೆ ನೀಡಬೇಕಾಗಿತ್ತು. ಕೆಲವು ಸಂದರ್ಭಗಳಲ್ಲಿ ದೇಶಿ ರಾಜರು ವಾರ್ಷಿಕ ಸಹಾಯಧನವನ್ನು ನೀಡಲು ಸಾಧ್ಯವಾಗದೆ ಇದ್ದಾಗ ಅದರ ಬದಲು ತಮ್ಮ ತಮ್ಮ ಒಂದು ಪ್ರದೇಶವನ್ನು ಒತ್ತೆಯಾಗಿ ಕಾಣಿಕೆ ನೀಡುತ್ತಿದ್ದರು. ಈ ಒಪ್ಪಂದಕ್ಕೆ ಸಹಿ ಹಾಕಿದ ಭಾರತದ ಮೊಟ್ಟ ಮೊದಲ ಅರಸ ಹೈದರಾಬಾದ್ ನಿಜಾಮ್, ಲಾರ್ಡ್ ವೆಲ್ಲೆಸ್ಲಿಯು ಹೈದರಾಬಾದ್ ನಿಜಾಮ್‌ನೊಂದಿಗೆ ಕ್ರಿ.ಶ. ೧೭೯೮ ಮತ್ತು ೧೮೦೦ರಲ್ಲಿ ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದಗಳಿಗೆ ಸಹಿ ಮಾಡಿದ್ದ.[೮೫] ಸಹಾಯಕ ಸೈನ್ಯ ಪದ್ಧತಿಯ ಸೈನ್ಯದ ವೆಚ್ಚಕ್ಕಾಗಿ ನಗದು ಹಣದ ಬದಲಿಗೆ ನಿಜಾಮನು ತನ್ನ ಪ್ರಾಂತದಲ್ಲಿದ್ದ ಬಳ್ಳಾರಿ, ಅನಂತಪುರ, ಕರ್ನೂಲು ಮತ್ತು ಕಡಪ ಜಿಲ್ಲೆಗಳನ್ನು ಸಂಭಾವನೆ ಬಾಬ್ತು ಬ್ರಿಟಿಷರಿಗೆ ಕಾಣಿಕೆಯಾಗಿ ನೀಡಿದನು.[೮೬] ಕ್ರಿ.ಶ. ೧೮೦೦ರಲ್ಲಿ ಹೈದರಾಬಾದ್ ನಿಜಾಮನಿಂದ ಬ್ರಿಟಿಷರಿಗೆ ಪ್ರಾಪ್ತವಾದ ಜಿಲ್ಲೆಗಳನ್ನು 'Ceded Districts' (ಸೀಡೆಡ್ ಡಿಸ್ಟ್ರಿಕ್ಟ್) ಅಥವಾ ದತ್ತ ಮಂಡಲ ಎಂದು ಕರೆಯಲಾಗಿದೆ. ಬ್ರಿಟಿಷರು ಬಳ್ಳಾರಿ ಪ್ರದೇಶವನ್ನು ಮದರಾಸು ಪ್ರಾಂತಕ್ಕೆ ಸೇರಿಸಿಕೊಂಡರು. ಅಂದು ಮದರಾಸು ಪ್ರಾಂತದಲ್ಲಿಯೇ ಬಳ್ಳಾರಿ ಒಂದು ದೊಡ್ಡ ಜಿಲ್ಲೆಯಾಗಿತ್ತು. ಬಳ್ಳಾರಿ ಪ್ರದೇಶವನ್ನು ಬ್ರಿಟಿಷರು ೧೫೩ ವರ್ಷಗಳ ಕಾಲ ಆಳಿದರು. ಕ್ರಿ.ಶ. ೧೮೦೦ ರಿಂದ ೧೮೫೮ರವರೆಗೆ ಈಸ್ಟ್ ಇಂಡಿಯಾ ಕಂಪನಿಯು ಆಳ್ವಿಕೆ ಮಾಡಿದರೆ, ೧೮೫೮ರಿಂದ ೧೯೫೩ರವರೆಗೆ ಬ್ರಿಟಿಷ್ ಚಕ್ರಾಧಿಪತ್ಯವೂ ಬಳ್ಳಾರಿ ಪ್ರದೇಶವನ್ನು ಆಳಿದವು.

ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಪ್ರದೇಶವು ಈಸ್ಟ್ ಇಂಡಿಯಾ ಕಂಪನಿಯ ನೇರ ಆಳ್ವಿಕೆಗೆ ಒಳಪಟ್ಟಾಗ ಅದರ ಪ್ರಥಮ ಕಲೆಕ್ಟರ್ ಆಗಿ ಸರ್ ಥಾಮಸ್ ಮನ್ರೋ ಅಧಿಕಾರ ವಹಿಸಿಕೊಂಡರೆ, ಜನರಲ್ ಡುಗಾಲ್ಡ್ ಕಾಂಪೆಬೆಲ್ ಸೈನ್ಯದ ಮುಖ್ಯಸ್ಥನಾಗಿ ನೇಮಕಗೊಂಡನು.[೮೭] ಇವರಿಬ್ಬರು ಬಳ್ಳಾರಿಗೆ ಆಗಮಿಸಿದ ಸಂದರ್ಭದಲ್ಲಿದ್ದ ಗಲಭೆಯ ವಾತಾವರಣವನ್ನುಡಗಿಸಿ ಶಾಂತಿ-ಸುವ್ಯವಸ್ಥೆಯನ್ನು ಜಾರಿಗೆ ತರುವುದರಲ್ಲಿ ಮಾತ್ರವಲ್ಲದೆ, ಏಕರೂಪದ ಆಡಳಿತವನ್ನು ಒದಗಿಸುವುದರಲ್ಲೂ ತುಂಬ ಪರಿಶ್ರಮ ಮಾಡಬೇಕಾಯಿತು.

ಪ್ರಾಮಾಣಿಕ ಹಾಗೂ ಒಳ್ಳೆಯ ಅಧಿಕಾರಿಯನ್ನು ಜನ ಹೇಗೆ ಗೌರವಿಸುತ್ತಾರೆ ಎಂಬುವುದಕ್ಕೆ ನಿದರ್ಶನ ಸರ್ ಥಾಮಸ್ ಮನ್ರೋ. ಅವನು ೧೭೭೯ ರಿಂದ ೧೮೦೭ರವರೆಗೆ ಭಾರತದಲ್ಲಿ

ಸೇವೆ ಸಲ್ಲಿಸಿದ ಒಬ್ಬ ದಕ್ಷ ಆಂಗ್ಲ ಅಧಿಕಾರಿ. ಎರಡನೇ ಮತ್ತು ಮೂರನೇ ಆಂಗ್ಲೋ-ಮೈಸೂರು ಯುದ್ಧ, ಮೂರನೇ ಮರಾಠ ಯುದ್ಧದಲ್ಲಿ ಪಾಲ್ಗೊಂಡು ಈಸ್ಟ್ ಇಂಡಿಯಾ ಕಂಪನಿಯಿಂದ ಶ್ಲಾಘನೆಗೆ ಒಳಗಾಗಿದ್ದ ಬಳ್ಳಾರಿ, ಮಂಗಳೂರು, ಮದ್ರಾಸ್ ಮತ್ತಿತರ ಕಡೆ ಬ್ರಿಟಿಷ್ ಅಧಿಕಾರಿಯಾಗಿ ಜನರ ಪ್ರೀತಿಗಳಿಸಿದ್ದನು. ಅವನು ಸೇವೆ ಸಲ್ಲಿಸಿದ ಸ್ಥಳಗಳಲ್ಲಿನ ಅಲ್ಲಿನ ಪ್ರಾದೇಶಿಕ ಭಾಷೆಯನ್ನೇ ಆಡಳಿತ ಭಾಷೆಯನ್ನಾಗಿ ಬಳಸಿದ ಮೊದಲ ಆಂಗ್ಲ ಅಧಿಕಾರಿ. ಹೀಗಾಗಿ ಅವನು ಸೇವೆ ಸಲ್ಲಿಸಿದ ಸ್ಥಳಗಳಲ್ಲಿ ಜನರೇ ಅವನ ಮೂರ್ತಿಯನ್ನು ನಿಲ್ಲಿಸಿ ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿದ್ದಾರೆ. ಆಂಧ್ರಪ್ರದೇಶದ ಪತ್ತಿಕೊಂಡ ತಾಲೂಕು ಕಛೇರಿಯ ಮುಂಭಾಗದ ಗೋಡೆಯಲ್ಲಿ ಆತನ ಮೂರ್ತಿ ಹಾಗೂ ತೆಲುಗು ಮತ್ತು ಆಂಗ್ಲ ಲಿಪಿಯಲ್ಲಿ ಆರು ಸಾಲುಗಳನ್ನು ಕೆತ್ತಿಸಿರುವುದನ್ನು ಗಮನಿಸಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಪ್ರಥಮ ಕಲೆಕ್ಟರಾಗಿ ಕಾರ್ಯನಿರ್ವಹಿಸುವಂತಹ ಸಂದರ್ಭದಲ್ಲಿ ಇದ್ದ ಗಲಭೆಯನ್ನು ಅಡಗಿಸಿ, ಶಾಂತಿ ಸುವ್ಯವಸ್ಥೆಯನ್ನು ತರುವುದರಲ್ಲಿ ಮಾತ್ರವಲ್ಲದೆ, ಒಳ್ಳೆಯ ಗಮನಾರ್ಹ ಸಾಧನೆಗಳನ್ನು ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ಸ್ಥಳೀಯ ಜನರು ಆತನನ್ನು ಮನ್ರಪ್ಪ, ಮುನ್ರಪ್ಪನೆಂದು ಪ್ರೀತಿಯಿಂದ ಕರೆಯುತ್ತಿದ್ದರು. ಥಾಮಸ್ ಮನ್ರೋ ಎಲ್ಲಿಯೇ ಸೇವೆ ಸಲ್ಲಿಸಲಿ ಅಲ್ಲಿ ಸಾಮಾನ್ಯ ಜನರೊಡನೆ ಬೆರೆತು, ಅವರ ಕುಂದು ಕೊರತೆಗಳನ್ನು ಆಲಿಸಿ ಅವರಿಗೆ ತಕ್ಷಣ ಪರಿಹಾರ ಸೂಚಿಸುತ್ತಿದ್ದರು. ಇದರಿಂದಾಗಿ ಜನ ಅವರೊಡನೆ ಯಾವುದೇ ಭಯವಿಲ್ಲದೆ ವ್ಯವಹರಿಸುತ್ತಿದ್ದರು. ಮನ್ರೋ ಮದ್ರಾಸ್ ಗವರ್ನರ್ ಆಗಿದ್ದಾಗ ಆತ ಎಷ್ಟು ಜನಪ್ರಿಯತೆ ಗಳಿಸಿದ್ದನೆಂದರೆ ಶಿಲ್ಪಿಯೊಬ್ಬ ಕುದುರೆಯ ಮೇಲೆ ಮನ್ರೋ ಕುಳಿತಿರುವಂತೆ ಪ್ರತಿಮೆಯನ್ನು ನಿರ್ಮಿಸಿ, ಇನ್ನೇನು ಅದನ್ನು ಅನಾವರಣ ಮಾಡಬೇಕೆನ್ನುವಷ್ಟರಲ್ಲಿ ಆ ಶಿಲ್ಪ ತುಂಬಾ ಚೆನ್ನಾಗಿ ಮೂಡಿಬಂದಿದೆಯಾದರೂ ಅದರಲ್ಲಿ ಕುದುರೆಯ ಕಡಿವಾಣ ಮಾತ್ರ ಸರಿ ಬರಲಿಲ್ಲವೆಂದು ಕೆಲವುರ ಅಪಸ್ವರ ಎತ್ತಿದಾಗ ಆ ಶಿಲ್ಪಿಯು 'ನನ್ನಿಂದ ಮಹಾತ್ಮನಿಗೆ ಅಪಚಾರವಾಯಿತು ಎಂದು ಭಾವಿಸಿ ಆತ್ಮಹತ್ಯೆ ಮಾಡಿಕೊಂಡನೆಂದು ಹೇಳುತ್ತಾರೆ. ಹೀಗೆ ಸರ್ ಥಾಮಸ್ ಮನ್ರೋ ತನ್ನ ಶ್ರೇಷ್ಠ ಕಾರ್ಯಗಳಿಂದ ಮತ್ತು ಉತ್ತಮ ಭಾವನೆಗಳಿಂದ ಜನರ ಮನಸ್ಸನ್ನು ಸೂರೆಗೊಂಡ ಒಬ್ಬ ಯಶಸ್ವಿ ಅಧಿಕಾರಿಯಾಗಿದ್ದ. ಸರ್ ಥಾಮಸ್ ಮನ್ರೋ ಸೀಡೆಡ್ ಜಿಲ್ಲೆಗಳಿಗೆ ಪ್ರಧಾನ ಜಿಲ್ಲಾಧಿಕಾರಿಯಾಗಿ ಬಂದಾಗ ಅನಂತಪುರವನ್ನು ಪ್ರಧಾನ ವಾಸ್ತವ್ಯವನ್ನಾಗಿ ಮಾಡಿಕೊಂಡು ಆಡಳಿತ ನಿರ್ವಹಿಸುತ್ತಿದ್ದನು. ಮನ್ರೋ ಆಡಳಿತದ ಅನುಕೂಲಕ್ಕಾಗಿ ಸ್ವಾಧೀನಪಡಿಸಿಕೊಂಡ ಜಿಲ್ಲೆಗಳ ವ್ಯಾಪ್ತಿಯನ್ನು ನಾಲ್ವರು ಉಪಜಿಲ್ಲಾಧಿಕಾರಿಗಳಿಗೆ(Sub-Collectrates) ಹಂಚುತ್ತಾನೆ. ಸ್ವತಃ ಮನ್ರೋ ಅನಂತಪುರ ಜಿಲ್ಲೆ ಮತ್ತು ರಾಯದುರ್ಗ ತಾಲೂಕಿನ ಹೊಣೆಗಾರಿಕೆಯನ್ನು ಹೊತ್ತಿದ್ದನು. ಆದವಾನಿಯ ಉಪಜಿಲ್ಲಾಧಿಕಾರಿಯಾಗಿದ್ದ ವಿಲಿಯಂ ಥ್ಯಾಕರೆಯು ಆಲೂರು ಮತ್ತು ಆದೋನಿ ತಾಲೂಕುಗಳನ್ನು ಮತ್ತು ಕರ್ನೂಲ್ ಜಿಲ್ಲೆಯ ಸೇರ್ಪಡೆಯ ಕೆಲವು ಭಾಗಗಳ ಹೊಣೆಗಾರಿಕೆಯನ್ನು ಹೊತ್ತಿದ್ದನು.[೮೮] ಹರಪನಹಳ್ಳಿಯ ಉಪಜಿಲ್ಲಾಧಿಕಾರಿಯಾಗಿದ್ದ

ಜೇಮ್ಸ್ ಕೊಕೊರೆನ್‌ನು ಬಳ್ಳಾರಿ ಮತ್ತು ಪಶ್ಚಿಮ ತಾಲೂಕುಗಳ ಜವಾಬ್ದಾರಿಯನ್ನು ಹೊತ್ತಿದ್ದನು.[೮೯] ಇನ್ನೂ ಇಬ್ಬರು ಉಪಜಿಲ್ಲಾಧಿಕಾರಿಗಳು ದತ್ತು ಮಂಡಲದ ಉಳಿದ ಭಾಗವನ್ನು ನೋಡಿಕೊಳ್ಳುತ್ತಿದ್ದರು.

ಕ್ರಿ.ಶ. ೧೮೦೮ರಲ್ಲಿ ಸೀಡೆಡ್ ಜಿಲ್ಲೆಗಳನ್ನು ಬಳ್ಳಾರಿ ಮತ್ತು ಕಡಪ ಜಿಲ್ಲಾಧಿಕಾರಿಗಳಿಗೆ ವಿಂಗಡಿಸಲಾಯಿತು.[೯೦] ಬಳ್ಳಾರಿ ಜಿಲ್ಲೆಯಲ್ಲಿದ್ದ ೧೮ ತಾಲೂಕುಗಳನ್ನು ವಿಭಾಗಿಸಿ ೧೫ ತಾಲೂಕುಗಳನ್ನು ಬಳ್ಳಾರಿ ಜಿಲ್ಲೆಗೆ, ಉಳಿದ ಮೂರು ತಾಲೂಕುಗಳನ್ನು ಕಡಪ ಜಿಲ್ಲೆಯ ವ್ಯಾಪ್ತಿಗೆ ಸೇರಿಸಲಾಯಿತು. ಬಳ್ಳಾರಿ ಜಿಲ್ಲೆಯಲ್ಲಿದ್ದ ೧೫ ತಾಲೂಕುಗಳೆಂದರೆ, ೧. ಧರ್ಮಾವರಂ, ೨. ಪೆನುಗೊಂಡ, ೩. ಹಿಂದೂಪುರ, ೪. ಮಡಕಶಿರ, ೫. ಗುತ್ತಿ, ೬. ತಾಡಪತ್ರಿ, ೭. ಅನಂತಪುರ, ೮. ಬಳ್ಳಾರಿ, ೯. ಹೊಸಪೇಟೆ, ೧೦. ಕೂಡ್ಲಿಗಿ, ೧೧. ಹಡಗಲಿ, ೧೨. ಹರಪನಹಳ್ಳಿ, ೧೩. ರಾಯದುರ್ಗ, ೧೪. ಆಲೂರು ಮತ್ತು ೧೫. ಆದೋನಿ.[೯೧]

ಕ್ರಿ.ಶ. ೧೮೮೨ರಲ್ಲಿ ಬಳ್ಳಾರಿ ಜಿಲ್ಲಾಡಳಿತವು ಬಳ್ಳಾರಿ ಜಿಲ್ಲೆಯನ್ನು ಬಳ್ಳಾರಿ ವಿಭಾಗ ಮತ್ತು ಅನಂತಪುರ ವಿಭಾಗ ಎಂದು ಪುನರ್‌ವಿಂಗಡಣೆಗೆ ಮಾಡಲಾಯಿತು. ಬಳ್ಳಾರಿ ಜಿಲ್ಲೆಯಲ್ಲಿದ್ದ ಹದಿನೈದು ತಾಲೂಕುಗಳನ್ನು ಅನಂತಪುರ ಆಡಳಿತ ವಿಭಾಗಕ್ಕೆ ಮೊದಲ ಏಳು ತಾಲೂಕುಗಳನ್ನು ಸೇರಿಸಿ ಅನಂತಪುರ ಜಿಲ್ಲೆಯನ್ನು ರಚಿಸಲಾಯಿತು. ಬಳ್ಳಾರಿ ಜಿಲ್ಲಾ ಆಡಳಿತ ವಿಭಾಗಕ್ಕೆ ಉಳಿದ ಎಂಟು ತಾಲೂಕುಗಳನ್ನು ಸೇರಿಸಲಾಯಿತು.[೯೨] ಅಂದು ಬಳ್ಳಾರಿಯು ಒಂದು ಸ್ವಾತಂತ್ರ್ಯ ಜಿಲ್ಲೆಯಾಗಿ ರೂಪುಗೊಂಡಿತು. ಅನಂತರ ಬಳ್ಳಾರಿ ಜಿಲ್ಲೆಯನ್ನು ಕಾಲಾನುಸಾರದಲ್ಲಿ ಅಧಿಕಾರದ ಪರಧಿಯನ್ನು ತಾಲೂಕುಗಳಾಗಿ ವಿಭಜಿಸಲಾಯಿತು.

ಕ್ರಿ.ಶ. ೧೯೦೦ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿದ್ದ ೮ ತಾಲೂಕುಗಳನ್ನು ಆಡಳಿತದ ಅನುಕೂಲಕ್ಕಾಗಿ ಮೂರು ಉಪ ವಿಭಾಗಗಳಾಗಿ ಸಂಘಟಿಸಲಾಗಿತ್ತು. ಬಳ್ಳಾರಿ, ಆದೋನಿ ಮತ್ತು ಹೊಸಪೇಟೆ ಈ ಮೂರು ಉಪವಿಭಾಗಗಳಾಗಿದ್ದವು. ಬಳ್ಳಾರಿ ಉಪವಿಭಾಗದಲ್ಲಿ ಬಳ್ಳಾರಿ ಮತ್ತು ರಾಯದುರ್ಗ ತಾಲೂಕು, ಆದೋನಿ ಉಪವಿಭಾಗದಲ್ಲಿ ಆದೋನಿ ಮತ್ತು ಆಲೂರು ತಾಲೂಕು ಮತ್ತು ಹೊಸಪೇಟೆ ಉಪವಿಭಾಗದಲ್ಲಿ ಹೊಸಪೇಟೆ, ಹರಪನಹಳ್ಳಿ, ಕೂಡ್ಲಿಗಿ ಮತ್ತು ಹಡಗಲಿ ತಾಲೂಕುಗಳು ಸೇರಿದ್ದವು. ಹೊಸಪೇಟೆ ಉಪವಿಭಾಗದ ವ್ಯಾಪ್ತಿ ವಿಶಾಲವಾಗಿದ್ದುದ್ದರಿಂದ ಅಲ್ಲಿ ಉಪಕಲೆಕ್ಟರ್ ಅವರ ಕಛೇರಿಯನ್ನು ತೆರೆಯಲಾಗಿತ್ತು.[೯೩]

ಕ್ರಿ.ಶ. ೧೯೧೦ ಆಕ್ಟೋಬರ್ ೧ರಲ್ಲಿ ಬಳ್ಳಾರಿ ತಾಲೂಕಿನ ೪೬ ಗ್ರಾಮಗಳು, ಆದೋನಿ ತಾಲೂಕಿನ ೨೯ ಗ್ರಾಮಗಳು, ಆಲೂರು ತಾಲೂಕಿನ ೨೩ ಗ್ರಾಮಗಳು - ಒಟ್ಟು ೯೮ ಗ್ರಾಮಗಳನ್ನು ಸೇರಿಸಿ "ಸಿರುಗುಪ್ಪ"ವನ್ನು ಹೊಸ ತಾಲೂಕನ್ನಾಗಿ ರಚಿಸಲಾಯಿತು.[೯೪] ಇದೇ ಅವಧಿಯಲ್ಲಿ ರಾಯದುರ್ಗ ಮತ್ತು ಕೂಡ್ಲಿಗಿ ತಾಲೂಕುಗಳನ್ನು ಸೇರಿಸಿ ರಾಯದುರ್ಗ ವಿಭಾಗವನ್ನು ರಚಿಸಲಾಯಿತು. ಇದರಿಂದ ಬಳ್ಳಾರಿ ಜಿಲ್ಲೆಯಲ್ಲಿ ೪ ವಿಭಾಗಗಳನ್ನು ಮಾಡಲಾಯಿತು.

| ವಿಭಾಗ | | ತಾಲೂಕುಗಳು |
|---|---|---|
| ೧. ರಾಯದುರ್ಗ | - | ರಾಯದುರ್ಗ, ಕೂಡ್ಲಿಗಿ |
| ೨. ಹೊಸಪೇಟೆ | - | ಹಡಗಲಿ, ಹರಪನಹಳ್ಳಿ, ಹೊಸಪೇಟೆ |
| ೩. ಆದೋನಿ | - | ಆದೋನಿ, ಆಲೂರು |
| ೪. ಬಳ್ಳಾರಿ | - | ಬಳ್ಳಾರಿ ಮತ್ತು ಸಿರುಗುಪ್ಪ |

೧೯೨೩ ಏಪ್ರಿಲ್ ೧ ರಂದು ಮತ್ತೊಮ್ಮೆ ಗಮನಾರ್ಹ ವಿಭಜನೆ ಮಾಡಲಾಯಿತು. ಬಳ್ಳಾರಿ ತಾಲೂಕಿಗೆ ೪೬ ಗ್ರಾಮಗಳನ್ನು ಆದೋನಿಗೆ ೪೨ ಹಾಗೂ ಆಲೂರಿಗೆ ೬ ಗ್ರಾಮಗಳನ್ನು ಹಂಚುವುದರ ಮೂಲಕ ಸಿರುಗುಪ್ಪ ತಾಲೂಕನ್ನು ನಕ್ಷೆಯಿಂದ ತೆಗೆದು ಹಾಕಲಾಯಿತು. ಅದೇ ದಿನದಂದೇ ಆದೋನಿ ತಾಲೂಕಿನ ೧೧ ಗ್ರಾಮಗಳನ್ನು ಆಲೂರು ತಾಲೂಕಿಗೆ ಮತ್ತು ಬಳ್ಳಾರಿ ತಾಲೂಕಿನ ೧೦ ಗ್ರಾಮಗಳನ್ನು ರಾಯದುರ್ಗ ತಾಲೂಕಿಗೆ ಸೇರಿಸಲಾಯಿತು.[೫೫] ಪುನಃ ೧೫-೦೪-೧೯೨೯ರಂದು ಆದೋನಿ ತಾಲೂಕಿನ ವಾಯುವ್ಯ ಭಾಗದ ೩೩ ಗ್ರಾಮಗಳನ್ನು, ಆಲೂರು ತಾಲೂಕಿನ ಉತ್ತರ ಭಾಗದ ೭ ಗ್ರಾಮಗಳನ್ನು ಅಂದರೆ ಗರಿ ನದಿಯನ್ನೊಳಗೊಂಡಂತೆ ಇರುವ ಬಳ್ಳಾರಿ ತಾಲೂಕು, ಸಿರುಗುಪ್ಪ ಉಪತಹಶೀಲ್ದಾರ ವಿಭಾಗ(Deputy Tahislder Division of Bellari Taluk)ವನ್ನು ಸೇರಿಸಿ "ಸಿರುಗುಪ್ಪ'ವನ್ನು ಹೊಸ ತಾಲೂಕನ್ನಾಗಿ ರಚಿಸಿ, ಸಿರುಗುಪ್ಪವನ್ನು ತಾಲೂಕು 'ಪ್ರಾಚೀನ ವಾಸ್ತವ್ಯ'ಕ್ಕೆ ಅಳವಡಿಸಲಾಯಿತು. ಮಾರ್ಪಾಟ್ಟಾದ ಉಳಿದ ಬಳ್ಳಾರಿ ವಿಭಾಗಕ್ಕೆ ಬಳ್ಳಾರಿಯನ್ನು ಪ್ರಾಧಾನ ವಾಸ್ತವ್ಯವನ್ನಾಗಿ ಮಾಡಲಾಯಿತು".[೫೬]

೧೯೩೧ರಲ್ಲಿ ಹಡಗಲಿಯನ್ನು ಉಪತಾಲೂಕನ್ನಾಗಿ ಪರಿವರ್ತಿಸಿ ಸ್ವತಂತ್ರ ಉಪ ತಹಶೀಲ್ದಾರರ ಆಡಳಿತ ವ್ಯಾಪ್ತಿಗೆ ತಂದು ಆ ತಾಲೂಕಿನ ೨೪ ಗ್ರಾಮಗಳನ್ನು ಹರಪನಹಳ್ಳಿಗೆ ವರ್ಗಾವಣೆ ಮಾಡಲಾಯಿತು. ೧೯೪೧ರಲ್ಲಿ ಹಡಗಲಿಯನ್ನು ಪುನಃ ತಾಲೂಕಾಗಿ ರೂಪಿಸಿ ಆ ೨೪ ಗ್ರಾಮಗಳನ್ನು ಪುನಃ ಹಡಗಲಿಗೆ ಸೇರಿಸಲಾಯಿತು.[೫೭]

ಕ್ರಿ.ಶ. ೧೯೪೫ಕ್ಕಿಂತ ಮುಂಚೆ ಮಲ್ಲಾಪುರ ಒಂದು ಸಬ್ ತಾಲೂಕು ಆಗಿತ್ತು. ಈ ಗ್ರಾಮದ ಪಕ್ಕದಲ್ಲಿ ಮದರಾಸ್ ಮತ್ತು ಹೈದರಾಬಾದ್ ಸಂಸ್ಥಾನಗಳ ಜಂಟಿ ಯೋಜನೆಯಲ್ಲಿ ತುಂಗಭದ್ರಾ ಅಣೆಕಟ್ಟನ್ನು ಕಟ್ಟಲು ೧೯೪೫ರಲ್ಲಿ ನಿರ್ಧರಿಸಲಾಗಿತ್ತು. ಅಣೆಕಟ್ಟನ್ನು ಕಟ್ಟುವ ಸಂದರ್ಭದಲ್ಲಿ ತುಂಗಭದ್ರಾ ನದಿಯ ಪ್ರವಾಹದಿಂದ ಮಲ್ಲಾಪುರ ಮುಳುಗಿ ಹೋಯಿತು. ಮುಳುಗಡೆಯಾದ ಗ್ರಾಮಗಳಿಂದ ವಲಸೆ ಬಂದ ಜನರಿಗೆ ರಾಮನಗರ, ಅರಳಿಹಳ್ಳಿ ಹಾಗೂ ಕುರುದಗಡ್ಡಿಯಲ್ಲಿ ಪುನರ್ವಸತಿ ಕಲ್ಪಿಸಲಾಗಿತ್ತು. ರಾಮನಗರ, ಅರಳಿಹಳ್ಳಿ, ಕುರುದಗಡ್ಡಿ ಹಾಗೂ ಹಗರಿಬೊಮ್ಮನಹಳ್ಳಿ ಈ ನಾಲ್ಕು ಹಳ್ಳಿಗಳು ಸೇರಿ ಒಂದು ದೊಡ್ಡ ಪಟ್ಟಣವಾಗಿ ಬೆಳೆಯತೊಡಗಿತ್ತು. ಇದೇ ಸಂದರ್ಭದಲ್ಲಿ ಸ್ಥಳೀಯ ರೈತರು, ವಿದ್ವಾಂಸರು, ಸ್ವಾತಂತ್ರ್ಯ ಹೋರಾಟಗಾರರು ಪ್ರತ್ಯೇಕ ತಾಲೂಕು ರಚಿಸಬೇಕೆಂದು ಪ್ರತಿಭಟಿಸಿದರು. ಇದನ್ನು ಗಮನಿಸಿದ ದಿವಂಗತ ಶ್ರೀ ದೇವರಾಜ

ಅರಸು ಮಲ್ಲಾಪುರ ಉಪ ತಾಲೂಕನ್ನು ರದ್ದುಗೊಳಿಸಿ, ಮಲ್ಲಾಪುರ ವ್ಯಾಪ್ತಿಯಲ್ಲಿದ್ದ ಗ್ರಾಮಗಳ ಜೊತೆಗೆ ಹಡಗಲಿ, ಕೂಡ್ಲಿಗಿ, ಹೊಸಪೇಟೆಯ ಕೆಲವು ಗ್ರಾಮಗಳನ್ನು ಸೇರಿಸಿ, ಕ್ರಿ.ಶ. ೧೯೭೩ರಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕು ಎಂದು ಘೋಷಿಸಲಾಯಿತು. ಅಂದು ಬಳ್ಳಾರಿ ಜಿಲ್ಲೆಗೆ ಮತ್ತೊಂದು ಹೊಸ ತಾಲೂಕು ಸೇರ್ಪಡೆಯಾಯಿತು.

ಕನ್ನಡ ಭಾಷಾ ಪ್ರದೇಶಗಳಲ್ಲಿ ಸುಮಾರು ೧೮ ದೇಶೀಯ ಸಂಸ್ಥಾನಗಳಿದ್ದವು. ದೇಶೀಯ ಸಂಸ್ಥಾನಗಳಲ್ಲಿ ಮೈಸೂರು, ಹೈದರಾಬಾದ್ ಮುಂತಾದವು ದೊಡ್ಡ ಸಂಸ್ಥಾನಗಳಿದ್ದರೆ ಸವಣೂರು, ಜತ್ತ, ಮುಧೋಳ ಮುಂತಾದವು ಸಣ್ಣ ಸಂಸ್ಥಾನಗಳಾಗಿದ್ದವು. ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರು ಸಂಸ್ಥಾನವು ಸಣ್ಣ ಸಂಸ್ಥಾನಗಳಾಗಿದ್ದವು. ಬಳ್ಳಾರಿ ಜಿಲ್ಲೆಯಲ್ಲಿ ಸಂಡೂರು ಸಂಸ್ಥಾನವು ಒಂದು ಸಣ್ಣ ಹಾಗೂ ಜೀವಂತ ಸಂಸ್ಥಾನವಾಗಿತ್ತು. ಜಿಲ್ಲೆಯಲ್ಲಿ ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ನಡೆದ ಆಡಳಿದ ವಿಂಗಡಣೆ, ವಿನ್ಯಾಸಗಳಲ್ಲಿ ಸೇರ್ಪಡೆಯಾಗಿರಲಿಲ್ಲ. ಪ್ರತ್ಯೇಕ ಸ್ವತಂತ್ರ ಸಂಸ್ಥಾನವಾಗಿತ್ತು. ೧೯೪೭ರಲ್ಲಿ ಭಾರತ ದೇಶ ಸ್ವಾತಂತ್ರ್ಯವಾದಾಗ ೧೫೮ ಚದರ ಮೈಲಿ ವಿಸ್ತೀರ್ಣ ಹೊಂದಿದ್ದ ಸಂಡೂರು, ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಿಂದ ಸುತ್ತುವರಿಯಲ್ಪಟ್ಟಿದ್ದ ರಿಂದ ಭಾರತದ ಸರಕಾರದಲ್ಲಿ ವಿಲೀನಗೊಳ್ಳದೇ ಬೇರೆ ವಿಧಿಯಿರಲಿಲ್ಲ. ಹಾಗಾಗಿ ೧೯೪೮ರಲ್ಲಿ ಭಾರತ ಗಣರಾಜ್ಯದಲ್ಲಿ ವಿಲೀನಗೊಂಡು ೧೯೪೯ ಏಪ್ರಿಲ್ ೦೧ರಂದು ವಿಲೀನ ಒಪ್ಪಂದಕ್ಕೆ ಸಹಿ ಹಾಕಲಾಯಿತು.[೮] ಕ್ರಿ.ಶ. ೧೯೫೦ರಲ್ಲಿ ಸಂಡೂರು ಸಂಸ್ಥಾನಕ್ಕೆ ಕೂಡ್ಲಿಗಿ, ತಾಲೂಕಿನ ಚೋರುನೂರು ಮತ್ತು ಹೊಸಪೇಟೆ ತಾಲೂಕಿನ ತೋರಣಗಲ್ಲು ಈ ಎರಡು ಹೋಬಳಿಗಳನ್ನು ಸೇರಿಸಿ 'ಒಂದು ಸ್ವಾತಂತ್ರ ತಾಲೂಕನ್ನಾಗಿ ರಚಿಸಲಾಯಿತು. ಹೀಗೆ ಬಳ್ಳಾರಿ ಜಿಲ್ಲೆಯಲ್ಲಿರುವ ತಾಲೂಕುಗಳ ಪಟ್ಟಿಯಲ್ಲಿ ಸಂಡೂರು ಸೇರ್ಪಡೆಯಾಯಿತು. ಹೀಗೆ ೧೮೦೦ರಿಂದ ೧೯೫೩ರವರೆಗೆ ಒಟ್ಟು ೧೫೩ ವರ್ಷಗಳ ಕಾಲ ೧೧೫ ಕಲೆಕ್ಟರ್‌ಗಳು ಆಳ್ವಿಕೆ ಮಾಡಿದರು. ಈ ಕಾಲಾವಧಿಯಲ್ಲಿ ಪಾಶ್ಚಾತ್ಯರ ಸಂಪರ್ಕ ಹಾಗೂ ಆಡಳಿತದಿಂದ ಭಾರತೀಯ ಸಮಾಜದಲ್ಲಿ ಕಂಡುಬಂದ ಬದಲಾವಣೆಗಳು ಹಾಗೂ ಬೌದ್ಧಿಕ ಚಟುವಟಿಕೆಗಳಲ್ಲಿ ಉಂಟಾದ ಪರಿವರ್ತನೆಗಳನ್ನು ನವೋದಯ ಅಥವಾ ವಸಾಹತುಕಾಲೀನ ಎಂದು ಕರೆಯಲಾಗುತ್ತಿದೆ.

### ಸ್ವಾತಂತ್ರ್ಯ ಹೋರಾಟ

ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಬಳ್ಳಾರಿ ಜನರು, ವಿದ್ಯಾವಂತರು, ಮಹಿಳೆಯರು ಸಹ ಪಾಲ್ಗೊಂಡು ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಹರಪನಹಳ್ಳಿಯ ವಯೋವೃದ್ಧರೂ, ಅಪ್ಪಟ ಗಾಂಧೀವಾದಿಗಳೂ ಆಗಿದ್ದ ದಿ. ಇಜಾರಿ ವಸುಪಾಲಪ್ಪ ಅವರು ಕಾಂಗ್ರೆಸ್ ಅಧಿವೇಶನಗಳಲ್ಲಿ ತಪ್ಪದೇ ಭಾಗವಹಿಸುತ್ತಿದ್ದರಿಂದ ಜಿಲ್ಲೆಯ ಪ್ರಮುಖ ಭಾಗಗಳಾದ ಹರಪನಹಳ್ಳಿ, ಹೊಸಪೇಟೆ, ಬಳ್ಳಾರಿ, ನಗರಗಳನ್ನು ಸುತ್ತಿ ಕಾಂಗ್ರೆಸ್ ಸಂದೇಶಗಳಲ್ಲಾದ ಗೊತ್ತುವಳಿ ಮುಂತಾದ ವಿಷಯ ಕುರಿತು ಚರ್ಚಿಸುತ್ತಿದ್ದರು. ಆದ್ದರಿಂದ ವಸುಪಾಲಪ್ಪನವರು ಬಳ್ಳಾರಿ ಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ಧ್ಯೇಯಧೋರಣೆ ಸ್ವಾತಂತ್ರ್ಯ ಆಂದೋಲನದ ಗೊತ್ತುಗುರಿಗಳು-ಮಹಾತ್ಮಗಾಂಧಿಯವರ

ತತ್ವದ ಬೀಜ ಬಿತ್ತಿದ ಮೊದಲಿಗರೆಂದರೆ ತಪ್ಪಾಗದು. ಇವರ ಪ್ರಭಾವದಿಂದ ಮುಂದೆ ೧೯೩೦ರಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಆಂದೋಲನ ಇಡೀ ಜಿಲ್ಲೆಯನ್ನೇ ವ್ಯಾಪಿಸಿತೆನ್ನಬಹುದು. ಸ್ವಾತಂತ್ರ್ಯ ಚಳುವಳಿಗೆ ಮೂಲ ಸ್ಫೂರ್ತಿ, ಪ್ರೇರಣೆ, ಮಾರ್ಗದರ್ಶನ ಮುಖ್ಯವಾಗಿ ಶಾಲಾ ಉಪಾಧ್ಯಾಯರುಗಳಿಂದ ದೊರೆಯಿತು. ತೂಲಹಳ್ಳಿಯಲ್ಲಿ ಶಾಲಾ ಉಪಾಧ್ಯಾಯರಾಗಿದ್ದ ಎಂ. ಬೊಮ್ಮಲಿಂಗಯ್ಯನವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದರು. ವಿದ್ಯಾರ್ಥಿಗಳು ಕೂಡ ದೊಡ್ಡ ಪ್ರಮಾಣದಲ್ಲಿ ಪಾಲುಗೊಳ್ಳುವಂತೆ ಪ್ರಚೋದನೆ ನೀಡಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರ ಪಾತ್ರವನ್ನು ನಿರ್ಲಕ್ಷಿಸುವುದು ಸಾಧ್ಯವಿಲ್ಲ. ತಮ್ಮದೇ ಆದ ಸೀಮಿತ ನೆಲೆಯಲ್ಲಿ ಮಹಿಳೆಯರು ಅಪೂರ್ವ ಕಾಣಿಕೆ ಸಲ್ಲಿಸಿದ್ದಾರೆ. ಬಿ. ವೆಂಕಮ್ಮ, ಆದವಾನಿ ರಾಮಕ್ಕ, ವೀರವ್ವ, ರಾಕಟ್ಲ, ಸುಲಕ್ಷಣಬಾಯಿ, ಪ್ರಮೀಳಾ, ನಾಗಮ್ಮ, ಬಳ್ಳಾರಿ ಸಿದ್ಧಮ್ಮ, ಸುಂದರಮ್ಮ, ಹರಪನಹಳ್ಳಿ ಲಕ್ಷ್ಮೀದೇವಿ, ಬಳ್ಳಾರಿ ರುದ್ರಮ್ಮ ಮೊದಲಾದ ಮಹಿಳೆಯರು ಭಾಗವಹಿಸಿದ್ದು, ಇವರ ಪಾತ್ರ ಸ್ವಾಗತಾರ್ಹ.

**ಬಳ್ಳಾರಿ ಮೈಸೂರಿಗೆ ಸೇರ್ಪಡೆ**

ವಸಾಹತುಶಾಹಿ ಆಳ್ವಿಕೆಗಿಂತ ನಾಲ್ಕೈದು ಶತಮಾನಗಳ ಹಿಂದೆ ಆಳುತ್ತಿದ್ದ ಅರಸರ ಕಾಲದಲ್ಲಿ ಕೂಡ ಬಳ್ಳಾರಿ ಜಿಲ್ಲೆ ಮೈಸೂರಿನ ಭಾಗವಾಗಿತ್ತು. ಚಾರಿತ್ರಿಕ ಕಾರಣಗಳಿಂದ ಬಳ್ಳಾರಿ ಜಿಲ್ಲೆ ಪದೇ ಪದೇ ಮೈಸೂರು ದೇಶದಿಂದ ಕಸಿದುಕೊಳ್ಳಲ್ಪಡುತ್ತಿದೆ, ಅದು ಪುನಃ ವಾಪಸು ಬರುತ್ತಿದೆ. ಇದು ಹಸು - ಕರುವಿನ ನ್ಯಾಯದಂತಿದೆ. ಕರುವನ್ನು ಎಲ್ಲಿ ಕಟ್ಟಿದ್ದರು ಕೂಡ ಅದು ಕಟ್ಟಿ ಬಿಚ್ಚಿದ ತಕ್ಷಣ ಹಸುವಿನ ಕಡೆಗೆ ಓಡಿ ಬರುವ ಹಾಗೆ ಬಳ್ಳಾರಿ ಜಿಲ್ಲೆಯ ಭಾಗಗಳು ಮೈಸೂರಿನ ಕಡೆಗೆ ಧಾವಿಸಿ ಬರುತ್ತಿವೆ.

ಸ್ವಾತಂತ್ರ್ಯಾನಂತರ ೧೯೪೭ರಿಂದ ೧೯೫೩ರವರೆಗೆ ನಡೆದ ವಿಭಜನಾ ಪ್ರಕರಣದಲ್ಲಿ ಬಳ್ಳಾರಿ ಜಿಲ್ಲೆಯ ಸ್ಥಳೀಯರ ನೋವು ಮುಖ್ಯವಾಗಿ ಎರಡು ಬಗೆಯಲ್ಲಿತ್ತು. ಕರ್ನಾಟಕಾಂಧ್ರವನ್ನೊಳಗೊಂಡ ದಕ್ಷಿಣ ಭಾರತವನ್ನಾಳಿದ ವಿಜಯನಗರದ ಅರಸರ ಕೇಂದ್ರವಿದ್ದುದು ಬಳ್ಳಾರಿ ಜಿಲ್ಲೆ. ಇದು ವಿಜಯನಗರ ಸಾಮ್ರಾಜ್ಯ ಪತನದ ನಂತರ ತುಂಡು ತುಂಡಾಗಿ ಹರಿದು ಹಂಚಿ ಹೋಗಿದ್ದ ಭಾವುಕದ ಪ್ರಜ್ಞೆಯ ನೋವು ಒಂದು ಕಡೆ. ಬಳ್ಳಾರಿ ಜಿಲ್ಲೆ ಬ್ರಿಟಿಷರ, ಆಂಧ್ರದ, ಆಧುನೀಕರಣದ ಸುಳಿಗೆ ಸಿಕ್ಕಿ ವಿಭಜನೆಯಾಗುತ್ತಿರುವ ವಾಸ್ತವಿಕ ಪ್ರಜ್ಞೆಯ ನೋವು ಮತ್ತೊಂದಾಗಿತ್ತು.

ಸ್ವಾತಂತ್ರ್ಯ ಬಂದ ಮೇಲೆ ಶಾಸನಾನುಸಾರ ಭಾಷಾವಾರು ಪ್ರಾಂತ ರಚನೆ ಮಾಡುವುದಾಗಿ ಮಾತು ಕೊಟ್ಟಿದ್ದೆ ಕಾಂಗ್ರೆಸ್. ಜೆ.ವಿ.ಪಿ(ಜವಹರಲಾಲ್ ನೆಹರು, ವಲ್ಲಭಬಾಯಿ ಪಟೇಲ್, ಪಟ್ಟಾಭಿಸೀತರಾಮ) ಸಮಿತಿಯೂ ಅದನ್ನು ಸಮರ್ಥಿಸಿತು. ೧೯೪೮ರಲ್ಲಿ ಸರಕಾರ ರಚಿಸಿದ ಧರ್ ಸಮಿತಿಯೂ ಆ ತತ್ತ್ವವನ್ನು ಅನುಮೋದಿಸಿತು. ಆದರೂ ಭಾಷಾವಾರು ಪ್ರಾಂತ ರಚನೆ

ಆಗಲಿಲ್ಲ. ಆಗ ಆಂಧ್ರದ ಜನ ಇನ್ನು ತಡೆಯಲಾರದೆ ೧೯೫೨ರಲ್ಲಿ ಪೊಟ್ಟಿ ಶ್ರೀರಾಮುಲು ಅವರನ್ನು ಆಮರಣ ಉಪವಾಸಕ್ಕೆ ಕೂಡಿಸಿದರು. ಅವರು ೫೩ ದಿನ ಉಪವಾಸ ಮಾಡಿ ಸತ್ತರು.[೯೯] ಆಂಧ್ರದಲ್ಲಿ ವ್ಯಾಪಕ ಹಿಂಸಾರೂಪದ ಚಳವಳಿ ಆದಾಗ ಅಪಾರ ಆಸ್ತಿ, ಹರಣ ನಾಶವಾಯಿತು. ಆಂಧ್ರ ಪ್ರಾಂತ ರಚನೆಯ ಬಗ್ಗೆ ವರದಿ ಸಲ್ಲಿಸಲು ಕೇಂದ್ರ ಸರಕಾರ ರಾಜಸ್ಥಾನದ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಶ್ರೀ ವಾಂಛೂ ಅವರನ್ನು ನೇಮಿಸಿತು. ೦೫-೦೧-೧೯೫೩ರೊಳಗೆ, ಅಂದರೆ ಕೇವಲ ೨೯ ದಿನಗಳಲ್ಲಿ ವರದಿ ನೀಡಬೇಕಾಗಿತ್ತು.[೧೦೦]

ನ್ಯಾಯಮೂರ್ತಿ ಶ್ರೀ ವಾಂಛೂ ಆಂಧ್ರರಾಜ್ಯ ರಚನೆಗೆ ಶಿಫಾರಸ್ಸು ಮಾಡುತ್ತಾ ಮದರಾಸ್ ಪ್ರಾಂತದಲ್ಲಿ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕ ರಾಜ್ಯ ರಚನೆಯಾಗುವ ತನಕ ಆಂಧ್ರ ರಾಜ್ಯದಲ್ಲಿ ಸೇರಿಸಬೇಕೆಂದು ಶಿಫಾರಸ್ಸು ಮಾಡಿದರು. ಇದನ್ನು ಮದರಾಸ್ ಮುಖ್ಯಮಂತ್ರಿ ರಾಜಾಜಿ ಅದಕ್ಕೊಪ್ಪಲಿಲ್ಲ. ಬಳ್ಳಾರಿ ಮದರಾಸ್‌ನಿಂದ ೩೦೦ ಮೈಲು, ೨೫೦ ಮೈಲು ಆಂಧ್ರಪ್ರದೇಶವನ್ನು ದಾಟಿ ಬಳ್ಳಾರಿಗೆ ಬಂದು ಆಡಳಿತ ನಡೆಸುವುದು ಸಾಧ್ಯವಿಲ್ಲ ಎಂದರು. ಹಾಗಾದರೆ, ಆಂಧ್ರದೊಡನೆಯ ಕರ್ನಾಟಕ ರಾಜ್ಯವನ್ನು ರಚಿಸಿ ಎಂದು ಹಕ್ಕೊತ್ತಾಯ ಮಾಡಲಾಯಿತು. ಕೇಂದ್ರ ಸರಕಾರದ ವಿರುದ್ಧ ಪ್ರತಿಭಟನೆ, ಚಳವಳಿ ಹೂಡಲು 'ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾ ಸಮಿತಿ' ಎಂದು ಸಂಸ್ಥೆ ಹುಟ್ಟಿತು.[೧೦೧] ಇದರ ಜೊತೆಗೆ ಜಿಲ್ಲೆಯ ಇತರೆ ಸಾರ್ವಜನಿಕ ಸಂಘಸಂಸ್ಥೆಗಳು ಬಳ್ಳಾರಿಯನ್ನು ಆಂಧ್ರ ರಾಜ್ಯಕ್ಕೆ ಸೇರಿಸಬಾರದೆಂದು ಪ್ರತಿಭಟಿಸಿದರು.

ಕರ್ನಾಟಕ ಪ್ರಾಂತ ನಿರ್ಮಾಣದ ನಿರ್ಧಾರವೇ ಆಗಿಲ್ಲದಿದ್ದರಿಂದ ನ್ಯಾಯಾಮೂರ್ತಿ ಶ್ರೀ ವಾಂಛೂ ಅವರ ವರದಿಯನ್ನು ಆಧರಿಸಿ ಕೇಂದ್ರ ಸರಕಾರ ಲೋಕಸಭೆಯಲ್ಲಿ ೨೫-೩-೧೯೫೩ರಂದು ಪ್ರಕಟಿಸಿದ ನಿರ್ಧಾರ ಕೆಳಕಂಡತಿತ್ತು.

೧. ಬಳ್ಳಾರಿ ಜಿಲ್ಲೆಯನ್ನು ಆಂಧ್ರ ಅಥವಾ ಕರ್ನಾಟಕಕ್ಕೆ ಸೇರಿಸುವ ಸಂದರ್ಭದಲ್ಲಿ ಅದನ್ನು ಒಂದೇ ಘಟಕವೆಂದು ಪರಿಗಣಿಸಲು ಸಾಧ್ಯವಿಲ್ಲ.

೨. ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿದ್ದ ಆಲೂರು, ಆದೋನಿ ಮತ್ತು ರಾಯದುರ್ಗ ತಾಲೂಕನ್ನು ಆಂಧ್ರದ ಒಂದು ಭಾಗವಾಗಿ ರೂಪಿಸಬೇಕು.

೩. ಹರಪನಹಳ್ಳಿ, ಹಡಗಲಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು ಮತ್ತು ಸಿರುಗುಪ್ಪ - ಈ ಆರು ತಾಲೂಕುಗಳಲ್ಲಿ ಕನ್ನಡ ಭಾಷಿಕರು ಅಧಿಕವಾಗಿರುವುದರಿಂದ ಮೈಸೂರು ರಾಜ್ಯದ ಒಂದು ಭಾಗವೆಂದು ಪರಿಗಣಿಸಬೇಕು.[೧೦೨]

ಬಳ್ಳಾರಿ ಜಿಲ್ಲೆಯನ್ನು ವಿಭಜನೆ ಮಾಡಿದ ಶ್ರೀ ವಾಂಛೂ ಸಮಿತಿಯು ಬಳ್ಳಾರಿ ತಾಲೂಕಿನ ಬಗ್ಗೆ ಯಾವುದೇ ತೀರ್ಮಾನವನ್ನು ನೀಡದೆ ಅತಂತ್ರ ಪರಿಸ್ಥಿತಿ ಉಂಟಾಗಲು ಕಾರಣವಾಯಿತು.

ಈಗ ಮತ್ತೊಂದು ಸಮಸ್ಯೆ ಬಳ್ಳಾರಿ ತಾಲೂಕಿನ ಪ್ರಶ್ನೆ. ಈ ತಾಲೂಕು ಆಂಧ್ರ ರಾಜ್ಯಕ್ಕೆ ಸೇರಬೇಕೆ ಅಥವಾ ಮೈಸೂರು ರಾಜ್ಯಕ್ಕೆ ಸೇರಬೇಕೆ ಎಂಬ ಒಂದು ಜಿಜ್ಞಾಸೆ ಹುಟ್ಟಿತು. ಭಾರತ ಸರಕಾರದವರು ಬಳ್ಳಾರಿ ತಾಲೂಕಿನ ವಿಚಾರದಲ್ಲಿ ಯಾವುದೇ ನಿರ್ದಿಷ್ಟ ನಿರ್ಣಯವನ್ನು ತೆಗೆದುಕೊಳ್ಳದೆ ತಟಸ್ಥ ನೀತಿಯನ್ನು ಅನುಸರಿಸಿದ್ದರಿಂದ ಮತ್ತೊಂದು ಪರಿಹಾರ ಮಾರ್ಗವನ್ನು ಕಂಡುಕೊಳ್ಳಬೇಕಾಗಿತ್ತು. ಹಾಗಾಗಿ ಈ ಸಮಸ್ಯೆಯನ್ನು ಪರಿಹರಿಸಲು ಹೈದರಾಬಾದ್ ಹೈಕೋರ್ಟಿನ ಚೀಫ್ ಜಸ್ಟೀಸ್‌ರವರಾದ ಶ್ರೀ ಮಿಶ್ರಾ ಅವರನ್ನು ನೇಮಿಸಿದರು.[೧೦೩] ಶ್ರೀ ಮಿಶ್ರಾ ಅವರು ಈ ವಿಚಾರವನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿ ಬಳ್ಳಾರಿ ತಾಲೂಕು ಯಾವ ರಾಜ್ಯಕ್ಕೆ ಸೇರಬೇಕು ಎನ್ನುವ ವಿಚಾರದಲ್ಲಿ ಒಂದು ನಿರ್ದಿಷ್ಟ ತೀರ್ಪನ್ನು ನೀಡಬೇಕೆಂದು ಹೇಳಿದರು. ಅದೇ ರೀತಿ ಆಜ್ಞೆ ಮಾಡಿದ್ದರು. ಶ್ರೀ ಮಿಶ್ರಾ ಅವರು ಈ ಕೆಲಸವನ್ನು ಕೈಕೊಂಡರು. ಬಳ್ಳಾರಿಗೆ ಬಂದು ಸ್ಥಳೀಯ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಂಡು, ಮೈಸೂರು ದೇಶದ ಅಭಿಪ್ರಾಯವನ್ನು ಸಹ ಸಂಗ್ರಹಿಸಿಕೊಂಡರು. ಬಳ್ಳಾರಿ ಸ್ಥಳೀಯರು ಹಾಗೂ ಮೈಸೂರು ದೇಶದವರು ಕೆಟ್ಟಂಥ ಅಂಕಿ ಅಂಶಗಳನ್ನು ಪರಿಶೀಲನೆ ಮಾಡಿ ಒಂದು ನಿರ್ದಿಷ್ಟ ತೀರ್ಮಾನಕ್ಕೆ ಬಂದರು. ಅವರು ಕೊಟ್ಟ ತೀರ್ಮಾನ ಎಲ್ಲರಿಗೂ ಗೊತ್ತಿರುವ ಹಾಗೆ "ಶ್ರೀ ಮಿಶ್ರಾ ಅವಾರ್ಡ್"(ಮಿಶ್ರಾ ತೀರ್ಪು) ಎಂದು ಹೆಸರಾಗಿದೆ. ಈ ತೀರ್ಪಿನ ಪ್ರಕಾರ ಬಳ್ಳಾರಿ ತಾಲೂಕು ಮೈಸೂರು ರಾಜ್ಯಕ್ಕೆ ವಿಲೀನಗೊಂಡಿತು.



ಈ ಎಲ್ಲಾ ವಿಭಜನೆಗಳಲ್ಲೂ ಕೆಲವು ಕಷ್ಟನಷ್ಟಗಳು ಆಗುವುದು ಖಂಡಿತ. ಅವು ಕಾಲಕ್ರಮೇಣ ಸರಿ ಹೋಗುವುವು. ಆಗಿ ಹೋದ ಘಟನೆಯನ್ನು ಬದಲಿ ಮಾಡುವ ಪ್ರಯತ್ನದಲ್ಲೇ ಇಲ್ಲಿಯ ಆಂಧ್ರರು, ತಮ್ಮ ಜೀವನವನ್ನು ವ್ಯರ್ಥ ಮಾಡಿಕೊಳ್ಳದಿರಲಿ. ಬಳ್ಳಾರಿ ಮೈಸೂರಿಗೆ ಸೇರಿ ಹೋಗಿದೆ. ಅದನ್ನು ಒಪ್ಪಿಕೊಂಡು ಕನ್ನಡಿಗರೊಡನೆ ದ್ವಿಗುಣಿತ ಪ್ರೀತಿಯಿಂದ ವರ್ತಿಸಲಿ[೧೦೪] ಎಂಬ ಅಭಿಪ್ರಾಯವನ್ನು ಶ್ರೀ ಮಿಶ್ರಾ ಅವರು ನೀಡಿದ್ದರು.

**ಕೊನೆ ಟಿಪ್ಪಣಿಗಳು**

೧. ಚಂದ್ರಶೇಖರ ಟಿ.ಆರ್., ೧೯೯೪, ಬಳ್ಳಾರಿ **ಜಿಲ್ಲೆಯ ನಿಸರ್ಗ ಸಂಪತ್ತು**, ಪುಟ ೧೦.

೨. ಅದೇ, ಪುಟ ೧೫.

೩. ನಾಯಕ ಹಾ.ಮಾ.(ಸಂ), ೧೯೮೩, **ಕನ್ನಡ ವಿಷಯ ವಿಶ್ವಕೋಶ, ಸಂಪುಟ-ಹನ್ನೊಂದು**, ಪುಟ ೯೪೩.

೪. ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಪರಿಸರದ ಸಾಂಸ್ಕೃತಿಕ**, ಪರಂಪರೆ, ಭಾಗ-೧, ಪುಟ ೨.

೫. ನಾಯಕ ಹಾ.ಮಾ.(ಸಂ), ೧೯೮೩, **ಪೂರ್ವೋಕ್ತ**, ಪುಟ ೯೪೪.

೬. ಅದೇ, ಪುಟ ೯೪೪.

೭. ಚಂದ್ರಶೇಖರ ಟಿ.ಆರ್., ೧೯೯೪, **ಪೂರ್ವೋಕ್ತ**, ಪುಟ ೨೪.

೮. ಅದೇ, ಪುಟ ೫೧.

೯. ರಾಧಾಕೃಷ್ಣ ಬಿ.ಪಿ., ೧೯೮೫, **ಕರ್ನಾಟಕದ ಖನಿಜ ಸಂಪತ್ತು**, ಎಚ್ಚೆಸ್ಕೆ, ಅವಲೋಕನ, ಪುಟ ೨೮.

೧೦. ಚಂದ್ರಶೇಖರ ಟಿ.ಆರ್., ೧೯೯೪, **ಪೂರ್ವೋಕ್ತ**, ಪುಟ ೪೬ ಮತ್ತು ೪೭.

೧೧. ಕರ್ನಾಟಕ ಸರ್ಕಾರ, ೨೦೧೪, **ಬಳ್ಳಾರಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ**, ಪುಟ ೩೪.

೧೨. ರವೀಂದ್ರನಾಥ ಕೆ.(ಸಂ), ೨೦೦೫, **ಬಳ್ಳಾರಿ ಜಿಲ್ಲಾ ದರ್ಶನ**, ಪುಟ ೫ ಮತ್ತು ೬.

೧೩. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ**, ಪುಟ ೭.

೧೪. ಅದೇ, ಪುಟ ೯.

೧೫. ಅದೇ, ಪುಟ ೭೫.

೧೬. ಅದೇ, ಪುಟ ೭೭.

೧೭. ಕಲಬುರ್ಗಿ ಎಂ.ಎಂ., ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಪುಟ ೫೨೪.

೧೮. ನಾಗಯ್ಯ ಜಿ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಪುಟ ೨ ಮತ್ತು ೩.

೧೯. ದೇವರಕೊಂಡಾರೆಡ್ಡಿ(ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ**, ಪುಟ ೪೮೪ ಮತ್ತು ೪೮೫.

೨೦. ಗಿರಿಜಾ, ೨೦೧೧, ಸಂಡೂರು ತಾಲೂಕು ಒಂದು ಚಾರಿತ್ರಿಕ ಅಧ್ಯಯನ, ಪುಟ ೨೦.

೨೧. ಮಜುಂದಾರ್‌ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಸಂ), ೧೯೯೭, **ವೇದಯುಗ-ಭಾಗ-ಒಂದು**, ಪುಟ ೧೩೬ ಮತ್ತು ೧೩೭.

೨೨. ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ **ಪರಿಸರದ ಸಾಂಸ್ಕೃತಿಕ ಪರಂಪರೆ**, ಭಾಗ-೧, ಪುಟ ೭, ೪೦೮.

೨೩. ಮಜುಂದಾರ್‌ಆರ್.ಸಿ. (ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಸಂ), ೧೯೯೭, **ವೇದಯುಗ-ಭಾಗ-ಒಂದು**, ಪುಟ ೧೪೩.

೨೪. **ಕರ್ನಾಟಕ ಪರಂಪರೆ, ಸಂಪುಟ-೧**, ೨೦೧೪, ಆದಿಕಾಲ, ಪುಟ ೧೦೭.

೨೫. ಡಾ. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ**, ಪುಟ ೮.

೨೬. **ಕರ್ನಾಟಕ ಪರಂಪರೆ, ಸಂಪುಟ-೧**, ೨೦೧೪, ಆದಿಕಾಲ, ಪುಟ ೧೦೯.

೨೭. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ**, ಪುಟ ೧೩.

೨೮. ದೇವರಕೊಂಡಾರೆಡ್ಡಿ(ಸಂ), ೧೯೯೮, **ಪೂರ್ವೋಕ್ತ,** ಪುಟ ೩೭೨ ಮತ್ತು ೩೭೩.

೨೯. ಷೇಕ್ಅಲಿ ಬಿ.(ಸಂ), ೧೯೯೭, **ಕರ್ನಾಟಕ ಚರಿತ್ರೆ, ಸಂಪುಟ-೧,** ಪುಟ ೩೦೨.

೩೦. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ,** ಪುಟ ೪೮-೪೯.

೩೧. ದೇವರಕೊಂಡಾರೆಡ್ಡಿ(ಸಂ), ೧೯೯೮, **ಪೂರ್ವೋಕ್ತ,** ಪುಟ ೨೬೭.

೩೨. ಸದಾಶಿವಪ್ಪ ಕುಂ.ಬಾ., ೧೯೯೦, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ, ಪುಟ ೩.

೩೩. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ,** ಪುಟ ೪೯.

೩೪. ದೇವರಕೊಂಡಾರೆಡ್ಡಿ(ಸಂ), ೧೯೯೮, **ಪೂರ್ವೋಕ್ತ,** ಪುಟ XVIII ಮತ್ತು XIX.

೩೫. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ,** ಪುಟ ೫೦.

೩೬. ದೇವರಕೊಂಡಾರೆಡ್ಡಿ(ಸಂ), ೧೯೯೮, **ಪೂರ್ವೋಕ್ತ,** ಪುಟ XIX.

೩೭. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ,** ಪುಟ ೫೧.

೩೮. ಮಹದೇವ ಸಿ., ೨೦೦೪, ಚರಿತ್ರೆ, ಬಾಲಸುಬ್ರಮಣ್ಯ(ಸಂ), **ಕುರುಗೋಡು,** ಪುಟ ೨೯ ಮತ್ತು ೩೦.

೩೯. ದೇವರಕೊಂಡಾರೆಡ್ಡಿ(ಸಂ), ೧೯೯೮, **ಪೂರ್ವೋಕ್ತ,** ಪುಟ XXIV.

೪೦. ನರಸಿಂಹಮೂರ್ತಿ ಎ.ವಿ., ೨೦೧೦, **ಕರ್ನಾಟಕದ ಸೇವುಣರ ಇತಿಹಾಸ,** ಪುಟ ೨೭.

೪೧. ವಾಸುದೇವ ಬಡಿಗೇರ, ೨೦೧೨, **ಪೂರ್ವೋಕ್ತ,** ಪುಟ ೬೩ ಮತ್ತು ೬೪.

೪೨. ಚನ್ನಬಸಪ್ಪ ಎಸ್. ಪಾಟೀಲ ಮತ್ತು ವಿನೋದಾ ಪಾಟೀಲ, ೧೯೯೭, **ಕರ್ನಾಟಕ ಶಾಸನಗಳು ಸಂಪುಟ-೩, ಬಳ್ಳಾರಿ ಜಿಲ್ಲೆಯ ಶಾಸನಗಳು,** ಪುಟ XXIII.

೪೩. ಅದೇ, ಪುಟ ೩೪.

೪೪. ಲಕ್ಷ್ಮಣ್ ತೆಲಗಾವಿ, ೨೦೧೦, **ಎಪ್ಪತ್ತೇಳು ಪಾಳೆಯಗಾರರು,** ಪುಟ ೩೫.

೪೫. ಅದೇ, ಪುಟ ೩೬.

೪೬. ಶ್ಯಾಮಲ ಸಿ.ಆರ್., ೨೦೦೮, ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ, ಪುಟ ೧೫೦ ಮತ್ತು ೧೫೧.

೪೭. ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟು(ಪರಿಷ್ಕೃತ), ಸಂಪುಟ-೧, ೨೦೦೦, ಪುಟ ೯೯೧.

೪೮. ಶೇಷಗಿರಿರಾವ್ ಎಲ್.ಎಸ್.(ಸಂ), ೨೦೦೮, **ಸುಭಾಷ್ ಇಂಗ್ಲಿಷ್-ಇಂಗ್ಲಿಷ್-ಕನ್ನಡ ನಿಘಂಟು,** ಪುಟ ೨೪೫.

೪೯. ಅದೇ, ಪುಟ ೬೯೩.

೫೦. ಬಾರ್ಕೂರು ಉದಯ, ೨೦೧೦, **ಸಾಮ್ರಾಜ್ಯಶಾಹಿ: ಚಿಂತನೆಗಳು ಮತ್ತು ಸಿದ್ಧಾಂತಗಳು,** ಪುಟ ೨.

೫೧. ಬಿಪಿನ್ ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಆಧುನಿಕ ಭಾರತದ ಇತಿಹಾಸ,** ಪುಟ ೬೬.

೫೨. ಶಂಕರನಾರಾಯಣರಾವ್ ಎನ್.ಪಿ., ೧೯೯೧, **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು,** ಪುಟ ೨೮.

೫೩. ಬಿ. ಮುದ್ದಚಾರಿ, ೧೯೭೦, **ಆಧುನಿಕ ಭಾರತ,** ಪುಟ ೯ ಮತ್ತು ೧೦.

೫೪. ಬಿಪಿನ್ ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಆಧುನಿಕ ಭಾರತದ ಇತಿಹಾಸ,** ಪುಟ ೬೯.

೫೫. ಬಿ. ಮುದ್ದಚಾರಿ, ೧೯೭೦, **ಪೂರ್ವೋಕ್ತ,** ಪುಟ ೩೨ ಮತ್ತು ೩೩.

೫೬. ಶಂಕರನಾರಾಯಣರಾವ್ ಎನ್.ಪಿ., ೧೯೯೧, **ಪೂರ್ವೋಕ್ತ,** ಪುಟ ೨೭.

೫೭. ರಂಗಸ್ವಾಮಯ್ಯ ಜಿ.ಆರ್., ಬಿ. ಷೇಕ್‌ಅಲಿ, ೨೦೦೧, ದಕ್ಷಿಣ ಭಾರತದ ಇತಿಹಾಸ, ಪುಟ ೩೬೩.

೫೮. ಬಿಪಿನ್ ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಪೂರ್ವೋಕ್ತ,** ಪುಟ ೬೯.

೫೯. ಅದೇ, ಪುಟ ೩೧.

೬೦. ಅದೇ, ಪುಟ ೭೮.

೬೧. ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ,** ಪುಟ ೩೪.

೬೨. ಅದೇ, ಪುಟ ೩೬.

೬೩. ನರೇಂದ್ರ ಪ್ರಸಾದ್ ಎಸ್., ಬಿ. ಪರಮೇಶ್ವರ, ಎನ್. ಮಹದೇವಸ್ವಾಮಿ, ೧೯೯೮, **ಭಾರತದ ಸ್ವಾತಂತ್ರ್ಯ ಚಳವಳಿ,** ಪುಟ ೮.

೬೪. ಅದೇ, ಪುಟ ೧೧.

೬೫. ಅದೇ, ಪುಟ ೧೧.

೬೬. ಚಂದ್ರಶೇಖರ್ ಎಸ್., ೨೦೦೬, **ವಸಾಹತುಕಾಲೀನ ಕರ್ನಾಟಕ,** ಪುಟ ೨೩.

೬೭. ಶ್ರೀನಿವಾಸ ಹಾವನೂರು, ೨೦೧೧, **ಹೊಸಗನ್ನಡ ಅರುಣೋದಯ,** ಪುಟ ೭.

೬೮. ನರೇಂದ್ರ ಪ್ರಸಾದ್ ಎಸ್., ಬಿ. ಪರಮೇಶ್ವರ, ಎನ್. ಮಹದೇವಸ್ವಾಮಿ, ೧೯೯೮, **ಪೂರ್ವೋಕ್ತ,** ಪುಟ ೧೫.

೬೯. ಮೋಹನ್‌ಕೃಷ್ಣ ರೈ ಕೆ., ೨೦೦೭, **ವಸಾಹುತಶಾಹಿ ಮತ್ತು ನಗರೀಕರಣ**, ಪುಟ ೧೦.

೭೦. ಅದೇ, ಪುಟ ೧೦.

೭೧. ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, **ಪೂರ್ವೋಕ್ತ**, ಪುಟ ೧೨.

೭೨. ಜ್ಞಾನ ಗಂಗೋತ್ರಿ, **ಕಿರಿಯರ ವಿಶ್ವಕೋಶ, ಸಂಪುಟ-ಒಂದು**, ಪುಟ ೪೫೯.

೭೩. ಅದೇ, ಪುಟ ೪೫೯.

೭೪. ಬಿಪಿನ್ ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಪೂರ್ವೋಕ್ತ**, ಪುಟ ೬೯.

೭೫. ಜ್ಞಾನ ಗಂಗೋತ್ರಿ, **ಕಿರಿಯರ ವಿಶ್ವಕೋಶ, ಸಂಪುಟ-ಒಂದು**, ಪುಟ ೪೯೨.

೭೬. ಮೋಹನ್‌ಕೃಷ್ಣ ರೈ ಕೆ., ೨೦೦೭, **ಪೂರ್ವೋಕ್ತ**, ಪುಟ ೧೨.

೭೭. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೪, ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ(೧) (ಭಾಗ-ಒಂದು), ಪುಟ ೪೯೦.

೭೮. ಮೋಹನ್‌ಕೃಷ್ಣ ರೈ ಕೆ., ೨೦೦೭, **ಪೂರ್ವೋಕ್ತ**, ಪುಟ ೧೧.

೭೯. ಶಾಶ್ವತಸ್ವಾಮಿ ಮುಕ್ಕುಂದಿಮಠ, ೧೭-೧೨-೨೦೧೬, **ಪ್ರಜಾವಾಣಿಯ ವಾಚಕರವಾಣಿ, "ಕಲ್ಯಾಣ ಕರ್ನಾಟಕ : ತೊಡಕು"**, ಪುಟ ೬.

೮೦. ಸೂರ್ಯನಾಥ ಯು.ಕಾಮತ್(ಮು.ಸಂ.), ೧೯೯೨, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಕೊಡುಗು ಜಿಲ್ಲೆ**, ಪುಟ ೧೦೭.

೮೧. ಮೋಹನ್‌ಕೃಷ್ಣ ರೈ ಕೆ., ೨೦೦೭, **ವಸಾಹುತಶಾಹಿ ಮತ್ತು ನಗರೀಕರಣ**, ಪುಟ ೧೩.

೮೨. ಶೇಷಾದ್ರಿ ಬಿ., ಟಿ.ಆರ್. ಚಂದ್ರಶೇಖರ(ಸಂ), ೧೯೯೮, **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ**, ಪುಟ ೧೯.

೮೩. ಮಹದೇವ ಸಿ., ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ, ೨೦೦೨, **ಹೊಸಪೇಟೆ ತಾಲೂಕು ದರ್ಶನ**, ಪುಟ ೫೮.

೮೪. ಬಿಪಿನ್ ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಪೂರ್ವೋಕ್ತ**, ಪುಟ ೮೯.

೮೫. ಅದೇ, ಪುಟ ೯೨.

೮೬. ಅಭಿಶಂಕರ್ ಕೆ.(ಸಂ), ೧೯೭೨, **ಮೈಸೂರು ಸ್ಟೇಟ್ ಗೆಜೆಟಿಯರ್** ಬಳ್ಳಾರಿ ಜಿಲ್ಲೆ, ಪುಟ ೦೪.

೮೭. ಡಬ್ಲ್ಯೂ. ಫ್ರಾನ್ಸಿಸ್, ೧೯೦೪, **ಮದರಾಸ್ ಡಿಸ್ಟ್ರಿಕ್ಟ್ ಗೆಜೆಟಿಯರ್**, ಬಳ್ಳಾರಿ, ಪುಟ ೪೬.

೮೮. ಅದೇ, ಪುಟ ೪೬.

೮೯. ಅಭಿಶಂಕರ್ ಕೆ.(ಸಂ), ೧೯೭೨, **ಪೂರ್ವೋಕ್ತ**, ಪುಟ ೦೪.

೯೦. ಡಬ್ಲ್ಯೂ ಫ್ರಾನ್ಸಿಸ್, ೧೯೦೪, **ಪೂರ್ವೋಕ್ತ**, ಪುಟ ೪೭.

೯೧. ಅಭಿಶಂಕರ್ ಕೆ.(ಸಂ), ೧೯೭೨, **ಪೂರ್ವೋಕ್ತ**, ಪುಟ ೫.

೯೨. ಅದೇ, ಪುಟ ೫.

೯೩. ಶೇಷಾದ್ರಿ ಬಿ., ಟಿ.ಆರ್. ಚಂದ್ರಶೇಖರ(ಸಂ), ೧೯೯೮, **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ**, ಪುಟ ೨೨.

೯೪. ಮೃತ್ಯುಂಜಯ ರುಮಾಲೆ, ೨೦೦೫, **ಜಿಲ್ಲೆ ಅನುಭವಿಸಿದ ಅನಾಥ ಪ್ರಜ್ಞೆ**, ಕೆ. ರವೀಂದ್ರನಾಥ(ಸಂ), **ಬಳ್ಳಾರಿ ಜಿಲ್ಲಾ ದರ್ಶನ**, ಪುಟ ೫೯.

೯೫. ಅದೇ, ಪುಟ ೫೯.

೯೬. ಅಭಿಶಂಕರ್ ಕೆ.(ಸಂ), ೧೯೭೨, **ಪೂರ್ವೋಕ್ತ**, ಪುಟ ೬.

೯೭. ಅದೇ, ಪುಟ ೬.

೯೮. ಅದೇ, ಪುಟ ೬.

೯೯. ಚೆನ್ನಬಸಪ್ಪ ಕೋ., ೨೦೦೭, **ಕರ್ನಾಟಕ ಏಕೀಕರಣ**, ಪುಟ ೯.

೧೦೦. ಗೋಪಾಲರಾವ್ ಎಚ್.ಎಸ್., ೨೦೧೪, **ಕರ್ನಾಟಕ ಏಕೀಕರಣ ಇತಿಹಾಸ**, ಪುಟ ೧೯೧.

೧೦೧. ಚೆನ್ನಬಸಪ್ಪ ಕೋ., ೨೦೦೭, **ಪೂರ್ವೋಕ್ತ**, ಪುಟ ೯.

೧೦೨. ಅಭಿಶಂಕರ್ ಕೆ.(ಸಂ), ೧೯೭೨, **ಪೂರ್ವೋಕ್ತ**, ಪುಟ ೮.

೧೦೩. ಭಗವಾನ್ ಕೆ.ಎಸ್.(ಸಂ), ೨೦೦೬, **ಕೆಂಗಲ್ಲರ ಭಾಷಣಗಳು**, ೬೪.

೧೦೪. ಚೆನ್ನಬಸಪ್ಪ ಕೋ., ೨೦೦೭, **ಪೂರ್ವೋಕ್ತ**, ಪುಟ ೨೧.



ಅಧ್ಯಾಯ : ಮೂರು

# ವಾಸ್ತುಶಿಲ್ಪ

೩.೧. ಐರೋಪ್ಯ ವಾಸ್ತುಶಿಲ್ಪದ ಪ್ರಭಾವ

೩.೨. ಐರೋಪ್ಯ ವಾಸ್ತುಶೈಲಿಗಳು ಹಾಗೂ ಲಕ್ಷಣಗಳು

೩.೩. ಆಡಳಿತ ಕಟ್ಟಡಗಳು

೩.೪. ರಕ್ಷಣಾ ಕಟ್ಟಡಗಳು

೩.೫. ಧಾರ್ಮಿಕ ವಾಸ್ತುಶಿಲ್ಪ ಹಾಗೂ ಕಟ್ಟಡಗಳು

೩.೬. ಶಿಕ್ಷಣ ಸಂಸ್ಥೆಗಳು

೩.೭. ಸಾರ್ವಜನಿಕ ಕಟ್ಟಡಗಳು

## ಅಧ್ಯಾಯ : ಮೂರು

# ವಾಸ್ತುಶಿಲ್ಪ

ಮನುಷ್ಯನ ಬೆಳವಣಿಗೆಯಲ್ಲಿ ಪರಿಸರದ ಪಾತ್ರ ಬಹಳ ಹಿರಿದಾದುದು. ಆಹಾರ ಸಂಪಾದನೆ, ಬೇಟೆತಂತ್ರ, ರಕ್ಷಣೆಗಳ ಹಾಗೆ ನಿವಾಸದ ಕಲ್ಪನೆ ಆತನಿಗೆ ಬಂದುದೂ ನಿಸರ್ಗದ ಇತರ ಪ್ರಾಣಿ-ಪಕ್ಷಿಗಳನ್ನು ನೋಡಿಯೇ. ಮಾನವನಿಗೆ ಅಂಥ 'ವಸತಿ'ಯ ಕಲ್ಪನೆ ಬಂದುದು ಕ್ರಿ.ಪೂ. ೫೦೦೦ ಸುಮಾರಿಗೆ ಎಂಬುದು ತಜ್ಞರ ಅಭಿಮತ.

ವಾಸ್ತುಶಿಲ್ಪ ಹೇಗೆ ಆರಂಭವಾಯಿತು? ಆದಿಮಾನವನ ಗುಡಿಸಿಲಿಗೆ ಈ ಅದ್ಭುತ ಪದವನ್ನು ಉಪಯೋಗಿಸುವಂತಿಲ್ಲ. ಏಕೆಂದರೆ ಆದಿಮಾನವನು ಅಲೆಮಾರಿಯಾಗಿ ಜೀವಿಸುತ್ತಿದ್ದ ಸಂದರ್ಭದಲ್ಲಿ ನಿಸರ್ಗನಿರ್ಮಿತ ಪೊಟರೆ ಹಾಗೂ ಗುಹೆಗಳಲ್ಲಿ ವಾಸಿಸುತ್ತಿದ್ದಿರಬೇಕು. ಪ್ರಕೃತಿಯ ಮಡಿಲಲ್ಲಿ ಆತನೊಂದಿಗೆ ವಾಸಿಸುತ್ತಿದ್ದ ಪ್ರಾಣಿ-ಪಕ್ಷಿಗಳ ಚಲನವಲನಗಳಿಂದ ಹಾಗೂ ಸಂಸ್ಕೃತಿ ವಿಕಾಸ ಹೊಂದಿದ ನಂತರ ಆತನ ಆಲೋಚನೆಗೆ ಸತ್ತವರು ಬದುಕಿರುವವರಿಗಿಂತ ಹೆಚ್ಚು ಮುಖ್ಯರೂ, ಆಗಿರುತ್ತಿದ್ದರು ಎಂಬ ಕಲ್ಪನೆ ಬಂದಿತು. ಹಾಗಾಗಿ ಸತ್ತವರಿಗಾಗಿ ಸಮಾಧಿಗಳನ್ನು, ಜನರು ನಂಬುವ ದೇವತೆಗಳಿಗೆ ವಾಸಗಳನ್ನು ಮೊದಲು ಕಟ್ಟಿರಬಹುದು. ಆ ಕಟ್ಟಡಗಳೇ ನಮಗೆ ಆರಂಭದ ವಾಸ್ತು ವಿಷಯಗಳು. ಇದು ಆರಂಭವಾದದ್ದು ಒಬ್ಬ ಪುರುಷನೋ, ಸ್ತ್ರೀಯೋ ತನ್ನ ವಸತಿಯನ್ನು ಉಪಯೋಗ ಮಾತ್ರವೇ ಅಲ್ಲದೆ, ನೋಟದ ದೃಷ್ಟಿಯಿಂದಲೂ ಯೋಚಿಸಿದಾಗ ಬಹುಶಃ ಒಂದು ಸಂರಚನೆಗೆ ಸೌಂದರ್ಯ ಅಥವಾ ಘನತೆಯನ್ನು ಕೊಡುವ ಪ್ರಯತ್ನವು ಮೊದಲು ಗೋರಿಗಳಿಗೆ ಅನ್ವಯವಾಯಿತೇ ವಿನಾ ಮನೆಗಲ್ಲ. ಆನಂತರ ಸಂಸ್ಕೃತಿ ಬೆಳೆದಂತೆ, ಜೀವನ ವಿಕಸನಗೊಂಡು ಆತನ ಅವಶ್ಯಕತೆಗಳು ಹೆಚ್ಚಿದಂತೆ ಇರಲು ಒಂದು ಮನೆ ಬೇಕಾದಾಗ, ಅದು ನಿತ್ಯ ಅಗತ್ಯವಾದಾಗ, ವಾಸದ ಅವಶ್ಯಕತೆ ಅಗತ್ಯವೆನಿಸಿ ಭದ್ರತೆಯ ದಾರಿಯಲ್ಲಿ ಕಟ್ಟಡ ನಿರ್ಮಾಣ ಆರಂಭವಾಗಿರಬೇಕು. ಆರಂಭದಲ್ಲಿ ಮರ, ಬೊಂಬು, ಮಣ್ಣು ಮುಂತಾದ ಬೇಗ ನಾಶವಾಗಬಹುದಾದಂತಹ ಸಾಧನಗಳಿಂದ ವಸತಿಗಳನ್ನು ಕಟ್ಟಿಕೊಂಡಿರಬೇಕು. ಇದೇ ಮಾದರಿಂದ ರಚಿತವಾದ ವಸತಿಗಳೆಂದರೆ, ತೆಕ್ಕಲಕೋಟೆ, ಸಂಗನಕಲ್ಲು, ಹಳ್ಳೂರು, ಪಿಕಲಿಹಾಳ ಮುಂತಾದ ನೆಲೆಗಳಲ್ಲಿ ಪುರಾತತ್ವ ವಿದ್ವಾಂಸರು ಉತ್ಖನನವನ್ನು ನಡೆಸಿ, ಅಲ್ಲಿ ದೊರೆತ ಅವಶೇಷಗಳ

ಹಿನ್ನೆಲೆಯಿಂದ ವಾಸ್ತುಗಳನ್ನು ಸ್ಥೂಲವಾಗಿ ಗುರುತಿಸಿದ್ದಾರೆ. ವಸತಿ ಮಾನವನ ಒಂದು ಸಾಂಸ್ಕೃತಿಕ ಅಂಗ. ವಿದ್ವಾಂಸರು ಈಗಾಗಲೇ ಅಭಿಪ್ರಾಯಪಟ್ಟಿರುವಂತೆ ಸಂಸ್ಕೃತಿಯ ಬೆಳವಣಿಗೆಯನ್ನು ವಸತಿಯ ಮೂಲಕವೂ ಗುರುತಿಸಬಹುದು. ಊಟ, ವಸ್ತ್ರದ ಹಾಗೆ ವಸತಿಯೂ ಮನುಷ್ಯನ ಮೂಲಭೂತ ಅಗತ್ಯಗಳಲ್ಲಿ ಒಂದಾಗಿದೆ. ಅಂತಹ ಬೇರೆ ಬೇರೆ ಅಗತ್ಯಗಳನ್ನನುಸರಿಸಿಯೇ ವಸತಿಯ ನಿರ್ಮಾಣ ಆಗಿದೆ; ಆಗುತ್ತಿದೆ. ಹೀಗಾಗಿ 'ವಸತಿ'ಗೂ ಮನುಷ್ಯನ ಬದುಕಿನ ವಿವಿಧ ಅಂಗಗಳಿಗೂ ಆಂತರಿಕ ಸಂಬಂಧವಿದೆ.

ಅರುವತ್ನಾಲ್ಕು ಕಲೆಗಳಲ್ಲಿ ಒಂದಾದ ಶಿಲ್ಪಕಲೆಯ ಒಂದು ಭಾಗವಾಗಿರುವುದೇ ವಾಸ್ತುಶಿಲ್ಪ. 'ವಾಸ್ತು' ಎಂಬ ಶಬ್ದದ ಅರ್ಥವೇ 'ವಾಸಸ್ಥಾನ ಅರ್ಥಾತ್ ಮನುಷ್ಯರು ವಾಸಿಸುವ ಸ್ಥಳ ಅಥವಾ ವಸತಿಯೇ ವಾಸ್ತು ಎನಿಸುತ್ತದೆ. ಶಿಲ್ಪ ಎಂದರೆ "ಮೂರ್ತಿ" ಎಂದರ್ಥ. ವಸ್ತುವಿನಿಂದ ರಚನೆಗೊಂಡ, ವಾಸ್ತುಯೋಗ್ಯವಾದ ವಾಸ್ತುವಿನ(ನಿವೇಶನದ) ಮೇಲೆ ರಚಿಸಲಾದ ಎಲ್ಲಾ ರಚನೆಗಳನ್ನು ವಾಸ್ತುರಚನೆ ಎನ್ನಬಹುದು. ವಿಶಾಲಾರ್ಥದಲ್ಲಿ ಹೇಳುವುದಾದರೆ, ಮನುಷ್ಯರ ಜೀವನಾರಂಭಕ್ಕೆ ಅವಶ್ಯಕವಾದ ಯಾವುದೇ ರಚನೆ ಕೂಡ ವಾಸ್ತುರಚನೆಯಾಗುತ್ತದೆ. ಹೀಗೆ ಮನೆ, ಕೆರೆ, ಕೋಟೆ, ದೇವಾಲಯ ಈ ಎಲ್ಲಾ ರಚನೆಗಳೂ ವಾಸ್ತುಶಿಲ್ಪ ಎನಿಸುತ್ತದೆ.

ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ವಾಸ್ತುಶಿಲ್ಪದ ಬೆಳವಣಿಗೆಯಲ್ಲಿ ಕಂಡುಕೊಳ್ಳಬಹುದು. The State of Civilization of a people is Judged by its Architecture"[7] ಎಂದು ಅಲೆಗ್ಸಾಂಡರ್ ರೀ ಅವರು ಹೇಳುವ ಮಾತು ಈ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತದೆ. ಜನಾಂಗದ ವೈಲಕ್ಷಣಗಳಿಗೂ ಮತ್ತು ಅದರ ಒಟ್ಟು ಮನೋ ಧರ್ಮಕ್ಕೂ ವಾಸ್ತುಶಿಲ್ಪ ಒಂದು ರೀತಿಯಲ್ಲಿ ಪ್ರತಿನಿಧಿಯಾಗಿ ಪರಿಣಮಿಸುತ್ತದೆನ್ನಬಹುದು. ವಿವಿಧ ದೇಶಗಳ ವಾಸ್ತುಶಿಲ್ಪದ ಚಾರಿತ್ರಿಕವಾದ ಬೆಳವಣಿಗೆಯನ್ನು ಗಮನಿಸಿದರೆ ಆ ಜನಾಂಗಗಳಿಗೆ ಅನುಗುಣವಾದ ಒಂದು ಮೂಲಭೂತ ಕಲ್ಪನೆ ಅವುಗಳಲ್ಲಿ ವ್ಯಕ್ತವಾಗಿರುವುದು ಕಾಣುತ್ತದೆ. ಗ್ರೀಕ್ ವಾಸ್ತುಶಿಲ್ಪದಲ್ಲಿ ನಿರ್ದಿಷ್ಟವಾದ ಅಲಂಕಾರವನ್ನು ಕಂಡರೆ; ರೋಮನ್ ಕಟ್ಟಡಗಳಲ್ಲಿ ಸ್ಪಷ್ಟವಾದ ವೈಜ್ಞಾನಿಕ ದೃಷ್ಟಿ ಗೋಚರವಾಗುತ್ತದೆ. ಫ್ರೆಂಚ್ ಗಾಥಿಕ್ ಶೈಲಿಯ ವಾಸ್ತುಶಿಲ್ಪವು ಮೊನಚಾದ ಮೂಲೆಗಳನ್ನುಳ್ಳ ಕಮಾನುಗಳಿಂದ ಕೂಡಿ, ಭಾವೋದ್ರಿಕ್ತವಾದ ಮನಸ್ಸನ್ನು ಪ್ರತಿಬಿಂಬಿಸುತ್ತದೆ. ಇಟಲಿಯ ಪುನರುಜ್ಜೀವನದ ಕಾಲದಲ್ಲಿ ನಿರ್ಮಿತವಾದ ಕಟ್ಟಡಗಳು ಆ ಕಾಲದ ಜನರ ಪಾಂಡಿತ್ಯದ ಪ್ರತೀಕಗಳಾಗಿವೆ. ಹಾಗೆಯೇ ಇಂಡಿಯಾ ದೇಶದ ವಾಸ್ತುಶಿಲ್ಪವನ್ನು ಕುರಿತು ಹೇಳಬಹುದಾದರೆ, ಇತರ ಎಲ್ಲ ಕಲೆಗಳಲ್ಲಿ ಕಂಡು ಬರುವಂತೆಯೇ ಇಲ್ಲಿನ ವಾಸ್ತುಶಿಲ್ಪದಲ್ಲಿಯೂ ಮುಖ್ಯವಾಗಿ ಕಾಣುವುದು ಆಧ್ಯಾತ್ಮಿಕ ಮನೋಧರ್ಮವನ್ನು.

ಮಾನವನು ತನಗಾಗಿ ಕಟ್ಟಿಕೊಂಡ "ಮನೆ". ಗೃಹವಾಸ್ತುಶಿಲ್ಪವೆನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು ಧಾರ್ಮಿಕ ವಾಸ್ತುಶಿಲ್ಪವೆನಿಸಿತು. ಗುಡಿಯ ಕಲ್ಪನೆ ಬಹುಪುರಾತನ ಕಲ್ಪನೆ, ದೇವಸ್ಥಾನದ ಕಲ್ಪನೆ ಇತ್ತೀಚಿನ ಕಲ್ಪನೆಯಾಗಿದೆ. ದೇವಾಲಯದ ಕಲ್ಪನೆಯನ್ನು ಮೊದಲು ಬೌದ್ಧರು ಪ್ರಸರಿಸಿದರು.

ಆದರೆ, ಅದಕ್ಕಿಂತ ಪೂರ್ವದಲ್ಲಿ ಇರಲಿಲ್ಲವೆ? ಇತ್ತು. ಆದರೆ, ಆರಾಧನೆಯು ಕೇವಲ ಮೂರ್ತಿ ಸ್ವರೂಪದ್ದಾಗಿತ್ತು. ಬೌದ್ಧರು ಸ್ತೂಪ, ಚೈತನ್ಯ, ವಿಹಾರದ ವಾಸ್ತುವನ್ನು ಧಾರ್ಮಿಕವಾಗಿ ಬಳಸಿಕೊಂಡರು. ಇದನ್ನು ಅರಿತ ಇತರ ಧರ್ಮಿಯರಿಗೆ ನಾವು ಯಾಕೆ? ವಾಸ್ತುವನ್ನು ಅವರಿಗಿಂತಲೂ ಅಲಂಕಾರ ಮಾಡಬಾರದು ಎಂಬ ಕಲ್ಪನೆ ಬೆಳೆದ ಹಿನ್ನೆಲೆಯಲ್ಲಿ ಜೈನರಲ್ಲಿ ಬಸದಿ ಅಥವಾ ಜಿನಾಲಯಗಳು, ಹಿಂದೂಗಳಲ್ಲಿ ದೇವಾಲಯಗಳು, ಮುಸ್ಲಿಂರಲ್ಲಿ ಮಸೀದಿಗಳು, ಕ್ರೈಸ್ತರಲ್ಲಿ ಚರ್ಚ್‌ಗಳು ಬೆಳವಣಿಗೆಯಾಗಿವೆ. ದೇವಾಲಯಗಳ ವೈಭವೀಕರಣ ಬೆಳದಿದ್ದು ಕ್ರಿ.ಶ. ೪ನೆಯ ಶತಮಾನದಿಂದ ೧೨ನೆಯ ಶತಮಾನದಲ್ಲಿ. ೧೨ನೆಯ ಶತಮಾನದ ಕೊನೆಯ ದಶಕಗಳಲ್ಲಿ ವಚನ ಚಳುವಳಿಯ ಹರಿಕಾರ ಬಸವಣ್ಣನ ಪ್ರಭಾವದಿಂದ ಕಡಿಮೆಯಾಯಿತು. ನಂತರ ವಿಜಯನಗರ ಅರಸರ ಮತ್ತು ಅವರ ಸಾಮಂತ ರಾಜರಾಗಿದ್ದು ಪಾಳೆಯಗಾರರ ಕಾಲದಲ್ಲಿ ಹೆಚ್ಚು ದೇವಾಲಯಗಳು ನಿರ್ಮಾಣವಾದವು.

ಕರ್ನಾಟಕದ ಉದ್ದಗಲಕ್ಕೂ ಇರುವ ನೂರಾರು ಮಹತ್ವದ ಐತಿಹಾಸಿಕ ನಿರ್ಮಿತಿಗಳಲ್ಲಿ ಧಾರ್ಮಿಕ ಸ್ಮಾರಕಗಳೇ ಅತ್ಯಧಿಕ. ಇಲ್ಲಿ ಆಳ್ವಿಕೆ ಮಾಡಿದ ನಂದರು, ಮೌರ್ಯರು, ಶಾತವಾಹನರು, ಕದಂಬರು, ಸೇಂದ್ರಕರು, ವಾಕಟಕರು, ಇಕ್ಷ್ವಾಕುಗಳು, ಬಾಣರು, ಗಂಗರು, ಆಳುಪರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಳುಕ್ಯರು, ಸೇವುಣರು, ಹೊಯ್ಸಳರು, ವಿಜಯನಗರ ಮತ್ತು ಪಾಳೆಯಗಾರರ ಹಲವು ರಾಜಮನೆತನದ ದೊರೆಗಳು ವಿಸ್ತಾರವಾದ ಕರ್ನಾಟಕದ ಭೂಭಾಗವನ್ನು ಆಳ್ವಿಕೆ ಮಾಡಿದ ಸಂದರ್ಭದಲ್ಲಿ ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಕಾಣಿಕೆಯನ್ನು ಸಲ್ಲಿಸಿದ್ದಾರೆ.

### ೩.೧. ಐರೋಪ್ಯ ವಾಸ್ತುಶಿಲ್ಪದ ಪ್ರಭಾವ

ಭಾರತದಲ್ಲಿ ಪಾಶ್ಚಿಮಾತ್ಯರ ಪ್ರಭಾವದಿಂದ ಸಾಮಾಜಿಕ, ಧಾರ್ಮಿಕ ಮತ್ತು ರಾಜಕೀಯ ವಿಚಾರಗಳಲ್ಲಿ ಉಂಟಾದ ಪರಿಣಾಮಗಳನ್ನು ನಾವು ಸಾಮಾನ್ಯ ರೀತಿಯಲ್ಲಿ ಪರಿಶೀಲಿಸಿದ್ದೇವೆ. ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಜನರು ಸಾಧಿಸಿದ ಪ್ರಗತಿಯನ್ನು ವಿಶ್ಲೇಷಿಸಿದರೆ, ಜೀವನ ಮತ್ತು ಸಮಾಜದಲ್ಲಿ, ಪಾಶ್ಚಿಮಾತ್ಯರ ಪ್ರಭಾವಕ್ಕೊಳಗಾಗದೇ ಉಳಿದಿರುವ ಯಾವ ಅಂಶವೂ ಇಲ್ಲವೆಂಬುದು ತಿಳಿಯುತ್ತದೆ. ರಾಜಕೀಯ, ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ಶಿಕ್ಷಣ, ಮುದ್ರಣ, ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲಿ ಉಂಟಾದ ಬದಲಾವಣೆಯು ಅಷ್ಟೇ ಕ್ರಾಂತಿಕಾರಕವಾಗಿತ್ತು. ಈ ಅಂಶಗಳು ಭಾರತವನ್ನು ಮಧ್ಯಯುಗದಿಂದ ಆಧುನಿಕಯುಗಕ್ಕೆ ಪರಿವರ್ತನೆಗೊಳ್ಳುವಂತೆ ಮಾಡಿದವು. ಹತ್ತೊಂಬತ್ತನೆಯ ಶತಮಾನವು ಒಂದು ವಿಭಜನ ರೇಖೆಯಾಗಿದೆ. ಏಕೆಂದರೆ, ಭಾರತದ ರೂಪವನ್ನೇ ಬದಲಾಯಿಸಿದ್ದಿತು. ಹಿಂದಿನ ಸಾವಿರ ವರ್ಷಗಳಲ್ಲಿ ಕಂಡು ಬರದಿದ್ದಷ್ಟು ದೊಡ್ಡ ಬದಲಾವಣೆ ಈ ಒಂದು ಶತಮಾನದಲ್ಲಾಗಿದೆ. ಇದು ಭಾರತದ ಮೇಲೆ ಪಾಶ್ಚಾತ್ಯ ಸಂಸ್ಕೃತಿ ಬೀರಿದ ಪ್ರಭಾವವನ್ನು ಸೂಚಿಸುತ್ತದೆ.

ಭಾರತದಲ್ಲಿ ಯೂರೋಪಿಯನ್ ವಾಸ್ತುಶಿಲ್ಪವು ಪ್ರಾರಂಭವಾದುದು ೧೮೫೭ರ ಪ್ರಥಮ ಸ್ವಾತಂತ್ರ್ಯ ಸಮರದ ನಂತರ ಅವರ ಆಳ್ವಿಕೆಯು ಭದ್ರವಾಗಿ ನೆಲೆಯೂರಿದ ಮೇಲೆಯೇ ಎನ್ನಬಹುದು. ಇದಕ್ಕೂ ಪೂರ್ವದಲ್ಲಿ ಅವರ ವಾಸ್ತುಶಿಲ್ಪದ ಪ್ರಭಾವ ಇರಲಿಲ್ಲವೆ? ಇತ್ತು. ಅದು ಮೊದಲು ಧಾರ್ಮಿಕ ವಾಸ್ತುಶಿಲ್ಪ ಪ್ರಭಾವ ಬೀರಿತು. ಏಕೆಂದರೆ, ಯೂರೋಪಿಯನ್ನರಾದ ಪೋರ್ಚುಗೀಸರು, ಡಚ್ಚರು, ಇಂಗ್ಲಿಷರು ಮತ್ತು ಫ್ರೆಂಚರು ಇವರು ಭಾರತಕ್ಕೆ ಬಂದದ್ದು ವ್ಯಾಪಾರಿಗಳಾಗಿ, ಹಾಗಾಗಿ ಅವರು ಮೊದಲು ಕೈಗಾರಿಕಾ ಕಾರ್ಖಾನೆಗಳನ್ನು ಸ್ಥಾಪಿಸಿ, ಅವುಗಳಿಗೆ ವ್ಯಾಪಾರಿ ನೆಲೆಗಳನ್ನು ಅಥವಾ ಕೋಠಿಗಳಿಗಾಗಿ ಪೈಪೋಟಿಯಲ್ಲಿ ನಿರತರಾಗಿದ್ದ ಕಾರಣಕ್ಕಾಗಿ ಕ್ರೈಸ್ತ ಮಿಷನರಿಗಳು ಗೋವಾವನ್ನು ಪ್ರಮುಖ ಧಾರ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡು ಆ ಮೂಲಕ ಭಾರತದಾದ್ಯಂತ ಕ್ರೈಸ್ತ ಧರ್ಮ ಪ್ರಸಾರ ಮಾಡಿದರು. ಮಿಷನರಿಗಳು ಆರಾಧನಾ ಸೇವೆಗಾಗಿ, ಪ್ರಾರ್ಥನಾ ಮಂದಿರಗಳನ್ನು ಸ್ಥಾಪಿಸಿಕೊಂಡರು. ಕ್ರಿ.ಶ. ೧೫೧೦ರಲ್ಲಿ ಕೇರಳದ ಕೋಚ್ಚಿಯಲ್ಲಿ ಕಟ್ಟಿದ ಸೈಂಟ್ ಫ್ರಾನ್ಸಿಸ್ ಚರ್ಚ್. ಕ್ರೈಸ್ತ ಮಿಷನರಿಗಳು ಭಾರತದಲ್ಲಿ ಕಟ್ಟಿದ ಮೊದಲ ಚರ್ಚ್ ಅದಾಗಿದೆ. ಇವರ ಪ್ರಭಾವ ಕರ್ನಾಟಕದಲ್ಲಿಯೂ ಆರಂಭಗೊಂಡಿದ್ದಲ್ಲದೆ, ಕ್ರೈಸ್ತ ದೇವಾಲಯಗಳನ್ನೂ ನಿರ್ಮಾಣ ಮಾಡಿಕೊಂಡರು. ಕರ್ನಾಟಕದಲ್ಲಿ ಮೊಟ್ಟಮೊದಲು ಮಂಗಳೂರಿನಲ್ಲಿ ಚರ್ಚ್‌ಗಳನ್ನು ನಿರ್ಮಿಸಿದರು.

ಭಾರತದಲ್ಲಿ ವ್ಯಾಪಾರಿ ನೆಲೆಗಳಿಗಾಗಿ ಅಥವಾ ವಸಾಹತು ನೆಲೆಗಳಿಗಾಗಿ ಯೂರೋಪಿಯನ್ನರ ನಡುವೆ ನಡೆದ ಪೈಪೋಟಿಯಲ್ಲಿ ಬ್ರಿಟಿಷರು ಮೇಲುಗೈ ಸಾಧಿಸಿದರು. ಇವರು ಭಾರತದಲ್ಲಿ ದತ್ತು ಮಕ್ಕಳಿಗೆ ಹಕ್ಕಿಲ್ಲ, ಸಹಾಯಕ ಸೈನ್ಯ ಪದ್ಧತಿಯಂತಹ ರಾಜಕೀಯ ನೀತಿಗಳನ್ನು ಜಾರಿಗೆ ತಂದು, ಆ ಮೂಲಕ ಸ್ಥಳೀಯ ರಾಜರೊಡನೆ ಹಂತ ಹಂತವಾಗಿ ಯುದ್ಧಗಳನ್ನು ಮಾಡಿ, ಜಯಿಸಿ, ಇಡೀ ಭಾರತವನ್ನು ೧೮೫೮ರಲ್ಲಿ ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡರು. "ಬ್ರಿಟಿಷರು ಮೊದಲು ಮದರಾಸಿನಲ್ಲಿ ೧೬೪೧ರಲ್ಲಿ ಕಾರ್ಖಾನೆಗಳನ್ನೂ, ಕೋಠಿಗಳನ್ನು ಸ್ಥಾಪಿಸಿದರು".[೨] ಇವರು ಬಂಗಾಳ ಪ್ರಾಂತದೊಂದಿಗೆ ವ್ಯಾಪಾರ ಪ್ರಾರಂಭಿಸಿದ್ದ ಕಾರಣಕ್ಕಾಗಿ ೧೬೯೧ರಲ್ಲಿ ಕಲ್ಕತ್ತ ಪಟ್ಟಣ ನಿರ್ಮಾಣವಾಯಿತು. ಪೋರ್ಚುಗೀಸರ ಸ್ವಾಧೀನದಲ್ಲಿದ್ದ ಮುಂಬಯಿ ಇಂಗ್ಲೆಂಡಿನ ದೊರೆ ಎರಡನೆಯ ಚಾರ್ಲ್ಸ್‌ನ ರಾಣಿಗೆ ಬಳುವಳಿಯಾಗಿ ದೊರೆಯಿತು. ಕಾಲಕ್ರಮೇಣ ಈಸ್ಟ್ ಇಂಡಿಯಾ ಕಂಪನಿಯ ಸರಕುಗಳನ್ನೂ ವ್ಯಾಪಾರವನ್ನೂ ಸುಭದ್ರವಾಗಿಡಲು ವಸಾಹತುಗಳ ಸುತ್ತಲೂ ಕೋಟೆ ಕೊತ್ತಲಗಳನ್ನು ಕಟ್ಟಬೇಕಾಯಿತು. ಈ ಕಾರಣದಿಂದ ಪಶ್ಚಿಮ ತೀರದಲ್ಲಿದ್ದ ಕೋಠಿಯನ್ನು ಸೂರತ್ತಿನಿಂದ ಮುಂಬಯಿಗೆ ವರ್ಗಾಯಿಸಲಾಯಿತು. ಕಲ್ಕತ್ತದ ಕಾರ್ಖಾನೆ ಮತ್ತು ಕೋಠಿಗಳನ್ನು ಪೋರ್ಟ್ ವಿಲಿಯಂ ಕೋಟೆಯಲ್ಲಿ ಸ್ಥಾಪಿಸಲಾಯಿತು. ಚೆನ್ನೈನ ಕೋಟೆಗೆ ಪೋರ್ಟ್ ಸೆಂಟ್ ಜಾರ್ಜ್ ಎಂದೂ ಕಡಲೂರಿನ ಬಳಿ ಇದ್ದ ಕೋಟೆಗೆ ಪೋರ್ಟ್ ಸೆಂಟ್ ಡೇವಿಡ್ ಎಂದೂ ಹೆಸರಾಯಿತು. ವ್ಯಾಪಾರ ಬೆಳದ ಹಾಗೆ ಭಾರತದ ಪಟ್ಟಣಗಳು ವೃದ್ಧಿಯಾದವು. ಬ್ರಿಟಿಷರು ಭಾರತಕ್ಕೆ ಬಂದಾಗ ಮದರಾಸ್ ಮತ್ತು ಕಲ್ಕತ್ತ ನಗರಗಳು ಮಾತ್ರ

ಮುಖ್ಯ ವ್ಯಾಪಾರ ನಗರಗಳಾಗಿದ್ದವು. ಆ ನಂತರ ಅವರ ಮುಂದುವರಿದ ಆರ್ಥಿಕ ಚಟುವಟಿಕೆಯಿಂದ ಕಾನ್ಪುರ ಮತ್ತು ಸೋಲ್ಲಾಪುರ ನಗರಗಳು ಶೀಘ್ರವಾಗಿ ಬೆಳವಣಿಗೆಯಾದವು. ರೈಲ್ವೆ ಮತ್ತು ಸಮುದ್ರ ಮಾರ್ಗಗಳನ್ನು ಬ್ರಿಟಿಷರು ತಮ್ಮ ವಾಣಿಜ್ಯ ವ್ಯಾಪಾರದ ಪ್ರಗತಿಗೆ ಅಭಿವೃದ್ಧಿಪಡಿಸಿದರು. ಇದರಿಂದ ಬಾಂಬೆ, ಮದರಾಸ್, ಕಲ್ಕತ್ತ, ದೆಹಲಿ, ಕಂಚಿ, ಲಾಹೋರ್, ಹುಬ್ಬಳ್ಳಿ, ಹೈದರಾಬಾದ್, ಬಳ್ಳಾರಿ, ಆದೋನಿ, ಕೊಟ್ಟೂರು ಈ ಪಟ್ಟಣಗಳು ವಾಣಿಜ್ಯದ ಪ್ರಮುಖ ಕೇಂದ್ರಗಳಾಗಿ ಮಾರ್ಪಟ್ಟು ದೊಡ್ಡ ವ್ಯಾಪಾರ ಕೇಂದ್ರದ ನಗರಗಳಾಗಿ ಬೆಳೆಯಲು ಕಾರಣವಾದವು.

ಬ್ರಿಟಿಷರು ತಮ್ಮ ಪ್ರಭಾವವನ್ನು ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ಅಚ್ಚಳಿಯದಂತೆ ಉಳಿಸಿ ಹೋಗಿದ್ದಾರೆ. ಹತ್ತೊಂಬತ್ತನೆಯ ಶತಮಾನದಲ್ಲಿ ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರದಲ್ಲೂ ಮಹತ್ತ್ವದ ಬದಲಾವಣೆ ಇವರ ಪ್ರಭಾವದಿಂದ ಕಂಡುಬಂತು. ಇದಕ್ಕೆ ಕಾರಣ ಬ್ರಿಟಿಷರು ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಕರ್ನಾಟಕವನ್ನು ಆಡಳಿತದ ಹಿತದೃಷ್ಟಿಯಿಂದ ಐದು ಭಾಗಗಳಾಗಿ, ಅಂದರೆ, ಮದರಾಸ್, ಮುಂಬಯಿ, ಹೈದರಾಬಾದ್, ಮೈಸೂರು ಮತ್ತು ಕೊಡುಗು ಪ್ರಾಂತಗಳನ್ನಾಗಿ ವಿಂಗಡಿಸಿಕೊಂಡು ಆಳ್ವಿಕೆ ಮಾಡುತ್ತಿದ್ದರು. ಪ್ರತಿಯೊಂದು ಪ್ರಾಂತವನ್ನು ಜಿಲ್ಲೆಗಳನ್ನಾಗಿ, ತಾಲೂಕುಗಳನ್ನಾಗಿ ವಿಂಗಡಿಸಿಕೊಂಡು ಅಲ್ಲಿ ಪ್ರಮುಖವಾಗಿ, ಆಡಳಿತ ಕಛೇರಿ, ನ್ಯಾಯಾಲಯ, ಸೈನಿಕ ಬಂಗಲೆ, ಪೊಲೀಸ್ ಠಾಣೆ, ಕಾರಾಗೃಹ, ಪರಿವೀಕ್ಷಣಾ ಮಂದಿರ, ಶಾಲಾ ಕಟ್ಟಡ, ಕ್ರೈಸ್ತ ದೇವಾಲಯ ಮತ್ತು ವಸತಿ ಬಂಗಲೆಗಳನ್ನು ತಮ್ಮ ತಾಯ್ನಾಡಿನಲ್ಲಿ ಪ್ರಚಲಿತವಾಗಿದ್ದ ಕಲಾ ಶೈಲಿಗಳಾದ ಗಾತಿಕ್, ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಯಲ್ಲಿ ನಿರ್ಮಾಣ ಮಾಡಿದರು.

ಬ್ರಿಟಿಷರಿಂದ ನಮಗೆ 'ವರಪ್ರಸಾದ'ಗಳಾಗಿ ಲಭಿಸಿದ ಕಟ್ಟಡಗಳು ಕಣ್ಣಿಗೆ ಚೆಲುವಾಗಿರಬಹುದು; ಆದರೆ, ಅವುಗಳಲ್ಲಿ ಯಾವ ದೈವೀ ತತ್ತ್ವವೂ ವ್ಯಕ್ತವಾಗುವಂತಿಲ್ಲ; ನಮ್ಮ ದೇಶದ ಗತಕಾಲದ ಕಲಾ ಸಂಪ್ರದಾಯಗಳಿಗೆ ಸಂಗತವಾದ ವಾಸ್ತು ಲಕ್ಷಣಗಳು ಅವುಗಳಲ್ಲಿ ಗೋಚರಿಸುವಂತಿಲ್ಲ; ನಮ್ಮ ಪುರಾತನ ಜೀವನ ತತ್ತ್ವವನ್ನಾಗಲಿ ಕಲಾಸತ್ತ್ವವನ್ನಾಗಲಿ ಅವು ಹೊಮ್ಮಿಸುವಂತಿಲ್ಲ. ಡಾ. ರಂಗಾಚಾರ್ಯರು ಹೇಳಿರುವಂತೆ, 'ಬ್ರಿಟಿಷ್ ಕಾಲದ ಕಟ್ಟಡಗಳು ಮೂಕಜಡ ವಸ್ತುಗಳು. ಅವು ಧ್ವನಿಪೂರ್ಣಗಿಲ್ಲ. ರೋಮಾಂಚಕಾರಿ ಘಟನೆಯ ಸ್ಮಾರಕಗಳಂತೆ, ನಮ್ಮ ಜನಮನದ ಹೃದಯವನ್ನು ಅವು ಮೂದಲಿಸುವುದಿಲ್ಲ. ನಮ್ಮ ಜನಾಂಗಕ್ಕೆ ವಿಶಿಷ್ಟವಾದ 'ಕಾಣ್ಕೆ' ಅವುಗಳಲ್ಲಿಲ್ಲ. "ಈ ಕಟ್ಟಡದಲ್ಲಿ ಮಿತವ್ಯಯ, ಶೈಲಿಯಲ್ಲಿ ಸರಳತೆ, ಇವೆರಡೂ ಶ್ಲಾಘ್ಯಗುಣಗಳೇ ಸರಿ. ಆದರೆ, ಮಿತವ್ಯಯದ ಹೆಸರಲ್ಲಿ ರೂಪ ಸೌಂದರ್ಯವೂ ಸೂಕ್ತ ಅಲಂಕರಣ ರೀತಿಯೂ ಎಷ್ಟೋ ಕಡೆ ಲುಪ್ತವಾಗಿವೆ. ಆಧುನಿಕ ಕಟ್ಟಡಗಳ ನಿರ್ಮಾಣಕ್ಕೆ ತಗಲುವ ವೆಚ್ಚ ಕಡಿಮೆ; ಹಿಡಿಯುವ ಕಾಲವೂ ಕಡಿಮೆ. ಆದರೆ, ಅವು ಹೆಚ್ಚಾಗಿ ಅನುಕರಣ ಕೃತಿಗಳೇ ಹೊರತು, ಘನವಾದ ಜೀವನ ತತ್ತ್ವ ದ್ಯೋತಕವಾದ ಕಲಾಕೃತಿಗಳಲ್ಲ; ಬ್ರಿಟಿಷ್ ಪರಂಪರೆಯಲ್ಲಿ ನಿರ್ಮಿತವಾದ

ಕಟ್ಟಡಗಳ ವಿನ್ಯಾಸಗಳು ನಿರ್ಮಾಪಕನ 'ಹುಚ್ಚು ಮನಸ್ಸಿನ ಹತ್ತು ಮುಖಗಳೇ ಹೊರತು, ಯಾವ ನಿರ್ದಿಷ್ಟ ಶಾಸ್ತ್ರ ನಿಯಮಕ್ಕೂ ಅವು ಹೊಂದಿಕೆಯಾಗುವುದಿಲ್ಲ".[೩] ರಂಗಾಚಾರ್ಯರು ಹೇಳುವಂತೆ, ಅವು ಕೇವಲ ವಿದೇಶೀಯ ಸಂಸ್ಕೃತಿಯ, ವಿದೇಶೀಯ ಸಂಪ್ರದಾಯದ, ವಿದೇಶೀಯ ವ್ಯಂಜನಾ ರೀತಿಯ ಅಂಧಾನುಕರಣವಲ್ಲದೆ ಬೇರೇನೂ ಅಲ್ಲ 'ನಿಜವಾದ ವಾಸ್ತುಶಿಲ್ಪ ತತ್ವಗಳು ಕಾರ್ಯರೂಪಕ್ಕೆ ಬಂದಿರುವುದು ಭಾರತದಲ್ಲಿಲ್ಲದೆ ಬೇರೆಲ್ಲೂ ಅಲ್ಲ' ಎಂದು ಫರ್ಗ್ಯುಸನ್ ಹೇಳಿರುವುದರಲ್ಲಿ ಅತ್ಯುಕ್ತಿಯೇನು ಇಲ್ಲ.

ಬ್ರಿಟಿಷರು ನಮ್ಮ ನಾಡಿನಲ್ಲಿ ಹವಾಮಾನಕ್ಕೆ ಅನುಗುಣವಾಗಿ ಆಯಾ ಪ್ರದೇಶಗಳಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಅವುಗಳಲ್ಲಿ ರೋಮನ್ ಕಮಾನುಗಳೂ, ಕಮಾನು ಸರಣಿಗಳೂ, ಗುಮ್ಮಟ ಮಾದರಿಗಳೂ ಪದೇ ಪದೇ ಕಂಡುಬರುತ್ತವೆ. ಇವರು ಕಟ್ಟಡಗಳನ್ನು ಕಟ್ಟುವಾಗ ಸ್ಥಳೀಯವಾಗಿ ದೊರೆಯುವ ಇಟ್ಟಿಗೆ, ಜಲ್ಲಿಕಲ್ಲಿನಗಾರೆ ಇವುಗಳ ಬಳಕೆ ಗಣನೀಯ ಕಾಲಕ್ರಮದಲ್ಲಿ ಸಿಮೆಂಟ್, ಕಾಂಕ್ರೀಟು, ಕಬ್ಬಿಣ ಸರಳುಗಳನ್ನು ಬಳಸಿದ್ದು ಕಂಡುಬರುತ್ತದೆ. ಇವರು ಕಟ್ಟಡಗಳಿಗೆ ನುಣುಪು ಮಾಡಿದ ಸಾಮಾನ್ಯ ಗಾತ್ರದ ಕಲ್ಲನ್ನು ಬಳಸಿಕೊಂಡಿದ್ದರಿಂದ ಕಟ್ಟಡದ ಗೋಡೆ ಮತ್ತು ಕಂಬಗಳು ಹೊರನೋಟಕ್ಕೆ ವೈಭವೋಪೇತವಾಗಿ ಕಂಡುಬರುತ್ತವೆ. ಕಟ್ಟಡಗಳ ಮುಂಭಾಗದ ಮುಖ್ಯದ್ವಾರ ಮತ್ತು ಕಿಡಕಿಗಳನ್ನು ಸುಂದರವಾದ ಮತ್ತು ಆಕರ್ಷಣೀಯವಾದ ಎಲೆಮೊನಚಿನಾಕಾರದ ಇಲ್ಲವೆ ದುಂಡನೆಯ ಕಮಾನುಗಳಿಂದ ವಿನ್ಯಾಸಗೊಳಿಸಿದ್ದಾರೆ. ಈ ಕಮಾನುಗಳನ್ನು ಕಲ್ಲು, ಇಟ್ಟಿಗೆ ಮತ್ತು ಗಾರೆಯನ್ನು ಬಳಸಿಕೊಂಡು ವಿಶೇಷ ತಂತ್ರಜ್ಞಾನದೊಂದಿಗೆ ವಿನ್ಯಾಸಗೊಳಿಸಲಾಗಿದೆ. ಇಂತಹ ಕಮಾನು ಶೈಲಿಯ ಕಟ್ಟಡಗಳನ್ನು ನಾವು ಮುಸ್ಲಿಂ ಮಸೀದಿ, ದರ್ಗಾಗಳಲ್ಲಿ ಕಾಣುತ್ತೇವೆ. ಈ ಶೈಲಿಯನ್ನು ಮುಸ್ಲಿಂರು ಹೆಚ್ಚು ಬಳಸಿಕೊಂಡಿದ್ದರೂ ಕೂಡ ಅದು ಮೂಲತಃ ರೋಮನ್ನರ ಶೈಲಿಯಾಗಿದೆ. ಇದು ೧೨ನೆಯ ಶತಮಾನದಲ್ಲಿ ಭಾರತಕ್ಕೆ ಬಂದ ಮುಸ್ಲಿಂರ ಪ್ರಭಾವದಿಂದ ಭಾರತಕ್ಕೆ ಪ್ರವೇಶಿಸಿತು. ಈ ಕಮಾನು ಶೈಲಿಯನ್ನು ದೆಹಲಿ ಸುಲ್ತಾನರು ಮತ್ತು ಮೊಗಲರ ಕಾಲಾವಧಿಯಲ್ಲಿ ಹೆಚ್ಚು ಬಳಸಿಕೊಂಡಿರುವುದು ಕಂಡುಬಂದಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರು ಅದನ್ನು ಅನುಸರಿಸಿರುವುದು, ಅವರು ಇಲ್ಲಿ ನಿರ್ಮಿಸಿದ ಕಟ್ಟಡಗಳಿಂದ ದೃಢಪಡುತ್ತದೆ. ಉದಾ:- ಮೈಸೂರು, ಬೆಂಗಳೂರು, ಧಾರವಾಡ, ಬೆಳಗಾವಿ, ಬಳ್ಳಾರಿ ಮುಂತಾದ ನಗರಗಳಲ್ಲಿರುವ ಬ್ರಿಟಿಷರ ಸ್ಮಾರಕಗಳಲ್ಲಿ ಕಂಬ ಸಾಲುಗಳ ಮೇಲೆ ಹಾಗೂ ಕಿಟಕಿ-ಬಾಗಿಲುವಾಡಗಳ ಮೇಲೆ ಅರೆದಾರಾ ದುಂಡು ಕಮಾನುಗಳಿಂದ ಕೂಡಿದ ಕಟ್ಟಡಗಳನ್ನು ಇಂದಿಗೂ ನೋಡಬಹುದಾಗಿದೆ.

ಬ್ರಿಟಿಷರು ಕಟ್ಟಡಗಳಿಗೆ ಅತಿ ಹೆಚ್ಚು ಕಬ್ಬಿಣ ಮತ್ತು ಮಂಗಳೂರು ಹಂಚು ಬಳಸಿರುವುದು ಕಂಡುಬಂದಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಕರ್ನಾಟಕ್ಕೆ ಬಂದ 'ಬಾಸೆಲ್‌ಮಿಷನ್ ಮಿಷನರಿಗಳು ೧೮೬೫ರಲ್ಲಿ ಮಂಗಳೂರಿನ ಜೆಪ್ಪುವಿನಲ್ಲಿ ಹೆಂಚಿನ ಕಾರ್ಖಾನೆಯನ್ನು ಮೊಟ್ಟ ಮೊದಲು ಸ್ಥಾಪಿಸಿದರು'.[೪] ಇಲ್ಲಿಂದ ಕರ್ನಾಟಕಾದಾದ್ಯಂತಹ ಸರಬರಾಜು ಆಗಿರುವುದು ಆ

ಕಾಲಘಟ್ಟದಲ್ಲಿ ನಿರ್ಮಾಣಗೊಂಡ ಕಟ್ಟಡಗಳಿಂದ ದೃಢಪಟ್ಟಿದೆ. ಇದಕ್ಕೂ ಪೂರ್ವದಲ್ಲಿ ಹೆಂಚಿನ ಬಳಕ್ಕೆ ಇರಲಿಲ್ಲವೆ? ಇತ್ತು. ಅದು ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಕುಂಬಾರರು ತಮ್ಮ ಚಕ್ರಗಳ ಮೂಲಕ ತಯಾರಿಸಿದ ಅರ್ಧಚಂದ್ರಾಕೃತಿಯ ಸಣ್ಣ ಹೆಂಚುಗಳನ್ನು ತಯಾರಿಸಿ, ಬಳಸುತ್ತಿದ್ದರು. ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಮಂಗಳೂರು ಜಿಲ್ಲೆಯಲ್ಲಿ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದ ಆಂಡ್ರೂ ಪ್ಲೆಬ್ಸ್ ಎಂಬುವರು ಮಣ್ಣಿನ ವಸ್ತುಗಳ ತಯಾರಿಕೆಯಲ್ಲಿ ಅಧ್ಯಯನ ನಡೆಸುತ್ತಿದ್ದ ಸಮಯದಲ್ಲಿ ಇವರು ಜರ್ಮನಿಗೆ ತೆರಳಿ ಮಣ್ಣು ಹದ ಮಾಡುವುದು, ಹಂಚು ತಯಾರಿ, ಹಂಚು ಸುಡುವ ಗೂಡು ನಿರ್ಮಿಸುವುದು, ಬೇಯಿಸುವುದು ಮುಂತಾದ ಕ್ರಮಗಳ ಬಗ್ಗೆ ತರಬೇತಿ ಪಡೆದರು. ಇವರ ಶ್ರಮದ ಫಲವಾಗಿ ಮಂಗಳೂರಿನಲ್ಲಿ ಹಂಚಿನ ಕಾರ್ಖಾನೆಗಳು ಆರಂಭಗೊಂಡವು'.[೫] ಇಲ್ಲಿಯ ಹಂಚುಗಳು ಉತ್ಕೃಷ್ಟ ಗುಣಮಟ್ಟದಿಂದ ತಯಾರಿಸಲಾಗುತ್ತಿತ್ತು. ಹಾಗಾಗಿ ವಿಶ್ವದಾದ್ಯಂತ ಮಂಗಳೂರು ಹೆಂಚು ಎಂಬ ಖ್ಯಾತಿಗೆ ಪಾತ್ರವಾಗಿದೆ. ಕರ್ನಾಟಕದಲ್ಲಿ ಬ್ರಿಟಿಷರು ನಿರ್ಮಿಸಿದ ಕಟ್ಟಡಗಳಲ್ಲಿ ಶಾಲಾ ಕಟ್ಟಡಗಳಿಗೆ ಬಹುತೇಕ ಹಂಚು ಬಳಸಿರುವುದು ಕಂಡುಬಂದಿದೆ. ಇವರು ನಿರ್ಮಿಸಿದ ಕಟ್ಟಡಗಳಲ್ಲಿ ಇನ್ನೊಂದು ವಿಶೇಷತೆಯೆಂದರೆ, ಕಟ್ಟಡಗಳ ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಹೇರಳವಾಗಿ ಒಳ ನುಸುಳಿ ಬರುವಂತೆ ದೊಡ್ಡ, ದೊಡ್ಡ ಕಿಡಕಿ-ಬಾಗಿಲುಗಳು ಮತ್ತು ವಿವಿಧ ಬಣ್ಣದ ಗಾಜುನ್ನು ಅಳವಡಿಸಿ, ವಿನ್ಯಾಸಗೊಳಿಸಿರುವುದು ಕಂಡುಬಂದಿದೆ. ಏಕೆಂದರೆ, ವಸಾಹತುಶಾಹಿ ಆಳ್ವಿಕೆಯ ಆರಂಭದಲ್ಲಿ ವಿದ್ಯುತ್ ವ್ಯವಸ್ಥೆ ಇರಲಿಲ್ಲ. ಹಾಗಾಗಿ ಅವರು ಕಿಡಕಿ ಮತ್ತು ಬಾಗಿಲುಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದು ಕಂಡುಬಂದಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಬ್ರಿಟಿಷರು ನಿರ್ಮಿಸಿರುವ ಕಟ್ಟಡಗಳನ್ನು ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಿದಾಗ ಅವರು ಎರಡು ಬಗೆಯ ಸ್ಥಳಗಳನ್ನು ಆಯ್ಕೆ ಮಾಡಿಕೊಂಡಿರುವುದನ್ನು ಗಮನಿಸಲಾಗಿದೆ. **ಒಂದು ಗಿರಿ-ಬೆಟ್ಟ ಸ್ಥಳ:** ಬಳ್ಳಾರಿ ಪರಿಸರವು ಬೇಸಿಗೆ ಕಾಲದಲ್ಲಿ ಅತಿ ಹೆಚ್ಚು ಬಿಸಿಲಿನ ವಾತಾವರಣವನ್ನು ಹೊಂದಿದ್ದ ಕಾರಣಕ್ಕಾಗಿ ಬ್ರಿಟಿಷರು ಸಂಡೂರು ಸಂಸ್ಥಾನದ ವ್ಯಾಪ್ತಿಯಲ್ಲಿದ್ದ ರಾಮನಮಲೈ ಅಥವಾ ರಾಮನ್‌ದುರ್ಗ ಅಥವಾ ರಾಮಘಡ ಬೆಟ್ಟವನ್ನು ಸಂಡೂರು ಮಹಾರಾಜರ ಅನುಮತಿಯನ್ನು ಪಡೆದು ಅದನ್ನು ವಿಶ್ರಾಂತಿ ಧಾಮವನ್ನಾಗಿ ಮಾಡಿಕೊಂಡು ಅಲ್ಲಿ ಪ್ಯಾಲೇಸ್, ವಸತಿ ಬಂಗಲೆ, ಸೈನಿಕ ಬಂಗಲೆ ಹಾಗೂ ಅನಾರೋಗ್ಯ ನಿಮಿತ್ತ ಬಳಲುತ್ತಿರುವ ಬ್ರಿಟಿಷ್ ಅಧಿಕಾರಿಗಳಿಗೆ ಒಂದು ಆಸ್ಪತ್ರೆಯನ್ನು ಸ್ಥಾಪಿಸಿಕೊಂಡು ವಿಶ್ರಾಂತಿ ಪಡೆಯುತ್ತಿದ್ದರು. ಇಲ್ಲಿ ಬ್ರಿಟಿಷರು ನಿರ್ಮಿಸಿರುವ ಕಟ್ಟಡಗಳು ಇಂದಿಗೂ ನಿಂತಿವೆ. ಆದರೆ, ಆ ಕಟ್ಟಡಗಳನ್ನು ಯಾರು ಬಳಸದೆ ಭೂತ ಬಂಗಲೆಗಳಾಗಿ ಪಾಳು ಬಿದ್ದಿವೆ.

**ಎರಡನೆಯದು ಸಮತಟ್ಟಾದ ಪ್ರದೇಶ :** ಬ್ರಿಟಿಷರು ತಮ್ಮ ಆಡಳಿತದ ಅನುಕೂಲಕ್ಕಾಗಿ, ಸೈನಿಕ ಕಾರ್ಯಾಚರಣೆಗಾಗಿ ಮತ್ತು ಇಲ್ಲಿನ ಸಂಪತ್ತನ್ನು ತಮ್ಮ ತಾಯ್ನಾಡಿಗೆ ರವಾನಿಸಲು ಅನುಕೂಲವಾಗುವಂತಹ ಸ್ಥಳ ಅಥವಾ ಸಮತಟ್ಟಾದ ಪ್ರದೇಶಗಳಲ್ಲಿ ಕಟ್ಟಡಗಳನ್ನು

ನಿರ್ಮಿಸಿಕೊಂಡಿದ್ದಾರೆ. ಬಳ್ಳಾರಿ ನಗರದ ಕೇಂದ್ರ ಭಾಗದಲ್ಲಿ, ಕಂಟೋನ್ಮೆಂಟ್ ಪ್ರದೇಶ, ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ, ಸಿರುಗುಪ್ಪ, ಆಲೂರು, ಆದೋನಿ, ರಾಯದುರ್ಗ ಇತ್ಯಾದಿ ಆಯಾಕಟ್ಟಿನ ಸ್ಥಳಗಳಲ್ಲಿ ಬ್ರಿಟಿಷರು ನಿರ್ಮಿಸಿರುವ ಕಟ್ಟಡಗಳು ಇಂದಿಗೂ ಜೀವಂತವಾಗಿವೆ. ಬ್ರಿಟಿಷರು ಕಟ್ಟಿಸಿದ ಕಟ್ಟಡಗಳು ಸಾಲು ಸಾಲಾಗಿ, ವಿಶಾಲವಾದ ಕೊಠಡಿ, ಆವರಣ, ರಕ್ಷಣಾಗೋಡೆ, ಕಟ್ಟಡದ ಮುಂಭಾಗದಲ್ಲಿ ಮೈದಾನ ಇರುವುದು ಕಾಣಿಸುತ್ತದೆ. ಇಂತಹ ಲಕ್ಷಣಗಳಿಂದ ಕೂಡಿದ ಕಟ್ಟಡವನ್ನು ನೋಡಿದ ಪ್ರತಿಯೊಬ್ಬ ಜನಸಾಮಾನ್ಯನೂ ಇದು ಬ್ರಿಟಿಷರ ಕಟ್ಟಡವೆಂದೇ ಹೇಳುವುದರಲ್ಲಿ ಸಂದೇಹವೇ ಇಲ್ಲ.

ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವು ಮೊದಲು ಅತ್ಯಂತ ಗಾಢವಾಗಿ ಇದ್ದಾಗ, ಬಡ ಜನರು ವಾಸಿಸುವ ಮನೆಗಳು ಸಾಧಾರಣ ಮೊದಲಿದ್ದಂತೆಯೇ ಉಳಿದವು. ಆದರೆ, ವಸಾಹತುಶಾಹಿ ಆಳ್ವಿಕೆಯ ಆಡಳಿತದಲ್ಲಿ ಸೇರಿಕೊಂಡ ಆಡಳಿತ ವರ್ಗದವರ ಮನೆಗಳು ಮತ್ತು ಶ್ರೀಮಂತ ವರ್ಗದವರ ಹೊಸ ಮನೆಗಳು ಯೂರೋಪಿಯನ್ ಮಾದರಿಯ ವಿನ್ಯಾಸವನ್ನು ಹೆಚ್ಚಾಗಿ ಅನುಕರಿಸಿದವು. ಯೂರೋಪಿಯನ್ ಮಾದರಿಯ ಬಾಗಿಲು, ಅಲಂಕೃತ ವಸ್ತುಗಳು, ಮೇಲ್ಛಾವಣಿ ಹಾಗೂ ಗಾಥಿಕ್, ಡೋರಿಕ್, ಐಯೋನಿಕ್, ಕಾರಿಂಥಿಯನ್ ಶೈಲಿಯಿಂದ ಬಂದ ಸಮ್ಮಿಶ್ರ ಕಂಬಗಳು ಇವುಗಳನ್ನು ಉಪಯೋಗಕ್ಕಾಗಿ, ಅಲಂಕಾರಕ್ಕಾಗಿ ಕಾಲಕಾಲಕ್ಕೆ ಜೋಡಿಸಲಾಯಿತು. ಕೆಲವೊಮ್ಮೆ ಮನೆಯ ಹೊರಭಾಗವಲ್ಲದೇ ಗೃಹಕೃತ್ಯದ ಎಲ್ಲ ಉಪಕರಣಗಳನ್ನೊಳಗೊಂಡ ಒಳಭಾಗವೂ ಯೂರೋಪ್ ಮಾದರಿಯಲ್ಲಿ ಇರುತ್ತಿದ್ದಿತು. ಸ್ಥಳೀಯ ಜನರ ಮನಸ್ಸಿನಲ್ಲಿದ್ದ ವಿಭಜಿತ ಬಾಂಧವ್ಯವು ಬೇರೆ ಎಷ್ಟೋ ವಿಷಯಗಳ ಮೇಲೆ ಪ್ರಭಾವ ಬೀರಿದ್ದಂತೆ ವಾಸ್ತುಶಿಲ್ಪದ ಮೇಲೂ ಪ್ರಭಾವ ಬೀರಿತು. ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ನಿರ್ಮಾಣಗೊಂಡ ಮನೆಗಳು ಎಷ್ಟೋ ಹಳ್ಳಿ, ಪಟ್ಟಣ, ನಗರ ಪ್ರದೇಶಗಳಲ್ಲಿ ಉಳಿದುಕೊಂಡಿರುವುದು ಗಮನಾರ್ಹ. ಉದಾಹರಣೆಯಾಗಿ, ಹೂವಿನಹಡಗಲಿ ತಾಲೂಕಿನ ಹಿರೇಕೊಳಚಿ ಗ್ರಾಮದಲ್ಲಿ ಪಿ. ವಿರುಪನಗೌಡ S/o ಕೊಟ್ರಗೌಡ ಅವರ ಮನೆ ಮತ್ತು ಹಗರಿಬೊಮ್ಮನಹಳ್ಳಿ ತಾಲೂಕಿನ ಬನ್ನಿಕಲ್ಲು ಗ್ರಾಮದಲ್ಲಿ ಶಿವಯೋಗಿ S/o ಮಲ್ಲಿಕಾರ್ಜುನಪ್ಪ ಅವರ ಮನೆ ಇತ್ಯಾದಿ.

ಗ್ರೀಸ್ ಜಗತ್ತಿಗೆ ನೀಡಿದ ಅತ್ಯಂತ ವಿಶಿಷ್ಟವೆನಿಸಿದ ತನ್ನ ಮೂರು ಕೊಡುಗೆಗಳನ್ನು ನೀಡಿತು. 'ಒಂದು: ಮೊದಲು ಅಭಿವೃದ್ಧಿಗೊಳಿಸಿದುದು; ವಿಜ್ಞಾನ ಮತ್ತು ತತ್ತ್ವಜ್ಞಾನ. ಎರಡು: ವ್ಯಾಪಾರಕ್ಕಾಗಿ ಭೇಟಿ ನೀಡುವ ಸ್ಥಳಗಳೇ ಹೊಸ ವಿಚಾರಗಳ ಜನ್ಮಸ್ಥಳಗಳಾದವು'.[೬] ಮೂರು: ಗ್ರೀಸ್‌ನಲ್ಲಿ ಅಭಿವೃದ್ಧಿ ಹೊಂದಿದ ವಾಸ್ತುಶಿಲ್ಪದ ಮೂರು ಶೈಲಿಗಳು-ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್. ಪ್ರಾಚೀನ ಗ್ರೀಸ್‌ನಲ್ಲಿ ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಎಂಬ ಹೆಸರಿನ ಪ್ರಮುಖ ನಗರ ಹಾಗೂ ಬಂದರು ಕೇಂದ್ರಗಳಿದ್ದವು. ಈ ಪ್ರದೇಶದಲ್ಲಿ ನೆಲೆಸಿರುವ ಮತ್ತು ಗ್ರೀಕ್ ಭಾಷೆಯನ್ನಾಡುವ ಜನಾಂಗವನ್ನು ಇವೇ ಹೆಸರುಗಳಿಂದ ಕರೆಯಲಾಗುತ್ತಿತ್ತು. ಈ ಮೂರು ನಗರಗಳಿಂದ ಇತರ ರಾಷ್ಟ್ರಗಳಿಗೆ ವ್ಯಾಪಾರ ಭೂಮಾರ್ಗಗಳು

ಹಾದು ಹೋಗಿದ್ದ ಕಾರಣಕ್ಕಾಗಿ ಇಲ್ಲಿನ ಜನರು ಭೂಮಾಲಿಕರಾಗಿ, ವರ್ತಕರಾಗಿ, ಕಲಾ ಆಸಕ್ತರಾಗಿ ರಾಜಕೀಯ ಪ್ರಭುತ್ವದಲ್ಲಿ ಅಭಿವೃದ್ಧಿ ಹೊಂದಿದ್ದರು. ಕ್ರಿ.ಪೂ. ೯೦೦ರಲ್ಲಿ ಡೋರಿಯನ್ನರರಿಂದ ಸ್ಪಾರ್ಟಾ ರಾಜ್ಯ ಸ್ಥಾಪನೆಯಾಯಿತು. ಇಲ್ಲಿ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿದ ಡೋರಿಯನ್ನರು ಸೈಕ್ಲಡೀಸ್ ದ್ವೀಪಗಳಲ್ಲಿ ವಸಾಹತು ಕೋಠಿಗಳನ್ನು ಸ್ಥಾಪಿಸಿದರು. ಮೊದಲು ಗ್ರೀಸ್‌ನ ಪೂರ್ವಕ್ಕೆ ಅನಂತರ ದಕ್ಷಿಣಕ್ಕೆ ಸಾಗಿದ ಡೋರಿಯನ್ನರು ಥೇರಾ ಮತ್ತು ಕ್ರೀಟ್‌ಗಳನ್ನು ಗೆದ್ದು, ಇತರ ಗ್ರೀಸ್ ರಾಜ್ಯಗಳ ಮೇಲೆ ಆಕ್ರಮಣ ಮಾಡಿ ಸರ್ವಾಧಿಕಾರಿಗಳಾಗಿ ಆಳ್ವಿಕೆ ನಡೆಸಿದರು. ಕಾರಿಯಾ(ದ್ವೀಪ)ದ ವಾಯುವ್ಯಕ್ಕೆ ತೊಂಭತ್ತು ಮೈಲಿಗಳುದ್ದಕ್ಕೂ ಇಪ್ಪತ್ತರಿಂದ ಮೂವತ್ತು ಮೈಲಿಗಳಷ್ಟು ವಿಸ್ತಾರವಾದ ಪರ್ವತಗಳಿಂದ ಕೂಡಿದ ಕರಾವಳಿಯಿತ್ತು; ಅದನ್ನು ಹಿಂದೆ ಅಯೋನಿಯ ಎಂದು ಕರೆಯುತ್ತಿದ್ದರು. 'ಇಡೀ ಜಗತ್ತಿನಲ್ಲಿಯೇ ಇಲ್ಲಿನದು ಅತ್ಯಂತ ಸೊಗಸಾದ ಗಾಳಿ ಮತ್ತು ಹವಾಮಾನ'[೭] ಎಂದು ಹೆರೋಡೊಟಸ್ ಹೇಳಿದ್ದ. ಇಲ್ಲಿನ ಬಹುಪಾಲು ನಗರಗಳು ನದಿಗಳ ಮುಖಜಭೂಮಿಯಲ್ಲಿದ್ದವು; ಅಥವಾ ಭೂ ಪ್ರದೇಶದಿಂದ ಎಲ್ಲಿಗೆ ಬೇಕಾದರೂ ಸಮುದ್ರದ ಮೇಲೆ ರಫ್ತು ಮಾಡಲು ಅನುಕೂಲಕರವಾದ ಮೆಡಿಟರೇನಿಯನ್‌ನ ಬಂದರುಗಳಿಗೆ ಹೋಗುವ ರಸ್ತೆಗಳಿದ್ದವು. ಈ ಮಾರ್ಗದ ಮೂಲಕ ಐಯೋನಿಯನ್ನರು ಸುಮಾರು ಕ್ರಿ.ಪೂ. ೧೦೦೦ರಲ್ಲಿ ಆ್ಯಟಿಕದಿಂದ ಬಂದು ಈ ಕರಾವಳಿ ಪ್ರದೇಶದಲ್ಲಿ ನೆಲೆಸಿರುವ ಜನರನ್ನು ಐಯೋನಿಯನ್ನರು ಎಂದು ಕರೆದರು. ಐಯೋನಿಯನ್ ವರ್ತಕರು ಈಜಿಪ್ಟ್, ಇಟಲಿ, ಪ್ರೊಪೊಟಿಸ್ ಮತ್ತು ಯೂಕ್ಸೀನ್‌ಗಳಲ್ಲಿ ತಮ್ಮ ವ್ಯಾಪಾರೀ ವಸಾಹತುಗಳನ್ನು ಸ್ಥಾಪಿಸಿಕೊಂಡರು. ಐಯೋನಿಯನ್ನರು ಸ್ಥಾಪಿಸಿಕೊಂಡಿದ್ದ ವಸಾಹತು ನೆಲೆಗಳಲ್ಲಿ ತಮ್ಮದೇ ಆದ ಸಾಂಸ್ಕೃತಿಕ ಚಹರೆಗಳನ್ನು ಹರಡಿದರು.

ಭೌಗೋಳಿಕ ಮತ್ತು ಆರ್ಥಿಕ ಮುನ್ಸೂಚನೆಗಳಿಂದ ಗ್ರೀಸ್‌ನಲ್ಲಿ ಅತ್ಯಂತ ಶ್ರೀಮಂತವೂ ಮತ್ತು ಸುಸಂಸ್ಕೃತವೂ ಆಗಬೇಕಿದ್ದ ನಗರವೊಂದಿದೆ. ಏಕೆಂದರೆ, ಭೂ ಸಂಧಿಯ ಮೇಲಿರುವ "ಕಾರಿಂಥ್" ಅಸೂಯೆ ಪಡುವಂತಹ ಸ್ಥಾನ ಹೊಂದಿತ್ತು. ಅದು ಫೆಲೊಪೊನೀಸಸ್ ಮೇಲೆ ಭೂಮಾರ್ಗಕ್ಕೆ ಬಾಗಿಲಿನಂತಿತ್ತು. ಉತ್ತರದ ಮತ್ತು ದಕ್ಷಿಣದ ಗ್ರೀಸ್‌ಗಳ ನಡುವೆ ಭೂಮಾರ್ಗದ ವ್ಯಾಪಾರಕ್ಕೆ ಅದು ನೆರವಾಗಲೂಬಹುದಿತ್ತು ಮತ್ತು ಅದನ್ನು ಕಿತ್ತುಕೊಳ್ಳಲೂಬಹುದಿತ್ತು; ಅದು "ಸೆರೋನಿಕ್" ಮತ್ತು "ಕಾರಿಂಥಿಯನ್" ಕೊಲ್ಲಿ ಈ ಎರಡರ ಮೇಲೂ ಬಂದರುಗಳು ಮತ್ತು ನೌಕಾಯಾನವನ್ನು ಹೊಂದಿತ್ತು. ಈ ಎರಡು ಸಮುದ್ರಗಳ ನಡುವೆ ಅದು ಲಾಭದಾಯಕವಾದ ಹಾದು ಹೋಗುವ(ಡಯೋಲ್ಕೋಸ್‌ಟಾಂಕಾರ್ ಚಲಿಸುವ ಮರದ ಕಂಬಿಗಳನ್ನು ನಿರ್ಮಿಸಿತು. ಸೆರೋನಿಕ್ ಮತ್ತು ಕಾರಿಂಥಿಯನ್ ಸಮುದ್ರ ತೀರದಲ್ಲಿದ್ದ ಜನಾಂಗವನ್ನು ಕಾರಿಂಥಿಯನ್ನರು ಎಂದು ಕರೆದರು. ಗ್ರೀಸ್‌ನ ಪ್ರಸಿದ್ಧ ಅರಸ ಸಿಪ್ಸೆಲಸ್‌ನ ಮಗ ಪೆರಿಯಾಂಡರ್. ಈತ ಗ್ರೀಕ್ ಇತಿಹಾಸದಲ್ಲಿ ಅತ್ಯಂತ ಸುದೀರ್ಘವಾದ(೬೨೫-೫೮೫) ನಿರಂಕುಶಾಧಿಕಾರದಲ್ಲಿ ವ್ಯವಸ್ಥೆ ಮತ್ತು ಶಿಸ್ತನ್ನು ನೆಲೆಗೊಳಿಸಿದ, ಶೋಷಣೆಯನ್ನು ತಡೆಗಟ್ಟಿದ, ವ್ಯವಹಾರಕ್ಕೆ ಪ್ರೋತ್ಸಾಹ ನೀಡಿದ.

ಸಾಹಿತ್ಯ ಮತ್ತು ಕಲೆಗೆ ಪೋಷಣೆ ನೀಡಿದ ಮತ್ತು ಸ್ವಲ್ಪ ಸಮಯದವರೆಗೆ ಕಾರಿಂಥಿಯನ್ನು ಗ್ರೀಸ್‌ನ ಅಗ್ರಗಣ್ಯನಗರವನ್ನಾಗಿ ಮಾಡಿದ. ಹೀಗೆ ನಗರಗಳು ಅಭಿವೃದ್ಧಿ ಹೊಂದಿ, ಇತರ ರಾಷ್ಟ್ರಗಳೊಡನೆ ಸಂಪರ್ಕ ಬೆಳೆಸಿದವು.

ಗ್ರೀಕರು ತಮ್ಮ ಭವ್ಯ ಕಟ್ಟಡಗಳ ಮತ್ತು ದೇಗುಲಗಳ ನಿರ್ಮಾಣಕ್ಕೆ ಮೂರು ರೀತಿಯ ಆಧಾರ ಸ್ತಂಭಗಳನ್ನು ವಿನ್ಯಾಸಗೊಳಿಸಿದರು. ಡೋರಿಕ್, ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಗಳು. ದೇವಸ್ಥಾನದ ಒಳಾವರಣವು ದೇವತೆಗೆ ಮತ್ತು ಅವನ ಕೈಂಕರ್ಯ ಮಾಡುವವರಿಗೆ ಮೀಸಲಾಗಿದ್ದರಿಂದ ಮತ್ತು ಆರಾಧನೆಯನ್ನು ಹೊರಗಡೆ ಮಾಡುತ್ತಿದ್ದುದರಿಂದ, ಈ ಮೂರು ಶೈಲಿಗಳು ಹೊರಾವಣವನ್ನು ಪರಿಣಾಮಕಾರಿಯಾಗಿ ಸುಂದರವಾಗಿರುವಂತೆ ಮಾಡಲು ತಮ್ಮನ್ನು ಮುಡಿಪಾಗಿಟ್ಟವು. ಗ್ರೀಕ್ ವಾಸ್ತುಶಿಲ್ಪವು ಸ್ತಂಭವನ್ನು ಸೌಂದರ್ಯದ ಒಂದು ಅಂಶವಾಗಿ ಅಷ್ಟೇ ಅಲ್ಲದೆ ರಚನೆಯ ಆಧಾರವಾಗಿಯೂ ಅಭಿವೃದ್ಧಿಪಡಿಸುವ ಮೂಲಕ ತನ್ನ ಪ್ರತ್ಯೇಕತೆಯನ್ನು ಗುರುತಿಸಿಕೊಂಡಿತು. ಬಾಹ್ಯ ಸ್ತಂಭರಾಜಿಯ ಮುಖ್ಯ ಕಾರ್ಯಭಾರವೆಂದರೆ ಮಂಜೂರನ್ನು ಎತ್ತಿಹಿಡಿಯುವುದು ಮತ್ತು ಗರ್ಭಗುಡಿಯ ಗೋಡೆಗಳಿಗೆ ಇಪ್ಪಾರು ಚಾವಣಿಯ ಹೊರ ಒತ್ತರವನ್ನು ಕಡಿಮೆ ಮಾಡುವುದು. ಸ್ತಂಭಗಳ ಮೇಲೆ ಸ್ತಂಭದ ತಲೆಕಟ್ಟು ಏರುತ್ತದೆ. ಅಂದರೆ ಸೌಧದ ಮೇಲ್ಕಟ್ಟಡ, ಇಲ್ಲೂ ಕೂಡ, ಆಧಾರ ಅಂಶಗಳಲ್ಲಿರುವಂತೆ ಗ್ರೀಕ್ ವಾಸ್ತುಶಿಲ್ಪವು ಸ್ಪಷ್ಟವಾದ ಪ್ರತ್ಯೇಕತೆಯನ್ನು ಗುರುತಿಸಿಕೊಂಡಿದ್ದರೂ ಅಂಗಗಳ ಕೀಲು ಜೋಡಣೆಯನ್ನು ಉಳಿಸಿಕೊಂಡಿದೆ. ಡೋರಿಕ್ ಮತ್ತು ಐಯೋನಿಕ್ ಶೈಲಿಗಳು ಕ್ರಿ.ಪೂ. ಆರನೆಯ ಶತಮಾನದಲ್ಲಿ ಮಹೋನ್ನತಿಯನ್ನು, ಕಾರಿಂಥಿಯನ್ ಐದನೆಯ ಶತಮಾನದಲ್ಲಿ ಪರಿಪೂರ್ಣತೆಯನ್ನು ಸಾಧಿಸಿದವು.

### ೩.೨. ಐರೋಪ್ಯ ವಾಸ್ತುಶೈಲಿಗಳು ಹಾಗೂ ಲಕ್ಷಣಗಳು

### ಡೋರಿಕ್ ಶೈಲಿಯ ಲಕ್ಷಣಗಳು

೧. ಡೋರಿಕ್ ಮಾದರಿಯ ಸ್ತಂಭವು ಗ್ರೀಕ್ ವಾಸ್ತುಶಿಲ್ಪದ ಮೂರು ವಿಧದ ಸ್ತಂಭಗಳಲ್ಲಿ ಇದು ಒಂದಾಗಿದೆ. ಇದು ತುಂಬಾ ಪುರಾತನವಾದ ವಿಧ. ಇದು ಮೊದಲಿಗೆ ಪಶ್ಚಿಮ ಗ್ರೀಸ್‌ನಲ್ಲಿ ಹುಟ್ಟಿತು. ಡೋರಿಯನ್ನರು ಏಜಿಯನ್ ಭೂಮಿಯನ್ನು ಆಕ್ರಮಿಸಿದ ಕಾರಣ ಈ ಶೈಲಿಯು ಹಂತ ಹಂತವಾಗಿ ಬೆಳವಣಿಗೆ ಹೊಂದಿ, ದಕ್ಷಿಣ ಇಟಲಿ ವಸಾಹತುಗಳಲ್ಲಿ ಮತ್ತು ಸಿಸಲಿಯಲ್ಲಿ ಇದರ ಪ್ರಭಾವ ಹೆಚ್ಚಾಯಿತು.

೨. ಡೋರಿಕ್ ಶೈಲಿಯು ಮೊದಲು ಗ್ರೀಸ್‌ನಲ್ಲಿ ಬಳಕೆಯಾಗಿ, ನಂತರ ಇಟಲಿಯ ಗ್ರೀಕ್ ವಸಾಹತುಗಳಿಗೆ ಹರಡಿಕೊಂಡಿತು.

೩. ಈ ಶೈಲಿಯ ಸ್ತಂಭಗಳನ್ನು ಯಾವುದೇ ಅಲಂಕಾರಿಕ ಕೆತ್ತನೆಯಿಲ್ಲದೆ ಬಹಳ ಸರಳವಾಗಿ ಕೊರೆಯಲಾಗಿರುತ್ತದೆ. ಪ್ರತಿ ಸ್ತಂಭಗಳಲ್ಲಿ(ವೃತ್ತವಾಗಿದ್ದ) ೧೬ ಭಾಗವಾಗಿ ಸಾಲು ಗೆರೆಗಳನ್ನು ಕೊರೆಯಲಾಗಿದೆ. ಕಾಲ ಬದಲಾದಂತೆ ಅವುಗಳ ಸಂಖ್ಯೆಯು ಹೆಚ್ಚುತ್ತಾ ಹೋದವು.

೪. ಈ ಶೈಲಿಯಲ್ಲಿರುವ ಕಂಬಗಳ ಮೇಲ್ಭಾಗದಲ್ಲಿರುವ ಬೋಧಿಗೆಯು ಯಾವುದೇ ಅಲಂಕಾರವಿಲ್ಲದೆ ಬಹಳ ಸರಳವಾಗಿರುತ್ತವೆ.

೫. ಸ್ತಂಭಗಳ ಮೇಲೆ ಫಲಕಗಳನ್ನು ಕಾಣಬಹುದು.

೬. ಡೋರಿಕ್ ಕಂಬಗಳು ಮೊದಲು ಮರದ ರಚನೆಯನ್ನು ಅನುಸರಿಸಿ, ನಂತರ ಕಲ್ಲು, ಇಟ್ಟಿಗೆ, ಸುಣ್ಣದ ಕಲ್ಲಿನಿಂದ ಕಟ್ಟಲಾಗಿದೆ. ಇವು ಕಣ್ಣಿಗೆ ಲಾಲಿತ್ಯಪೂರ್ಣವಾಗಿ ಕಾಣುವುದಿಲ್ಲ. ಆದರೆ, ಕಂಬಗಳು ದೃಢತೆ ಮತ್ತು ಸಾಮರ್ಥ್ಯದಲ್ಲಿ ಭಾವಶೂನ್ಯವಾಗಿ ಮಗ್ನವಾಗಿರುವಂತೆ ತೋರುತ್ತವೆ.

೭. ದೇವಾಲಯಗಳ ಒಳಗೆ ಮತ್ತು ಹೊರಗೆ ಸ್ತಂಭಗಳ ಬಳಕೆ, ವೃತ್ತಾಕಾರವಾದ ಊರು ಕಂಬ ಮತ್ತು ಸರಳವಾದ ಚಚ್ಚೌಕನೆಯ ಕಪೋತ(ಸ್ತಂಭಾಗ್ರ), ಕಂಬದ ತಲೆಕಟ್ಟಿನ ಕಾರ್ನೀಸಿನ ಕೆಳಭಾಗದ ಚೌಕಫಲಕ ಮತ್ತು ತೋಡುಗಳ ನಡುವಣ ಚೌಕನೆಯ ಭಾಗ (Triglyphs and Metopes) ಮುಂತಾದ ಎಲ್ಲಾ ಡೋರಿಕ್ ಶೈಲಿಯ ಲಕ್ಷಣಗಳನ್ನು ಗ್ರೀಕ್ ಕಲೆಯ ಶ್ರೇಷ್ಠ ಸಾಧನೆಗಳಲ್ಲಿ ಸಂರಕ್ಷಿಸಲಾಗಿತ್ತು.

೮. ಬ್ರ್ಯಾಮೆಂಟ್ ಎಂಬ ಶಿಲ್ಪಿಯು ಪುರಾತನ ಗ್ರೀಕ್ ಸಂಪ್ರದಾಯಿಕ ಶೈಲಿಯಲ್ಲಿ ಕೊರೆದಿರುವ ಕಂಬಗಳ ಬದಲಾಗಿ, ಸರಳವಾದ ಕಂಬಗಳ ರಚನೆ ಹಾಗೂ ಇದಕ್ಕೆ ಅಧಿಷ್ಠಾನವನ್ನು ಸಹ ಕೂಡಿಸಿದನು. ಇದನ್ನು ಪುರಾತನ ಡೋರಿಕ್ ವಾಸ್ತುಶಿಲ್ಪಿಗಳು ಬಳಸಿರಲಿಲ್ಲ.

೯. ಗ್ರೀಸ್‌ನಲ್ಲಿರುವ ಪಾರ್ಥನಾನ್ ದೇವಾಲಯವನ್ನು ಕ್ರಿ.ಪೂ. ೪೪೭ರಲ್ಲಿ ಡೋರಿಕ್ ಶೈಲಿಯಲ್ಲಿ ನಿರ್ಮಿಸಲಾಗಿದೆ. ಅಥೆನ್ಸಿನಲ್ಲಿರುವ ಈ ದೇವಾಲಯವನ್ನು ಗ್ರೀಸಿನ ಪ್ರಖ್ಯಾತ ವಾಸ್ತುಶಿಲ್ಪಿಗಳು ಮತ್ತು ಶಿಲ್ಪಕಲಾ ತಜ್ಞರಾದ ಫಿಡಿಯಾಸ್ ಮತ್ತು ಇಕ್ಟಿನಸ್ ಅವರಿಂದ ನಿರ್ಮಾಣವಾದ ಪಾರ್ಥಿನಾನ್ ದೇವಾಲಯವು ಗ್ರೀಕರ ವಾಸ್ತುಶಿಲ್ಪ ಕೃತಿಗಳಲ್ಲಿ ಅತಿ ಶ್ರೇಷ್ಠ ಕಲಾಕೃತಿಯಾಗಿದೆ.

**ಐಯೋನಿಕ್ ಶೈಲಿಯ ಲಕ್ಷಣಗಳು**

೧. ಐಯೋನಿಕ್ ಶೈಲಿಯು ಪೂರ್ವಗ್ರೀಸ್, ಪಶ್ಚಿಮ ತೀರದ ಟರ್ಕಿಯ ಐಯೋನಿಯಾದಲ್ಲಿ ಹಾಗೂ ಏಜಿಯನ್ ದ್ವೀಪಗಳಲ್ಲಿ ಮೊದಲು ಬಳಸಲಾಯಿತು.

೨. ಗ್ರೀಸ್‌ನ ಎರಡನೆಯ ಶೈಲಿಯಾದ ಐಯೋನಿಕ್ ಶೈಲಿಯನ್ನು ಅತಿ ಸುಲಭವಾಗಿ ಗುರುತಿಸಬಹುದು. ಸ್ತಂಭಗಳ ಮೇಲಿರುವ ತೊಲೆ ಅಥವಾ ಬೋಧಿಗೆಯು ಮುಂಚಾಚಿದ ಫಲಕಗಳಿಂದ ಕೂಡಿದ್ದಲ್ಲದೆ, ಸರಳವಾದ ಅಲಂಕಾರಿಕ ಕೆತ್ತನೆಯನ್ನು ಒಳಗೊಂಡಿರುತ್ತದೆ.

೩. ಐಯೋನಿಕ್ ಸ್ತಂಭಗಳ ಬೋಧಿಗೆಯು ಸುರುಳಿ ಸುರುಳಿಯಾಕಾರದ ವೈಶಿಷ್ಟ್ಯ ಪಡೆದಿದ್ದರೂ, ಸಾಕಷ್ಟು ಬದಲಾವಣೆಯನ್ನು ಹೊಂದಿವೆ. ಕಾರಣ ಸ್ಥಳದಿಂದ ಸ್ಥಳಕ್ಕೆ ಕಟ್ಟಡಗಳ ವಾಸ್ತುಶಿಲ್ಪದ ವಿವರಗಳು ಬೇರೆಯೇ ಆಗಿವೆ.

೪. ಈ ಶೈಲಿಯ ಪ್ರಮುಖ ಗುಣಲಕ್ಷಣವೆಂದರೆ, ಬೋಧಿಗೆಯ ಮೇಲೆ ಸುರುಳಿಯಾಕಾರದ ಕೆತ್ತನೆಯನ್ನು ಒಳಗೊಂಡಿದ್ದು, ತೆಲುವಾದ ಸ್ತಂಭಗಳನ್ನು ಅಧಿಷ್ಠಾನದ ಮೇಲೆ ಕೂಡಿಸಲಾಗಿದೆ.

೫. ತ್ರಿಪಟ್ಟ ಹಾಗೂ ಮೆಟೋಪ್ಸ್ ಅನ್ನು ಸ್ತಂಭಗಳಲ್ಲಿರುವ ಫಲಕದಿಂದ ಬೇರ್ಪಡಿಸಲಾಗಿದೆ.

೬. ಆರನೆಯ ಶತಮಾನದಲ್ಲಿ ಗ್ರೀಕರ ಮೊದಲ "ಐಯೋನಿಕ್ ಶೈಲಿಯ ದೇವಾಲಯಗಳು 'ಡೋರಿಕ್ ಶೈಲಿಯ' ದೇವಾಲಯಗಳಿಗಿಂತ ಹೆಚ್ಚು ಉತ್ತಮವಾಗಿವೆ. ಉದಾಹರಣೆಯಾಗಿ, ಎಫಿಸಸ್‌ನಲ್ಲಿರುವ ಆರ್ಟಿಮಿಸ್ ದೇವಾಲಯ, ಪಾಮೋಸ್‌ನಲ್ಲಿರುವ ಹೀರಾ ದೇವಾಲಯ ಮತ್ತು ಮೈಲೀಟಸ್ ಬಳಿಯ ಬ್ರಾನ್‌ಚಿಡೆ ದೇವಸ್ಥಾನಗಳು.

೭. ಪ್ರಥಮ ಐಯೋನಿಕ್ ಸುರಳಿ ಕೂಡ ಒಂದು ಮರದ ತುಂಡಿನ ಮೇಲೆ ಚಿತ್ರಿಸಿದ ಪುಷ್ಪಾಲಂಕೃತ ಚಿತ್ರವಾಗಿತ್ತು ಎನ್ನುವುದು ಸುಸ್ಪಷ್ಟ. ನಂತರ ಕಾಲಘಟ್ಟದಲ್ಲಿ ಅದು ಕಲ್ಲು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟವು.

**ಕಾರಿಂಥಿಯನ್ ಶೈಲಿಯ ಲಕ್ಷಣಗಳು**

೧. ಕಾರಿಂಥಿಯನ್ ಶೈಲಿಯು ಗ್ರೀಸ್‌ನಲ್ಲಿ ಐಯೋನಿಕ್ ಶೈಲಿಯ ನಂತರದ ಕಾಲಘಟ್ಟದಲ್ಲಿ ಬೆಳವಣಿಗೆಯಾಗಿದೆ.

೨. ಈ ಶೈಲಿಯನ್ನು ಅತ್ಯಂತ ವಿರಳವಾಗಿ ಗ್ರೀಸ್‌ನಲ್ಲಿ ಬಳಸಲಾಗಿದೆ. ಆದರೆ, ಇದನ್ನು ಹೆಚ್ಚಾಗಿ ಬಳಸಿದ್ದು ರೋಮನ್ ದೇವಸ್ಥಾನಗಳಲ್ಲಿ.

೩. ಕಾರಿಂಥಿಯನ್ ಶೈಲಿಯಲ್ಲಿ ರಚನೆಗೊಂಡಿರುವ ಸ್ತಂಭಗಳ ಮೇಲಿರುವ ಬೋಧಿಗೆಯು ತುಂಬಾ ವಿಶಾಲವಾಗಿ ಹಾಗೂ ಆರ್ಯಾಂಥಸ್ ಎಲೆಗಳಿಂದ ಅಲಂಕರಿಸಲಾಗಿದೆ.

೪. ಕಾರಿಂಥಿಯನ್ ಶೈಲಿಯಲ್ಲಿ ನಿರ್ಮಾಣಗೊಂಡಿರುವ ಕಂಬಗಳು ನೀಳವಾಗಿ ಉದ್ದವಾಗಿದ್ದು, ಸೂಕ್ಷ್ಮವಾದ ಮತ್ತು ಅಲಂಕಾರಿಕ ಕೆತ್ತನೆಯಿಂದ ಕೂಡಿರುತ್ತವೆ.

೫. ಪುರಾತನ ಗ್ರೀಕ್ ವಾಸ್ತುಶಿಲ್ಪದಲ್ಲಿ ಇದು ಅತ್ಯಂತ ಅಲಂಕೃತವಾದ ಸುಂದರ ಶೈಲಿ. ಇದಕ್ಕೆ ಪ್ರಮುಖ ಉದಾಹರಣೆಯೆಂದರೆ, ಲೈಸಿಕ್ರೇಟ್ಸ್‌ನಲ್ಲಿರುವ ಕೊರ್‍ಪಾಜಿಕ್ ಸ್ಮಾರಕವು(೩೩೫ ಬಿ.ಸಿ.) ಕಾರಿಂಥಿಯನ್ ಶೈಲಿಯಲ್ಲಿದೆ. ಅಥೆನ್ಸ್‌ನ ರಾಜ ಹ್ಯಾಡ್ರಿಯನ್‌ನು ಕ್ರಿ.ಪೂ. ೩ನೆಯ ಶತಮಾನದಲ್ಲಿ ಅಥೆನ್ಸ್‌ನಲ್ಲಿ 'ಜಿಯಸ್' ಮಂದಿರವನ್ನು ಕಾರಿಂಥಿಯನ್ ಶೈಲಿಯಲ್ಲಿ ಕಟ್ಟಿಸಿದ್ದನು. ಇದೊಂದು ಪ್ರಮುಖವಾದ ಕಾರಿಂಥಿಯನ್ ದೇವಾಲಯಗಳಲ್ಲೊಂದು.

**ಗಾಥಿಕ್ ಶೈಲಿ**

ಯುರೋಪಿನ ಮಧ್ಯಕಾಲೀನ ಯುಗದಲ್ಲಿ ಉದಯಿಸಿದ ವಾಸ್ತುಶೈಲಿಗಳಲ್ಲಿ ಗಾಥಿಕ್ ಕಲೆಯು ಒಂದು. ಈ ವಾಸ್ತುಶೈಲಿಯು ಮೊಟ್ಟಮೊದಲು .ಫ್ರಾನ್ಸ್‌ನಲ್ಲಿ ಜನ್ಮತಾಳಿತು. ಕಾರಣ, ಕ್ರಿ.ಶ. ೧೨ನೆಯ ಶತಮಾನದಲ್ಲಿ ಫ್ರಾನ್ಸ್ ಅತ್ಯಂತ ಶ್ರೀಮಂತ ಹಾಗೂ ಅತ್ಯಂತ ಮುಂದುವರಿದ

ಪಾಶ್ಚಿಮಾತ್ಯ ರಾಷ್ಟ್ರವಾಗಿತ್ತು. ಎಲ್ಲರಿಗಿಂತ ಮಿಗಿಲಾಗಿ ಫ್ರಾನ್ಸ್ ಧರ್ಮ ಯುದ್ಧಗಳಿಗೆ ತನ್ನ ಜನಬಲವನ್ನು, ಧನಬಲವನ್ನು ತೊಡಗಿಸಿ, ಅವರುಗಳ ಸಾಂಸ್ಕೃತಿಕ ಉದ್ದೀಪನದಿಂದ ತಾನು ಲಾಭ ಪಡೆಯಿತು; ಅದು ಯೂರೋಪವನ್ನು ಶಿಕ್ಷಣದಲ್ಲಿ, ಸಾಹಿತ್ಯದಲ್ಲಿ ಮತ್ತು ತತ್ತ್ವಜ್ಞಾನದಲ್ಲಿ ಮುನ್ನಡೆಸಿತು. ಫ್ರಾನ್ಸ್ ಶಿಲ್ಪಿಗಳು ಬೈಜಾಂಟಿಯಮ್‌ನ ಈ ಭಾಗದಲ್ಲೇ ಅತ್ಯಂತ ಶ್ರೇಷ್ಠರೆನ್ನುವ ಮಾನ್ಯತೆ ಗಳಿಸಿದರು. 'ಗಾಥಿಕ್ ವಾಸ್ತುಶಿಲ್ಪ ಕಲೆಯ ಮೊದಲ ಶ್ರೇಷ್ಠ ಕೃತಿ ಎಂದರೆ ಪ್ಯಾರಿಸ್‌ನ ಉಪನಗರದಲ್ಲಿರುವ ಸಂತ ಡೇನಿಸ್ ಹೆಸರಿನ ಭವ್ಯವಾದ ಆ್ಯಬಿ ಚರ್ಚ್'.[೮] ಈ ದೇವಾಲಯವನ್ನು ಗಾಥಿಕ್ ಶೈಲಿಯಲ್ಲಿ ನಿರ್ಮಿಸಿದ ಕೀರ್ತಿ ಫ್ರಾನ್ಸ್‌ನ ರಾಜ(ಲೂಯಿಸ್-VI) ಸಲಹಾ ಮಂಡಳಿಯ ಪ್ರಮುಖ ಸದಸ್ಯನಾಗಿದ್ದ ಸುಝುರ್ ಅವರಿಗೆ ಸಲ್ಲುತ್ತದೆ. ಕಾರಣ, 'ಕ್ರಿ.ಶ. ೧೪೪೦-೪೪ರ ಕಾಲಾವಧಿಯಲ್ಲಿ ಸೆಂಟ್‌ಡೇನಿಸ್ ಚರ್ಚ್‌ನ ಪುನರ್‌ನಿರ್ಮಾಣ ಕಾರ್ಯಕ್ಕೆ ಕೈಹಾಕಿ, ವಾಸ್ತುವಿನ ಪ್ರದಕ್ಷಣ ಪಥ, ಪ್ರಾರ್ಥನಾ ಮಂದಿರದ ಜಗಲಿಯನ್ನು, ಬೆಳಕಿನ ಕಿಂಡಿಗಳು, ಮೇಲಂತಸ್ತಿನ ಭಾವಣಿ ಮತ್ತು ಕಮಾನುಗಳನ್ನು ನವೀಕರಿಸಿ, ಎಲ್ಲರೂ ನೋಡಲು ಅನುಮಾಡಿ ಕೊಟ್ಟಿರುವುದೇ ಸುಝುರ್‌ನ ಸಾಧನೆ. ಈತನು ಜರ್ಮನ್ ರಾಜ್ಯದೊಂದಿಗೆ ಹೋರಾಡುವ ಪರಿಯಲ್ಲಿ ಪ್ಯಾಪಸಿ (Papac) ತಂತ್ರವನ್ನು ಅನುಸರಿಸಿ, ಚರ್ಚ್‌ನ್ನು ಆಡಳಿತ ಯಂತ್ರವನ್ನಾಗಿ ಪರಿವರ್ತಿಸಿಕೊಂಡ'.[೯] ಇದನ್ನೇ ಧಾರ್ಮಿಕ ರಾಜಕೀಯ ಎಂದದ್ದು. ಧಾರ್ಮಿಕ, ಆಧ್ಯಾತ್ಮಿಕ, ಮಾನಸಿಕ ಮತ್ತು ಬೌದ್ಧಿಕ ಸ್ಥರಗಳನ್ನು ರಾಜಕೀಯದಲ್ಲಿ ಅಳವಡಿಸಿಕೊಂಡು, ಧಾರ್ಮಿಕ ಆಡಳಿತವೇ ಶ್ರೇಷ್ಠ ಆಡಳಿತವೆಂದು ವೈಭವೀಕರಿಸಿ, ಆಡಳಿತಕ್ಕೆ ದ್ವಿಪ್ರತಿಷ್ಠೆಯನ್ನು ನೀಡಿದ ಯತ್ನವಿದೆ. ಚರ್ಚ್ ಧಾರ್ಮಿಕತೆಯಿಂದ ರಾಷ್ಟ್ರೀಯತೆಯ ಭಾವನೆಯನ್ನು ಪಡೆಯು ವಂತಾಯಿತು. ಚರ್ಚ್ ಯಾತ್ರಾರ್ಥಿ ಸ್ಥಳವು ಆಯಿತು.

ಫ್ರಾನ್ಸ್ ಪ್ರಾಂತದಿಂದ ಪ್ರಾರಂಭವಾದ ಗಾಥಿಕ್ ವಾಸ್ತುಶಿಲ್ಪವು ಜರ್ಮನಿ, ಇಟಲಿ, ಇಂಗ್ಲೆಂಡ್, ಉತ್ತರದ ಆಲ್ಪ್ಸ್ ಪ್ರದೇಶಗಳಿಗೂ ಹರಡಿಕೊಂಡಿರುವುದರಿಂದ ಇಲಿಯು ಗಾಥಿಕ್ ವಾಸ್ತುಶೈಲಿಯ ಪುನರೋತ್ಥಾನದ ಕೇಂದ್ರವಾಗಿ ಕಾಣುತ್ತದೆ. ಏಕೆಂದರೆ, ಕ್ರಿ.ಶ. ೧೫ ಮತ್ತು ೧೬ನೆಯ ಶತಮಾನದಲ್ಲಿ ಇಟಲಿಯಲ್ಲಾದ ಪುನರುಜ್ಜೀವನದ ಪ್ರಭಾವದಿಂದ ಈ ವಾಸ್ತುಶೈಲಿಯು ಬೆಳವಣಿಗೆಯನ್ನು ಹೊಂದಿತು. ಇಟಲಿಯ ಪ್ರಮುಖ ವ್ಯಾಪಾರೀ ನಗರಗಳಾದ ಈಪ್ರೆ, ಬ್ರೂಜಿಜ್ ಮತ್ತು ಘೆಂಟ್, ತಗ್ಗಿನ ಪ್ರದೇಶಗಳಿಗಿಂತಲೂ ಕೈಗಾರಿಕೆ ಮತ್ತು ವ್ಯಾಪಾರದಲ್ಲಿ ಶ್ರೀಮಂತವಾಗಿದ್ದ ಉತ್ತರ ಮತ್ತು ಮಧ್ಯ ಇಟಲಿಯಲ್ಲಿ ಪೌರವಾಸ್ತುಶಿಲ್ಪವು ಗಾಥಿಕ್ ಅಭಿವೃದ್ಧಿಯ ಮೇಲೆ ಪ್ರಧಾನವಾದ ಪಾತ್ರವನ್ನು ವಹಿಸಿತು. ನಗರಸಭೆಗಳು, ನಗರದ ಕೋಟೆಗಳು ಮತ್ತು ಹೆಬ್ಬಾಗಿಲುಗಳು ಮತ್ತು ಗೋಪುರಗಳು, ಅರಮನೆಗಳು ಗಾಥಿಕ್ ಸ್ವರೂಪ ಅಥವಾ ಅಲಂಕರಣವನ್ನು ಅಳವಡಿಸಿಕೊಂಡಿದ್ದವು.[೧೦] ಮಧ್ಯಯುಗೀನ ಆತ್ಮಕ್ಕೆ ಗಾಥಿಕ್ ವಾಸ್ತುಶಿಲ್ಪವೇ ಶಿಖರಪ್ರಾಯದ ಮಹಾಸಾಧನೆ. ಕೆಚ್ಚೆದೆಯ ಅಭಯದೊಡನೆ ಯಾವ ವಾಸ್ತುಶಿಲ್ಪಿಗಳು ಕಂಬಗಳ ಮೇಲೆ ಕಮಾನಿನ ಭಾವಣಿಗಳನ್ನು ಏರಿಸುತ್ತಿದ್ದರೂ ಅವರು ಆ ಕೆಲಯ ವಿಜ್ಞಾನವನ್ನು ಆಳವಾದ

ಪರಿಪೂರ್ಣತಾವಾದಿಗಳಂತೆ ಗ್ರಹಿಸಿ ಯಾವ ಸೂಮ ತತ್ತ್ವಜ್ಞಾನಿಯೂ ತೋರದ ವೈಶಿಷ್ಟ್ಯ ಹಾಗೂ ಸಮಗ್ರತೆಯನ್ನು ಮರೆಯುತ್ತಿದ್ದರು.[೧೧] ಆದರೆ, ಫ್ರಾನ್ಸ್‌ನಲ್ಲಿ ಅತ್ಯಾಡಂಬರದಲ್ಲೂ ಉಳಿದು ಕೊನೆಗೆ ಗಾಥಿಕ್ ಸ್ವರೂಪಕ್ಕೆ ಉತ್ಪ್ರೇಕ್ಷೆ ಹಾಗೂ ಅವನತಿಯನ್ನು ಬಿಟ್ಟು ಯಾವ ದಾರಿಯೂ ಉಳಿಯಲಿಲ್ಲ. ಯೂರೋಪಿನ ರಾಷ್ಟ್ರಗಳ ನಡುವೆ ನಡೆದ ಧರ್ಮ ಯುದ್ಧಗಳ ಅಂತ್ಯ, ಧರ್ಮ ಶ್ರದ್ಧೆಯ ಅವನತಿ ಮತ್ತು ರಾಜಪ್ರತಿನಿಧಿಗಳಲ್ಲಿ ಮೇರಿಗಿಂತ ಹಣದ ಮೇಲಿನ ಆಸೆ, ಚರ್ಚ್‌ಗಿಂತ ರಾಜ್ಯ ರಾಜಕಾರಣಕ್ಕೆ ಪ್ರಾಶಸ್ತ್ಯ, ಇವೆಲ್ಲವೂ ಸೇರಿ, ಗಾಥಿಕ್ ಯುಗದ ಚೈತನ್ಯದ ಬೆನ್ನು ಮೂಳೆಯನ್ನು ಮುರಿಯಿತು. ೯ನೆಯ ಲೂಯಿಯ ಕಾಲದಲ್ಲಿ ಪಾದ್ರಿಗಳ ಮೇಲೆ ಹಾಕಿದ ತೆರಿಗೆಯೂ ಸಹ ಕ್ಯಾಥೆಡ್ರಲ್‌ಗಳ ಭಂಡಾರವನ್ನು ಖಾಲಿ ಮಾಡಿತು. ಈ ಧಾರ್ಮಿಕ ಮಂದಿರಗಳಿಗೆ ಬೆನ್ನೆಲುಬಾಗಿ ನಿಂತಿದ್ದ ವ್ಯಾಪಾರಿ ವರ್ಗಗಳೂ ಸಹ ಅವರ ಸ್ವಾತಂತ್ರ್ಯ ಧನಶಕ್ತಿ ಹಾಗೂ ಸಾಮಾಜಿಕ ಘನತೆಯನ್ನು ಕಳೆದುಕೊಂಡರು. ಉಗ್ರಪ್ಲೇಗು ಹಾಗೂ ೧೦೦ ವರ್ಷಗಳ ಯುದ್ಧ ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳ ಶಕ್ತಿಯನ್ನೆಲ್ಲ ಹೀರಿ ಹಾಕಿತು.[೧೨] ಅಂತಹ ಕಾಲದಲ್ಲಿ ಹೊಸ ಕಟ್ಟಡಗಳ ನಿರ್ಮಾಣದ ಕಾರ್ಯವು ಗಣನೀಯವಾಗಿ ಕುಂಠಿತವಾಯಿತು. ಮಧ್ಯಯುಗದ ಕೊನೆಯ ಹಾಗೂ ಆಧುನಿಕ ಯುಗದ ಪ್ರಾರಂಭದ ಅವಧಿಯಲ್ಲಿ ಕಂಡುಬಂದ ಎಲ್ಲಾ ಬೌದ್ಧಿಕ ಬದಲಾವಣೆಗಳಿಂದ ಮಾನವತಾವಾದಿಗಳು ಅಭಿಜಾತ ನಾಗರಿಕತೆಯನ್ನು ಪುನಃ ಕಂಡು ಹಿಡಿಯುವಿಕೆ ಮತ್ತು ಮೈಕಲ್ ಅಂಜಲೊ, ರಾಫೇಲ್ ಹಾಗೂ ಲಿಯೊನಾರ್ಡೋ-ಡ-ವಿಂಚಿ ಅವರ ಚಿತ್ರಕಲೆಯ ಪ್ರಭಾವದಿಂದ ಅಭಿಜಾತ ವಾಸ್ತುಶಿಲ್ಪದ ನವನಿರ್ಮಾಣ ಗಾಥಿಕ್ ಶೈಲಿಗೆ ಹೊಸ ಹುರುಪಿನೊಂದಿಗೆ ಒಂದು ಹೊಸ ಜನ್ಮವನ್ನು ನೀಡಿತು. ಬರೋಕ್ ಮತ್ತು ರಕೋಕೊ ಶೈಲಿಗಳ ಮೂಲಕ ಪುನರುಜ್ಜೀವನ ಕಾಲದ ವಾಸ್ತುಶಿಲ್ಪವು ೧೬ ರಿಂದ ೧೯ನೆಯ ಶತಮಾನಗಳವರೆಗೆ ಪಶ್ಚಿಮ ಯೂರೋಪಿನಲ್ಲಿ ಪ್ರಾಮುಖ್ಯವನ್ನು ಪಡೆಯಿತು.

ಗಾಥಿಕ್ ವಾಸ್ತುಕಲೆಯು ಭಾರತಕ್ಕೆ ಯೂರೋಪಿಯನ್ನರ ಆಗಮನದೊಂದಿಗೆ ಪ್ರವೇಶಿಸಿತು. 'ಪೋರ್ಚುಗೀಸರು ೧೫೧೦ರಲ್ಲಿ ಕೇರಳದ ಕೊಚ್ಚಿಯಲ್ಲಿ ಕಟ್ಟಿದ ಸೈಂಟ್ ಫ್ರಾನ್ಸಿಸ್ ಚರ್ಚ್, ಯೂರೋಪಿಯನ್ನರು ಭಾರತದಲ್ಲಿ ಕಟ್ಟಿದ ಮೊದಲ ಚರ್ಚ್'[೧೩] ಎನ್ನಲಾಗಿದೆ. ನಂತರ ಕಾಲಘಟ್ಟದಲ್ಲಿ ಗೋವಾ, ತಮಿಳುನಾಡು, ಕಲ್ಕತ್, ಆಂಧ್ರಪ್ರದೇಶ, ಮುಂಬಾಯಿ, ಕರ್ನಾಟಕ ಇತ್ಯಾದಿ ಪ್ರದೇಶಗಳಲ್ಲಿ ಕ್ರೈಸ್ತ ದೇವಾಲಯಗಳ ನಿರ್ಮಾಣ ಕಾರ್ಯವು ಪಸರಿಸಿಕೊಂಡು. ಕರ್ನಾಟಕದ ಪೂರ್ವರೋಮ್ ಎಂದೇ ಕರೆಯಲ್ಪಡುವ ಮಂಗಳೂರಿನಲ್ಲಿ ಕ್ರಿ.ಶ. ೧೬೮೦ರಲ್ಲಿ ಮಿಲಾರ್ ಮಾಯೆಚಿ ಇಗರ್ಜಿಯನ್ನು ನಿರ್ಮಿಸಲಾಗಿದೆ. ಆ ನಂತರ ದಿನಗಳಲ್ಲಿ ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಾದ, ಕೊಡಗು, ದಕ್ಷಿಣ ಕನ್ನಡ, ಧಾರವಾಡ, ಬೆಳಗಾವಿ, ಕಡಪ, ಕರ್ನೂಲು ಜಿಲ್ಲೆಗಳಲ್ಲಿ ನಿರ್ಮಾಣಕೊಂಡವು. ಕ್ರಿ.ಶ. ೧೮೧೧ರಲ್ಲಿ ಟ್ರಿನಿಟಿ ಆಫ್ ಚರ್ಚ್‌ನ್ನು ಬಳ್ಳಾರಿಯಲ್ಲಿ ಮೊದಲ ಬಾರಿಗೆ ನಿರ್ಮಿಸಲಾಯಿತು. ಈ ಶೈಲಿಯು ಕೇವಲ ಕ್ರೈಸ್ತ ದೇವಾಲಯಗಳಲ್ಲದೆ, ಶಾಲಾ ಕಟ್ಟಡಗಳಲ್ಲಿ, ರಾಜ್ಯದ ರಾಜಧಾನಿಯಲ್ಲಿ ಪ್ರಮುಖ ಆಡಳಿತ ಕಟ್ಟಡಗಳಲ್ಲಿ ಉಳಿದು ಅಂತರ್‌ರಾಷ್ಟ್ರೀಯ ಮನ್ನಣೆಯನ್ನು ಗಳಿಸಿದೆ.

**ಗಾಥಿಕ್ ಪದದ ಅರ್ಥವಿವರಣೆ :** ಗಾಥಿಕ್ ಪದಕ್ಕೆ ಅರ್ಥಕೋಶದಲ್ಲಿ ಅಶಿಕ್ಷಿತ, ಅನಾಗರಿಕ, ಬರ್‌ಬರಿ, ಒರಟಾದ ಇತ್ಯಾದಿ ವಿವರಗಳು ಇವೆ. ಇದು 'ಸಂಸ್ಕೃತ ವರ್ವರದ ಜ್ಞಾತಿ ಪದ' ಎಂದು ಕಂಡುಬರುತ್ತದೆ. ವರ್ವರ ಎಂದರೆ ಒರಟ, ಅನಕ್ಷರಸ್ಥ ಹಾಗೂ ಕೀಳು ಹುಟ್ಟಿನವನು ಎಂಬ ಅರ್ಥಕೊಡುತ್ತದೆ.

ಪ್ರಾಚೀನ ಯೂರೋಪಿನಲ್ಲಿ(ಕ್ರಿ.ಶ. ೩ನೇ ಶತಮಾನದಿಂದ ೫ನೇ ಶತಮಾನದ ಕಾಲಾವಧಿಯಲ್ಲಿ) ಜರ್ಮನಿಯ ಗುಡ್ಡಗಾಡು ಜನರನ್ನು ಬಾರ್ಬೇರಿಯನ್ನರು ಅಥವಾ ಗಾಥ್ ಜನಾಂಗ ಎಂದು ಕರೆಯುವ ವಾಡಿಕೆ ಇತ್ತು. ದಕ್ಷಿಣ ಸ್ವೀಡನ್ ಹಾಗೂ ಅದರ ಸುತ್ತಮುತ್ತ ಇದ್ದ ದ್ವೀಪಗಳನ್ನು ತಮ್ಮ ಪೂರ್ವಜರು ಇದ್ದ ಸ್ಥಳ ಎಂದು ಗಾಥ್ ದೇಶದ ಜನ ಪ್ರತಿಪಾದಿಸತೊಡಗಿದರು. ಬಹುಶಃ ಈ ಜನರು ಮೊದಲ ವಿಶ್ಚೂಲ ಎಂಬ ಸ್ಥಳದ ಮೂಲ ನಿವಾಸಿಗಳಾಗಿದ್ದರು. ಈ ಕಾರಣಕ್ಕಾಗಿಯೇ ದಕ್ಷಿಣ ವಿಶ್ಚೂಲದ ಜನರನ್ನು ವಿಸಿಗಾಥರು ಎಂದು ಕರೆಯಲಾಯಿತು. ಇವರು ಡ್ಯಾನ್ಯೂಬ್ ನದಿಯ ದಕ್ಷಿಣಕ್ಕೆ ಪಸರಿಸಿದರು. ನೀಸ್ಟರ್ ಆಗೂ ಡಾನ್ ನದಿಗಳ ಮಧ್ಯೆ ಇವರು ಆಸ್ಟ್ರೋಗಾತರು ಎಂದು ನೆಲೆಸಿದರು. ವಿಶ್ಚೂಲ, ಡ್ಯಾನ್ಯೂಬ್ ಹಾಗೂ ರೈನ್ ನದಿಗಳಿಂದ ಆವೃತವಾಗಿದ್ದ ಯೂರೋಪಿನ ಹೃದಯ ಭಾಗವನ್ನು ಈ ಅಲೆಮಾರಿ ಜನರು ಆಕ್ರಮಿಸಿಕೊಂಡಿದ್ದರು. ಇವರಿಗೆ ನಾಗರಿಕತೆಯ ಸೋಂಕೇ ಇರಲಿಲ್ಲ. ಆದರೆ, ನಾಗರಿಕತೆಯಿಂದ ಆಗುತ್ತಿದ್ದ ಒಳಿತುಗಳನ್ನು ಕಂಡು ಈ ಗುಡ್ಡಗಾಡು ಜನರಿಗೆ ಬಹಳ ಅಸೂಯೆ ಇತ್ತು. ಏಕೆಂದರೆ, ಕಷ್ಟಪಟ್ಟು ವ್ಯವಸಾಯ ಮಾಡುವುದಕ್ಕಿಂತ, ಯುದ್ಧ ಮಾಡುವುದೇ ಸುಲಭ ಎಂದು ಈ ಜನರಿಗೆ ಅನಿಸುತ್ತಿತ್ತು. ಹಾಗಾಗಿ ಪರದೇಶಗಳ ಕರಾವಳಿಯನ್ನು ಆಕ್ರಮಣ ಮಾಡುವುದೇ ಉದಾತ್ತ ಉದ್ಯೋಗ ಎಂದು ಇವರು ಎಣಿಸಿದ್ದರು. ರೋಮ್, ಗ್ರೀಕ್, ಸ್ಪೇನ್ ನಾಗರಿಕತೆಗಳೊಂದಿಗೆ ಐದು ಶತಮಾನಗಳಿಂದಲೂ ಜರ್ಮನ್ನರು ವ್ಯಾಪಾರ ಹಾಗೂ ಯುದ್ಧದಲ್ಲಿ ತೊಡಗಿಕೊಂಡಿದ್ದರು. ರೋಮಿನ ದೇಶವನ್ನು ಆಕ್ರಮಿಸಿಕೊಂಡಿದ್ದ ಈ ಜನ ಅದರಲ್ಲಿಯೂ ಗಾಥ್ ದೇಶದವರು, ರೋಮಿನ ಸಂಸ್ಕೃತಿಯನ್ನು ಗೌರವಿಸುವಷ್ಟು ಸುಸಂಸ್ಕೃತರಾಗಿದ್ದರು. ತಮ್ಮ ದೇಶದ ಸಂಸ್ಕೃತಿಗಿಂತ ರೋಮಿನ ಸಂಸ್ಕೃತಿ ಬಹಳ ಉತ್ತುಂಗದಲ್ಲಿದೆ ಎಂದು ಅಂತ ಇವರು, ಕಪ್ಪು ಸಮುದ್ರದಿಂದ ಇಟಲಿಯ ಗಡಿಗಳವರೆಗೆ ಬಾಲ್ಕನ್ ಪ್ರದೇಶವನ್ನು ಸೂರೆ ಮಾಡಿದರು. ಇತಿಹಾಸದಲ್ಲಿ ಇವರನ್ನೆ ಗಾಥ್ ಎಂದು ಕರೆದಿದ್ದು. ಗಾಥ್ ಎಂಬ ಪದವು ಗಾಥ್, ಬರ್‌ಬರಿ, ವರ್ವರ ಎಂಬ ಪದಗಳಿಂದ ಗಾಥಿಕ್ ವಾಸ್ತುಕಲೆ ಎಂದು ಮಧ್ಯಯುಗದ ಕಾಲಾವಧಿಯಲ್ಲಿ ಬೆಳವಣಿಗೆಯಾಗಿದೆ. ಇದು ಕ್ರಿ.ಶ. ೧೨ನೆಯ ಶತಮಾನದಲ್ಲಿ ಮೊದಲು ಫ್ರಾನ್ಸ್‌ನಲ್ಲಿ ಆರಂಭಗೊಂಡು, ಗ್ರೀಕ್, ರೋಮನ್, ರೋಮನಸ್ಕ್ ಮತ್ತು ಬೈಜಂಟೈನ್ ಸಾಂಸ್ಕೃತಿಕ ವಾಸ್ತು ರಚನೆಯಿಂದ ಸಂಪೂರ್ಣ ಭಿನ್ನವಾದ ರೂಪವೇನು ಅಲ್ಲ. ಆದಾಗ್ಯೂ ಚರ್ಚ್‌ನ ವಾಸ್ತುವಿನ ರೂಪದಲ್ಲಿ ಮಾಡಿಕೊಂಡ ಗಾಥಿಕ್ ವಾಸ್ತುಶಿಲ್ಪವು ಲಕ್ಷ್ಯವನ್ನು ಕೇಂದ್ರೀಕರಿಸುವ ಮತ್ತು ವಿನ್ಯಾಸದ ಕರ್ಷಣವನ್ನು ಸಮತೋಲನ ಮಾಡುವ, ನೇರಗೆರೆಗಳನ್ನು ಒತ್ತಿ ಹೇಳುವ,

ಅಡ್ಡಪಟ್ಟಿಯನ್ನು ಕೊಡಲಾಗಿರುವ ಕಮಾನು, ಛಾವಣಿ ಹಾಗೂ ಚೂಪಾದ ಮೊನೆಯ ರಚನೆಗಳ ವಾಸ್ತುಶಿಲ್ಪದ ಕೆಲವು ಬದಲಾವಣೆಗಳು ಸ್ಪಷ್ಟವಾಗಿ ತೋರುತ್ತವೆ.[೧೯] ಕ್ರಿ.ಶ. ೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ಯೂರೋಪಿನಲ್ಲಿ ಚಾಲ್ತಿ ಇದ್ದ ವಾಸ್ತುಶೈಲಿಯನ್ನು ಗಾಥಿಕ್ ವಾಸ್ತುಶೈಲಿಯೆಂದು ಕರೆದಿದೆ. ಮುಂದೆ ಶಿಲ್ಪಕಲೆ, ಚಿತ್ರಕಲೆ, ಹಸ್ತಪ್ರತಿ ಕಲೆ, ಬಣ್ಣದ ಗಾಜಿನ ಕಿಟಕಿ ಚಿತ್ರಕಲೆಗೂ ಸಮನ್ವಯಿಸಿಕೊಳ್ಳಲಾಗಿದೆ.

**ಗಾಥಿಕ್ ಶೈಲಿಯ ಲಕ್ಷಣಗಳು**

* ಪ್ಯಾರಿಸ್‌ನ ಸೆಂಟ್ ಡೆನಿಸ್ ಚರ್ಚ್‌ನ ಪಠಾಧಿಪತಿಯಾಗಿ, ಚರ್ಚ್‌ನ ಜೀರ್ಣೋದ್ಧಾರದ ಕಾರ್ಯಕ್ರಮ ಹಮ್ಮಿಕೊಂಡು ಚರ್ಚ್‌ಗೆ ಹೊಸ ಚಾಲನೆಯನ್ನು ನೀಡಿದ್ದ ಕಾರಣಕ್ಕಾಗಿ ಸುರ್ಘುರನನ್ನು ಗಾಥಿಕ್ ವಾಸ್ತುಕಲೆಯ ಪ್ರಥಮ ಪುರುಷನನ್ನಾಗಿ ಪರಿಗಣಿಸಿದೆ.[೨೦]
* ಗಾಥಿಕ್ ಎಂದರೆ, 'ಮೊನಚಾದ ಕಮಾನು' ಎಂಬ ಅರ್ಥ ಕಲ್ಪಿಸುತ್ತದೆ. ಹಾಗಾಗಿ, ಚರ್ಚ್ ಉದ್ದಗಲಕ್ಕಿಂತ ಎತ್ತರಕ್ಕೆ ಹೆಚ್ಚು ಮಹತ್ವ ನೀಡಿದೆ.
* ರೋಮನಸ್ಕ್ ಶೈಲಿಯಲ್ಲಿ ಸಾಮಾನ್ಯವಾಗಿದ್ದ ಅರ್ಧವೃತ್ತದ ಕಮಾನಿನ ಬದಲು ಚೂಪು ಕಮಾನುಗಳು ಬಳಕೆಗೆ ಬಂದು ಗಾಥಿಕ್ ಎಂಬ ಹೊಸ ವಾಸ್ತುಶೈಲಿಗೆ ಎಡೆಮಾಡಿಕೊಟ್ಟಿದೆ.
* ಗಾಥಿಕ್ ಶೈಲಿಯ ಕಟ್ಟಡಗಳ ಅಡಿಪಾಯ ಅಥವಾ ತಳವಿನ್ಯಾಸ ಮುಖ್ಯವಾಗಿ ಶಿಲುಬೆಯಾಕೃತಿಯಲ್ಲಿರುತ್ತದೆ.
* ಕ್ರೈಸ್ತ ದೇವಾಲಯಗಳನ್ನು ಆರಂಭದಲ್ಲಿ ಪೂರ್ವಾಭಿಮುಖವಾಗಿ ಜೆರುಸೆಲಮ್ ಕಡೆಗೆ ಇರುವಂತೆ ಕಟ್ಟಲಾಗುತ್ತಿತ್ತು. ನಂತರ ಅದು ಎಲ್ಲಾ ದಿಕ್ಕುಗಳಲ್ಲಿಯೂ ಕಟ್ಟಲ್ಪಟ್ಟಿದೆ.
* ಕ್ರೈಸ್ತ ದೇವಾಲಯವು ಅರ್ಧವೃತ್ತಾಕಾರದ ಹಿಂಚಾಚು ಅಥವಾ ಚಚೌಕಾಕಾರದ ಬಲಿಪೀಠ ಅಥವಾ ಪುಲ್‌ಪೀಠ, ಮಧ್ಯಾಂಗಣ ಮತ್ತು ಮುಖಮಂಟಪವನ್ನು ಒಳಗೊಂಡಿರುತ್ತದೆ.
* ಕ್ರೈಸ್ತ ದೇವಾಲಯಗಳ ಮುಂಬಾಗಿಲು ಮತ್ತು ಕಿಟಕಿಗಳು ಕಮಾನು ವೃತ್ತಾಕಾರದಲ್ಲಿ ಇರದೆ, ತ್ರಿಕೋನಾಕಾರದಲ್ಲಿದ್ದು, ಮೊನೆಯುಳ್ಳ ಕಮಾನಿನ ಅನ್ವಯವು ಹೊಸ ಆಕರ್ಷಣೆಗಳನ್ನು ಸೃಷ್ಟಿಸಿತು.
* ದೇವಾಲಯದ ಮಧ್ಯಾಂಗಣಕ್ಕೆ ಸಾಕಷ್ಟು ಗಾಳಿ, ಬೆಳಕು, ಒಳಸೂಚಿಸುವ ಸಲುವಾಗಿ ಮೊನಚು ಬಾಗಿಲುಗಳು ಮತ್ತು ಕಿಟಕಿಗಳನ್ನು ಅಳವಡಿಸಲಾಗಿರುತ್ತದೆ.
* ದೇವಾಲಯದ ಬಲಿಪೀಠ ಹಿಂಭಾಗದ ಗೋಡೆಯ ಮೇಲೆ ಯೇಸುವಿನ ಶಿಲುಬೆ ಇರುತ್ತದೆ. ಕ್ಯಾಥೋಲಿಕ್ ದೇವಾಲಯಗಳಲ್ಲಿ ಶಿಲುಬೆಯ ಜೊತೆಗೆ ಯೇಸುವಿನ ಮೂರ್ತಿ ಇರುತ್ತದೆ. ಆದರೆ, ಪ್ರಾಟೆಸ್ಟೆಂಟ್ ಚರ್ಚ್‌ಗಳಲ್ಲಿ ಕೇವಲ ಶಿಲುಬೆ ಮಾತ್ರ ಇರುತ್ತದೆ.

* ಕ್ಯಾಥೋಲಿಕ್ ಚರ್ಚ್‌ಗಳಲ್ಲಿ ಗೋಡೆಯ ಮೇಲೆ ಯೇಸುವಿನ ಜೀವನ ಚರಿತ್ರೆಗೆ ಸಂಬಂಧಪಟ್ಟ ಭಿತ್ತಿಚಿತ್ರಗಳು ಕಂಡುಬರುತ್ತವೆ. ಆದರೆ, ಪ್ರಾಟೆಸ್ಟೆಂಟ್ ಚರ್ಚ್‌ಗಳಲ್ಲಿ ಯೇಸುವಿನ ಮೂರ್ತಿಯಾಗಲಿ ಅಥವಾ ಭಿತ್ತಿಚಿತ್ರಗಳಾಗಲಿ ಕಂಡುಬರುವುದಿಲ್ಲ.

* ಪ್ರಚಲಿತವಾಗಿದ್ದ ಬಣ್ಣದ ಗಾಜಿನ ಕಲೆಗೆ ಕಿಟಕಿಗಳು ಆಹ್ವಾನಿಸುವ ವಿಶಾಲ ಅವಕಾಶವನ್ನು ನೀಡಿದವು; ಹೊರಗೋಡೆ ಕಿಟಕಿಗಳ ಮೇಲಿನ ಕಲ್ಲಿನ ಚೌಕಟ್ಟುಗಳು ರಂಧ್ರಗಳ ವಿನ್ಯಾಸದ ಅಥವಾ 'ಟ್ರೇಸರಿ'(ಕಲ್ಲಿನ ಕುಸುರಿ ಕೆಲಸ) ಹೊಸಕಲೆ ಹುಟ್ಟುವಂತೆ ಮಾಡಿದವು.[೧೬]

* ದೇವಾಲಯದ ಮೇಲ್ಛಾವಣಿಯೂ ಬಹಳ ತೆಳುವಾಗಿ ಅದರ ಭಾರವೆಲ್ಲ ಶಿಲೆಯ ದಪ್ಪ ತೊಲೆಗಳ ಮೇಲಿದ್ದು, ಅವುಗಳನ್ನು ದಪ್ಪ ಒದೆಗಂಬಗಳು ಹೊತ್ತಿರುತ್ತವೆ. ಒದೆಗಂಬಗಳ ಮೇಲೆ ಶಿಖರಗಳನ್ನು ಎತ್ತಿರುವುದು ಈ ಶೈಲಿಯ ವೈಶಿಷ್ಟ್ಯ.

* ಎತ್ತರವೇ ವಾಸ್ತುವಿನ ಮೂಲ ಮಂತ್ರ-ತಂತ್ರವಾಗಿರುವುದರಿಂದ ಚರ್ಚ್ ನೈಸರ್ಗಿಕ ವಿಕೋಪಗಳಿಗೆ ತುತ್ತಾಗದಂತೆ ನೋಡಿಕೊಳ್ಳಲು ಮತ್ತು ಸುಂದರವಾಗಿ ಕಾಣಲು ಗ್ರೀಕ್, ರೋಮನ್ ಶೈಲಿಯ ಐಯೋನಿಕ್ ಮತ್ತು ಕಾರಿಂಥಿಯನ್ ಶೈಲಿಯ ಕಂಬಗಳನ್ನು ಒಳಗೊಂಡಿರುತ್ತದೆ.

* ಒಟ್ಟಾರೆಯಾಗಿ, ಕ್ರೈಸ್ತ ದೇವಾಲಯದ ಮುಂದೆ ನಿಂತರೆ ಅಗಾಧ ಮತ್ತು ಅದ್ಭುತವಾದ ಅನುಭವ ನೀಡುತ್ತದೆ. ಒಳಹೊಕ್ಕರೆ ಕ್ರೈಸ್ತನ ಶುಭಾಶೀರ್ವಾದದ ಬೆಳಕಿನಲ್ಲಿ ತೇಲಿದಂತಾಗುತ್ತದೆ.

ಯುರೋಪಿಯನ್ ವಾಸ್ತುಶೈಲಿಯಲ್ಲಿ ನಿರ್ಮಾಣಗೊಂಡ ಕಟ್ಟಡಗಳನ್ನು ಕೇವಲ ಡೋರಿಕ್, ಐಯೋನಿಕ್, ಕಾರಿಂಥಿಯನ್ ಮತ್ತು ಗಾಥಿಕ್ ವಾಸ್ತುಶೈಲಿಯನ್ನು ಒಳಗೊಂಡಿದ್ದಲ್ಲದೆ, ಪ್ರಾದೇಶಿಕ ಹಾಗೂ ಪರಿಸರಕ್ಕೆ ಅನುಗುಣವಾಗಿ ಕಟ್ಟಡಗಳನ್ನು ಆಕಾಶಕ್ಕೆ ಮುಗಿಲು ಮುಟ್ಟುವ ಹಾಗೆ ಎತ್ತರವಾಗಿ ನಿರ್ಮಿಸಿರುವುದು ಕಂಡುಬರುತ್ತವೆ. ಕಟ್ಟಡಗಳಿಗೆ ಬಳಸಿದ ಬಿಡಿ ವಾಸ್ತು ಭಾಗಗಳ ಆಕೃತಿಯ ಸ್ವಭಾವ, ಗುಣಗಳಂತೆ ಐರೋಪ್ಯ ಶೈಲಿಯ ಶುದ್ಧ ರೂಪದ ಅಳವಡಿಕೆ, ಜೋಡಿಸುವ ವಿಧಾನವನ್ನು ಆಧರಿಸಿ ವಾಸ್ತು ಸೌಂದರ್ಯ ನಿರ್ಧಾರಿತವಾಗುತ್ತದೆ. ಈ ಶೈಲಿಯ ಕಟ್ಟಡಗಳಲ್ಲಿ ಒಂದು ಕಂಬದಿಂದ ಮತ್ತೊಂದು ಕಂಬದ ನಡುವಿನ ಅಂತರ, ಗೋಡೆಗಳ ನಡುವಿನ ದೂರವನ್ನು ದುಂಡು ಇಲ್ಲವೆ ಮೊನಚು ಕಮಾನುಗಳು ಹಾದು ಒಂದು ಗೂಡಿಸುವ ವಿಧಾನ, ಕಂಬ ಗೋಡೆಗಳಿಗೆ ಕಾರಣೆ ಮಾಡಿ, ಅವುಗಳ ಮೇಲೆ ಅಲ್ಲಲ್ಲಿ ಉಬ್ಬಿದ ದಂಡೆ, ಹಿಂಜರಿಕೆ, ಮುಂಜರಿಕೆ, ಹೂಬಳ್ಳಿ, ಜ್ಯಾಮಿತಿ ವಿನ್ಯಾಸಗಳನ್ನು ಗಾರೆಯಲ್ಲೆ ರೂಪಿಸಿ ಅವುಗಳ ಚೆಲುವನ್ನು ಹೆಚ್ಚಿಸುವ ವಿಧಾನ, ಗೋಡೆಯ ಬುಡದಲ್ಲಿ ಮಣ್ಣಿನ ಚಿತ್ತಾರದ ಫಲಕಗಳನ್ನು ಸಂಯೋಜಿಸುವುದು, ಗೋಳಾಕಾರದ ಛಾವಣಿ, ಬಣ್ಣ ಬಣ್ಣದ ಗಾಜುಗಳನ್ನು ಅಳವಡಿಸಿರುವುದು. ಯಾವುದೇ ಕಟ್ಟಡದ ಪ್ರವೇಶ ದ್ವಾರದ ಮೇಲ್ತುದಿಯಲ್ಲಿ ತ್ರಿಕೋನ ಪಟ್ಟಿಕೆಯನ್ನು ಒಳಗೊಂಡಿರುತ್ತದೆ. ಏಕೆಂದರೆ, ಇದು ಪಶ್ಚಿಮದಿಂದ ಎರವಲು ಪಡೆದಿದ್ದೇವೆ ಎಂದು ಸೂಚನೆಯನ್ನು ನೀಡುತ್ತದೆ ಮುಂತಾದವೆಲ್ಲ ವಾಸ್ತು ಲಾವಣ್ಯದ ಸೊಬಗನ್ನು ಹೆಚ್ಚಿಸುವಲ್ಲಿ ಗಣನೀಯ ಪಾತ್ರವಹಿಸುತ್ತವೆ.

## ೩.೩. ಆಡಳಿತ ಕಟ್ಟಡಗಳು

ವಸಾಹತುಶಾಹಿ ಆಳ್ವಿಕೆಯ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ಆಡಳಿತವು ಅನೈಕ್ಯತೆಯಿಂದ ಕೂಡಿತ್ತು. ಕಾರಣ ಅದು ಸ್ಥಳೀಯ ಅರಸರಲ್ಲಿ ಹರಿದು ಹಂಚಿ ಹೋಗಿ, ಅಶಾಂತಿ ಉಂಟಾಗಿತ್ತು. ಆಡಳಿತದಲ್ಲಿ ಏಕಸ್ವಾಮ್ಯತೆಯನ್ನು ಹೊಂದಿಲ್ಲದೆ ಇದ್ದ ಕಾರಣಕ್ಕಾಗಿ ಬ್ರಿಟಿಷರಿಗೆ ಬಹಳ ಸರಳವಾಗಿ ಬಲಿಯಾಗಬೇಕಾಯಿತು. ಕ್ರಿ.ಶ. ೧೮೦೦ರಲ್ಲಿ ಬ್ರಿಟಿಷ್ ಸರ್ಕಾರವು ಹೈದರಾಬಾದ್ ನಿಜಾಮನೊಡನೆ ಒಪ್ಪಂದದ ಮೂಲಕ ಪಡೆದುಕೊಂಡಿದ್ದ ಪ್ರದೇಶವು ಕೃಷ್ಣ ಮತ್ತು ತುಂಗಭದ್ರಾ ನದಿಗಳ ದಕ್ಷಿಣದ ಎಲ್ಲಾ ಪ್ರದೇಶಗಳನ್ನು ಒಳಗೊಂಡಿತ್ತು. ನಿಜಾಮನು ಬಳ್ಳಾರಿ, ಅನಂತಪುರ, ಕರ್ನೂಲು, ಕಡಪ ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಒಪ್ಪಿಸಿದ್ದರಿಂದ ಅವನ್ನು ಸೀಡೆಡ್ ಎಂದು ಕರೆಯಲಾಯಿತು. ಸರ್ ಥಾಮಸ್ ಮನ್ರೋ ಅವುಗಳ ಪ್ರಥಮ ಹಾಗೂ ಅತ್ಯಂತ ಪ್ರಸಿದ್ಧ ಮುಖ್ಯ ಕಲೆಕ್ಟರನಾಗಿದ್ದ. ಸರ್ ಥಾಮಸ್ ಮನ್ರೋ ಆಡಳಿತ ವಹಿಸಿಕೊಂಡ ಆರಂಭದ ದಿನಗಳಲ್ಲಿ ಸ್ಥಳೀಯ ಪಾಳೆಯಗಾರರನ್ನು ಸದ್ದಡಗಿಸಿದ್ದಲ್ಲದೆ, ಆಡಳಿತದಲ್ಲಿ ಏಕರೂಪತೆಯನ್ನು ಜಾರಿಗೊಳಿಸಿದನು. ಸೀಡೆಡ್ ಜಿಲ್ಲೆಗಳಲ್ಲಿ ಅವರು ಮಾಡಿದ್ದ ಅಭಿವೃದ್ಧಿ ಕಾರ್ಯಗಳು ಇಂದಿಗೂ ಜನಮನದಲ್ಲಿವೆ. ಹಾಗಾಗಿ ಅವರನ್ನು ಸ್ಥಳೀಯರು ಮಂಥೋಳಯ್ಯ, ಮನ್ರಪ್ಪ ಎಂದು ಕರೆಯತೊಡಗಿದರು.

೧೮೦೩ರ ಹೊತ್ತಿಗೆ ಮದ್ರಾಸ್ ಪ್ರಾಂತ ೧೪೦೦ ಚದರ ಮೈಲಿಗಳಷ್ಟು ಪ್ರದೇಶವನ್ನು ಒಳಗೊಂಡಿತ್ತು. ಪ್ರಾಂತವನ್ನು ಜಿಲ್ಲೆಗಳಾಗಿ ವಿಭಾಗಿಸಿತ್ತು. ಅವುಗಳ ಸಂಖ್ಯೆ ಇಪ್ಪತ್ತರಿಂದ ಇಪ್ಪತ್ತಾರರವರೆಗೆ ಇರುತ್ತಿತ್ತು. ವಿಸ್ತಾರದಲ್ಲಿ ಮತ್ತು ಜನಸಾಂದ್ರತೆಯಲ್ಲಿ ಈ ಜಿಲ್ಲೆಗಳಲ್ಲಿ ಬಹಳ ವ್ಯತ್ಯಾಸಗಳಿದ್ದರೂ, 'ಜಿಲ್ಲೆಯೊಂದರ ಸರಾಸರಿ ವಿಸ್ತೀರ್ಣ ೪.೪೩೦ ಚದರ ಮೈಲಿಗಳು ಮತ್ತು ಸರಾಸರಿ ಜನಸಂಖ್ಯೆ ೯೩೧.೦೦೦ ಆಗಿದ್ದವು'.[೧೭] ಮದ್ರಾಸ್ ಅಧಿಪತ್ಯದಲ್ಲಿದ್ದ ೨೪ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆ ನಾಲ್ಕನೆಯದಾಗಿತ್ತು.[೧೮] ಈ ಜಿಲ್ಲೆಯನ್ನು ಮತ್ತೆ ನಾಲ್ಕು ಸಬ್-ಡಿವಿಜನ್‌ಗಳು, ತಾಲೂಕುಗಳು, ಹೋಬಳಿ ಕೇಂದ್ರಗಳಾಗಿ ವಿಭಜನೆಗೊಂಡಿತು. ಇವೆಲ್ಲವಕ್ಕೂ ಜಿಲ್ಲೆಯೇ ಪ್ರಮುಖ ಆಡಳಿತ ಕೇಂದ್ರವಾಗಿತ್ತು. ಮ್ಯಾಜಿಸ್ಟ್ರೇಟ್ ಮತ್ತು ಕಲೆಕ್ಟರ್‌ನು ಜಿಲ್ಲೆಯ ಪ್ರಧಾನ ಕಾರ್ಯನಿರ್ವಾಹಕ ಮುಖ್ಯಸ್ಥನಾಗಿರುತ್ತಿದ್ದ. ಕಂದಾಯ, ತೆರಿಗೆ, ಪೊಲೀಸ್, ಜೈಲು, ಮುನಿಸಿಪಾಲಿಟಿ ಮತ್ತು ಜಿಲ್ಲಾ ಬೋರ್ಡುಗಳಿಗೆ ಸಂಬಂಧಿಸಿದಂತೆ ವ್ಯಾಪಕವಾದ ಅಧಿಕಾರಿಗಳೂ, ವಿವಿಧವಾದ ಕರ್ತವ್ಯಗಳೂ ಇದ್ದವು. 'ಕಂದಾಯ ಮತ್ತು ಭೂಸ್ವಾಮ್ಯವನ್ನು ಕುರಿತು ಎಲ್ಲ ವಿಷಯಗಳಲ್ಲಿಯೂ ಆತನಿಗೆ ವ್ಯಾಪಕವಾದ ಕ್ಷಿಪ್ರಕ್ರಮದ ನ್ಯಾಯಾಧಿಕಾರವಿತ್ತು'.[೧೯] ಇದರಿಂದ ಮ್ಯಾಜಿಸ್ಟ್ರೇಟ್ ಮತ್ತು ಕಲೆಕ್ಟರ್ ಒಂದು ಬಗೆಯ ಸ್ಥಳೀಯ ಗವರ್ನರನಾಗಿದ್ದಾನೆ. ತನ್ನ ಜಿಲ್ಲೆಯ ಮೇಲೆ ವ್ಯಾಪಕವಾದ, ಅವನ ಸರಳವಾದ ಹೆಸರು ಸೂಚಿಸುವ ಕೆಲವು ಕರ್ತವ್ಯಗಳಿಗಿಂತಲೂ ಬಹಳ ದೊಡ್ಡದಾದ, ಉಸ್ತುವಾರಿಯನ್ನು ಚಲಾಯಿಸುತ್ತಾನೆ ಮತ್ತು ಜನ ಅವನನ್ನು ನೇರ ಪ್ರಭುವನ್ನಾಗಿ ಕಾಣುತ್ತಾರೆ. ೧೮೯೨ರಲ್ಲಿ ಹಂಟರ್ ಹೀಗೆ ಬರೆದನು. 'ಜಿಲ್ಲಾಧಿಕಾರಿಯನ್ನು ಕಲೆಕ್ಟರ್, ಮ್ಯಾಜಿಸ್ಟ್ರೇಟ್

ಅಥವಾ ಡೆಪ್ಯೂಟಿ ಕಮಿಷನರ್ ಎಂಬ ಯಾವ ಹೆಸರಿನಿಂದ ಕರೆದರೂ ಅವನೊಬ್ಬ ಪ್ರಮುಖ ಅಧಿಕಾರಿಯಾಗಿದ್ದು. ತನ್ನ ವ್ಯಾಪ್ತಿಗೆ ಒಳಪಡುವ ಪ್ರದೇಶದ ಅತ್ಯಂತ ಜವಾಬ್ದಾರಿಯುತ, ಮುಖ್ಯ ಅಧಿಕಾರಿಯಾಗಿದ್ದ'.[೨೦] ಈ ಹಿನ್ನೆಲೆಯಲ್ಲಿ ಅವರು ಜಿಲ್ಲೆಯ ಕೇಂದ್ರಬಿಂದುವಾಗಿ ಕಾರ್ಯನಿರ್ವಹಿಸುತ್ತಾರೆ.

**ಬಳ್ಳಾರಿ ಜಿಲ್ಲಾ ಕಛೇರಿ** : ಬಳ್ಳಾರಿ ಜಿಲ್ಲಾ ಕಲೆಕ್ಟರ್‌ರವರ ಕಛೇರಿಯು ೧೮೮೦ರಲ್ಲಿ ನಿರ್ಮಾಣಗೊಂಡಿದೆ. ಇದು ೬೦೭೨.೭೦ ಚದರ ಮೀಟರ್ ಭೂ ವಿಸ್ತೀರ್ಣದಲ್ಲಿ[೨೧] ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಉತ್ತರಾಭಿಮುಖವಾಗಿ ಕಟ್ಟಲ್ಪಟ್ಟಿದೆ. ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಉದ್ದಕ್ಕಿಂತ ಅಗಲ ಹೆಚ್ಚಾಗಿದೆ. ಕಟ್ಟಡವು ಎರಡು ಅಂತಸ್ತಿನ ಕಟ್ಟಡ. ಈ ಕಟ್ಟಡದಲ್ಲಿರುವ ಪ್ರತಿಯೊಂದು ಕೊಠಡಿಯು ವಿಶಾಲವಾಗಿದ್ದು, ಅವುಗಳ ಒಳಭಾಗಕ್ಕೆ ಸಾಕಷ್ಟು ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳು ಹಾಗೂ ಹೆಚ್ಚು ಬಾಗಿಲುಗಳನ್ನು ಅಳವಡಿಸಿ ನಿರ್ಮಿಸಲಾಗಿದೆ. ಕಿಟಕಿ ಮತ್ತು ಬಾಗಿಲಿನ ಮೇಲ್ಭಾಗದಲ್ಲಿ ಎಲೆ ಮೊನಚಿನಂತಹ ಚೂಪಾದ ಕಮಾನುಗಳನ್ನು ಅಳವಡಿಸಿದೆ. ಕಟ್ಟಡದ ಮುಂಭಾಗದಲ್ಲಿ ಗೋಡೆ ಗೋಡೆಗಳ ನಡುವೆ ದುಂಡು ಕಮಾನುಗಳು ಹಾದು ಒಂದುಗೂಡಿಸಿವೆ. ಕಟ್ಟಡದ ಮೇಲ್ಛಾವಣಿಯು ಮದ್ರಾಸ್ ಟೇರಾಸ್‌ನಿಂದ ಕೂಡಿದೆ. ಇದರ ಮೇಲ್ಭಾಗದಲ್ಲಿ ಅಂದರೆ ಕಟ್ಟಡದ ನಾಲ್ಕು ದಿಕ್ಕುಗಳ ಮೇಲ್ಭಾಗದ ತುದಿಯಲ್ಲಿ ಕಮಾನ ಸರಣಿಯ ಗುಮ್ಮಟಗಳು ಕಂಡುಬರುತ್ತವೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಗಾರೆ, ಸಿಮೆಂಟ್, ಸುಣ್ಣ ಮತ್ತು ಬಣ್ಣವನ್ನು ಬಳಸಿ ಕಟ್ಟಿರುವುದು ಕಂಡುಬಂದಿದೆ. ಇದರ ಪಕ್ಕದಲ್ಲಿ ಇನ್ನೊಂದು ಕಟ್ಟಡವಿದೆ. ಅದೇ ರೀತಿ ಹಿಂಭಾಗದಲ್ಲಿಯೂ ಇಳಿಜಾರು ಹೆಂಚಿನ ಛಾವಣಿಯನ್ನು ಹೊಂದಿದ್ದ ಕಟ್ಟಡಗಳಿವೆ. ಒಟ್ಟಾರೆಯಾಗಿ ಡಿ.ಸಿ. ಕಛೇರಿಯು ಹೊರನೋಟಕ್ಕೆ ಐರೋಪ್ಯ ವಾಸ್ತುಶೈಲಿಯ ಲಕ್ಷಣಗಳನ್ನೊಳಗೊಂಡ ವೈಭವೋಪೇತವಾಗಿ, ಅನುಕೂಲಕರವಾಗಿದ್ದಂತೆ ಭಾಸವಾಗುತ್ತದೆ.

ಜಿಲ್ಲೆಯ ಪ್ರತಿಯೊಂದು ಕಲೆಕ್ಟರೇಟು ಎಂಟರಿಂದ ಹನ್ನೆರಡು ತಾಲೂಕುಗಳನ್ನು ಹೊಂದಿರುತ್ತಿತ್ತು. ಪ್ರತಿಯೊಂದು ತಾಲೂಕನ್ನು ತಹಶೀಲ್ದಾರನೊಬ್ಬನ ವಶದಲ್ಲಿ ಇಡಲಾಗಿತ್ತು. ಅವನ ಪ್ರದೇಶದಲ್ಲಿನ ರೆವಿನ್ಯೂ ವ್ಯವಹಾರಗಳು ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದಂತೆ ಅವನ ಕರ್ತವ್ಯಗಳು ಬಗೆ ಬಗೆಯವೂ, ದುರ್ಭರವೂ ಆಗಿದ್ದವು. ಈ ಹಿನ್ನೆಲೆಯಲ್ಲಿ ತಹಶೀಲ್ದಾರನ ಕರ್ತವ್ಯಗಳನ್ನು ಕಡಿಮೆಗೊಳಿಸುವುದಕ್ಕಾಗಿ ಶಿರಸ್ತೇದಾರ್, ಕಂದಾಯ ನಿರೀಕ್ಷಕ ಮತ್ತು ಗ್ರಾಮಲೆಕ್ಕಿಗರು ಎಂದು ವಿಂಗಡಿಸಲಾಗಿತ್ತು. ಈ ಎಲ್ಲಾ ಅಧಿಕಾರಿಗಳ ಮೇಲೆ ಉಪವಿಭಾಗೀಯ ಅಸಿಸ್ಟೆಂಟ್ ಅಥವಾ ಡೆಪ್ಯೂಟಿ ಕಮಿಷರ್ ಇದ್ದ. ಸಾಮಾನ್ಯವಾಗಿ ಅವನು ಕಂದಾಯ ಹಾಗೂ ಇತರ ಆಡಳಿತ ವಿಷಯಗಳಿಗಾಗಿ ಮೂರು ಅಥವಾ ನಾಲ್ಕು ತಾಲೂಕುಗಳ ಜವಾಬ್ದಾರಿ ಹೊತ್ತಿದ್ದ. ೧೯೧೦ರ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯು ನಾಲ್ಕು ಉಪವಿಭಾಗಗಳನ್ನು ಹೊಂದಿತು. ಹೊಸಪೇಟೆ, ಆದೋನಿ, ಬಳ್ಳಾರಿ ಮತ್ತು ರಾಯದುರ್ಗ ಈ ನಾಲ್ಕು ವಿಭಾಗಗಳಲ್ಲಿ ಅಸಿಸ್ಟೆಂಟ್

ಕಲೆಕ್ಟರ್ ಕಾರ್ಯನಿರ್ವಹಿಸುತ್ತಿದ್ದರು. ಇವರ ಕೈ ಕೆಳಗೆ ಪ್ರತಿಯೊಂದು ತಾಲೂಕಿನಲ್ಲಿ ತಹಶೀಲ್ದಾರರು ಕಾರ್ಯನಿರ್ವಹಿಸುತ್ತಿದ್ದರು. 'ಈ ಕಾರ್ಯನಿರ್ವಾಹಕ ಅಧಿಕಾರಿಗಳೆಲ್ಲರೂ ಆಂಗ್ಲರಾಗಿದ್ದರು'.[೨೨] ಪ್ರತಿಯೊಂದು ತಾಲೂಕುಗಳಲ್ಲಿ ೧೦೦ ರಿಂದ ೨೦೦ರವರೆಗಿನ ಸರ್ಕಾರಿ ಗ್ರಾಮಗಳನ್ನು ಅಥವಾ ಸಂಪೂರ್ಣ ಕಂದಾಯ ಸರ್ಕಾರಕ್ಕೆ ಸೇರಿದ್ದ ಹಳ್ಳಿಗಳನ್ನು ಹೊಂದಿತ್ತು. ಹಳ್ಳಿಗಳಲ್ಲಿ ಪಟೇಲ, ಕುಲಕರ್ಣಿ ಅಥವಾ ತಲಾತಿ, ಮಹರ್ ಮತ್ತು ಕಾವಲುಗಾರ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು.

**ಬಳ್ಳಾರಿ ತಾಲೂಕು ಕಛೇರಿ** : ಬಳ್ಳಾರಿ ತಾಲೂಕು ಕಛೇರಿಯು ಬಳ್ಳಾರಿ ಜಿಲ್ಲಾಧಿಕಾರಿಗಳ ಕಛೇರಿಯ ಎದುರುಗಡೆ ಕಂಡುಬರುತ್ತದೆ. ಈ ಕಛೇರಿಯ ಕಟ್ಟಡವು ೧೯೩೨ರಲ್ಲಿ, ೨೮೨೦.೫೦ ಚದರ ಮೀಟರ್ ಭೂವಿಸ್ತೀರ್ಣದಲ್ಲಿ ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿದೆ. ಇದು ದೊಡ್ಡ ಕಟ್ಟಡವಾಗಿದ್ದು ನಾಲ್ಕು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ಕಟ್ಟಲ್ಪಟ್ಟಿದೆ. ಕಟ್ಟಡದ ಒಳಭಾಗದಲ್ಲಿ ವಿಶಾಲವಾದ ಕೊಠಡಿಗಳಿದ್ದು, ಅವುಗಳಿಗೆ ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳನ್ನು ಅಳವಡಿಸಿದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿದೆ. ಪ್ರಸ್ತುತ ಈ ಕಟ್ಟಡದಲ್ಲಿ ಗ್ರಾಮೀಣ ಪೊಲೀಸ್ ಠಾಣೆ, ಕಂದಾಯ ಇಲಾಖೆ ಇತ್ಯಾದಿ ಇಲಾಖೆಗಳು ಕಾರ್ಯನಿರ್ವಹಿಸುತ್ತಿವೆ.

**ಹೊಸಪೇಟೆ ತಾಲೂಕು ಕಛೇರಿ** : ಹೊಸಪೇಟೆ ತಾಲೂಕು ಬಳ್ಳಾರಿಯಿಂದ ಪಶ್ಚಿಮಕ್ಕೆ ೬೨ ಕಿಲೋಮೀಟರ್ ದೂರದಲ್ಲಿದೆ. ಇದು ಕಮಲಾಪುರ, ಮರಿಯಮ್ಮನಹಳ್ಳಿ, ಕಂಪ್ಲಿ ಮತ್ತು ಹೊಸಪೇಟೆ ನಾಲ್ಕು ಹೋಬಳಿಗಳನ್ನು ಹೊಂದಿದ್ದು, ೭೫ ಗ್ರಾಮಗಳನ್ನು ಒಳಗೊಂಡಿದೆ. ಭೌಗೋಳಿಕವಾಗಿ ಹೆಚ್ಚು ವಿಶಾಲವಾಗಿರುವ ಈ ತಾಲೂಕನ್ನು ಈಶಾನ್ಯದಲ್ಲಿ ಸಿರುಗುಪ್ಪ, ಪೂರ್ವದಲ್ಲಿ ಬಳ್ಳಾರಿ, ದಕ್ಷಿಣದಲ್ಲಿ ಸಂಡೂರು, ಪಶ್ಚಿಮದಲ್ಲಿ ಹಗರಿಬೊಮ್ಮನಹಳ್ಳಿ ವಾಯುವ್ಯ ಮತ್ತು ಉತ್ತರದಲ್ಲಿ ಕೊಪ್ಪಳ ಜಿಲ್ಲೆ ಮತ್ತು ಗಂಗಾವತಿ ತಾಲೂಕುಗಳು ಸುತ್ತುವರೆದಿವೆ. ಪ್ರಸ್ತುತ ವಿಶ್ವಪರಂಪರೆಯ ತಾಣವಾಗಿದ್ದ ಹಂಪಿಯು ಈ ತಾಲೂಕಿನ ವ್ಯಾಪ್ತಿಯಲ್ಲಿರುವುದರಿಂದ ಬಳ್ಳಾರಿ ಜಿಲ್ಲೆಯಲ್ಲಿಯೇ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡ ಸ್ಥಳವಾಗಿದೆ.

ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಪ್ರಮುಖ ತಾಲೂಕುಗಳಲ್ಲಿ ಹೊಸಪೇಟೆಯು ಒಂದಾಗಿತ್ತು. ಕ್ರಿ.ಶ. ೧೮೫೧ರಲ್ಲಿ ಜಿಲ್ಲೆಯ ಉಪತಾಲೂಕು ಕೇಂದ್ರವಾಗಿದ್ದ ಕಂಪ್ಲಿಯನ್ನು ಹೊಸಪೇಟೆ ತಾಲೂಕಿಗೆ ವರ್ಗಾಯಿಸಲ್ಪಟ್ಟಿತು. ಇದರಿಂದ ಹೊಸಪೇಟೆ ಭೌಗೋಳಿಕವಾಗಿ ವಿಸ್ತಾರವನ್ನು ಹೊಂದಿತ್ತು. ಇದೇ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲಾ ಆಡಳಿತ ಕೇಂದ್ರಭಾಗದಿಂದ ದೂರವಿದ್ದ ಪಶ್ಚಿಮ ತಾಲೂಕುಗಳನ್ನು ಸಂಪರ್ಕಿಸಲು ಸ್ವಲ್ಪ ಕಷ್ಟದಾಯಕವಾಗಿತ್ತು. ಈ ಕಾರಣದಿಂದ ೧೮೮೨ರಲ್ಲಿ ಹೊಸಪೇಟೆ ತಾಲೂಕಿನಲ್ಲಿ ಉಪವಿಭಾಗವನ್ನು ಸ್ಥಾಪಿಸಲಾಯಿತು. ಇಲ್ಲಿ ಒಬ್ಬ ಹೆಡ್ ಅಸಿಸ್ಟೆಂಟ್ ಕಲೆಕ್ಟರನು ಮುಖ್ಯಧಿಕಾರಿಯಾಗಿ ಕಾರ್ಯನಿರ್ವಹಿಸಿದನು. ಈ

ವಿಭಾಗವು ಹಡಗಲಿ, ಹರಪನಹಳ್ಳಿ, ಹೊಸಪೇಟೆ ಮತ್ತು ಕೂಡ್ಲಿಗಿ ತಾಲೂಕು ಪ್ರದೇಶವನ್ನು ಒಳಗೊಂಡಿತ್ತು.

ಪ್ರಸ್ತುತ ಹಳೆಯ ತಾಲೂಕು ಕಛೇರಿಯು ಹೊಸ ತಾಲೂಕು ಕಛೇರಿಯ ಹಿಂಭಾಗದಲ್ಲಿದೆ. ಇದರ ಕಟ್ಟಡವು ಬೃಹದಾಕಾರವಾಗಿದ್ದು, ನಾಲ್ಕು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಈ ಕಟ್ಟಡದಲ್ಲಿ ವಿಶಾಲವಾದ ದೊಡ್ಡ ದೊಡ್ಡ ಕೊಠಡಿಗಳಿದ್ದು, ಆ ಕೊಠಡಿಗಳ ಒಳಭಾಗಕ್ಕೆ ಸಾಕಷ್ಟು ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿ ಹಾಗೂ ಬಾಗಿಲುಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಈ ಕಿಟಕಿಗಳಿಗೆ ವಿಶೇಷವಾಗಿ ಬಣ್ಣ ಬಣ್ಣದ ಗಾಜುನ್ನು ಅಳವಡಿಸಿದೆ. ಇದರ ಉದ್ದೇಶ ಕಟ್ಟಡದ ಒಳಭಾಗಕ್ಕೆ ಹೆಚ್ಚು ಬೆಳಕು ಬೀಳುವ ಹಾಗೆ ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದತೀರು, ಮಂಗಳೂರು ಹೆಂಚ್, ಗಾರೆ ಮತ್ತು ಸುಣ್ಣವನ್ನು ಬಳಸಿ ಕಟ್ಟಿಸಿರುವುದು ಕಂಡುಬರುತ್ತದೆ.

ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಈ ಒಂದೇ ಕಟ್ಟಡದಲ್ಲಿ ತಾಲೂಕು ಕಛೇರಿ, ಕಂದಾಯ ಇಲಾಖೆ, ಪೊಲೀಸ್ ಠಾಣೆ, ಅರಣ್ಯ ಇಲಾಖೆ, ಶಾಲಾ ಇನ್ಸ್‌ಪೆಕ್ಟರ್‌ರವರ ಇಲಾಖೆ, ಅಂಚೆ ಕಛೇರಿ ಮತ್ತು ನ್ಯಾಯಾಲಯವು ಕಾರ್ಯನಿರ್ವಹಿಸುತ್ತಿದ್ದವು. '೧೯೬೦ರಲ್ಲಿ ಹಳೆಯ ತಾಲೂಕು ಕಛೇರಿ ಕಟ್ಟಡವನ್ನು ಜಿಲ್ಲಾ ಮಂಡಳಿಗೆ ವರ್ಗಾಯಿಸಲಾಯಿತು'.[೨೩] ಇದರಿಂದ ಜಿಲ್ಲಾ ಬೋರ್ಡ್ ವತಿಯಿಂದ ಹೊಸ ಕಟ್ಟಡಗಳ ನಿರ್ಮಾಣ ಯೋಜನೆಗೆ ಅನುಮೋದನೆ ನೀಡಲಾಯಿತು. ಇದರನ್ವಯ 'ಅಂಚೆ ಕಛೇರಿಯನ್ನು ಕಟ್ಟಲು ೬೫೦೦/- ರೂಪಾಯಿಗಳ ಅನುದಾನವನ್ನು ನೀಡಲಾಯಿತು. ಶಾಲಾ ಇನ್ಸ್‌ಪೆಕ್ಟರ್ ಕಛೇರಿಯನ್ನು ಕಟ್ಟಲು ೨,೯೫೦/- ರೂಪಾಯಿಗಳನ್ನು ವ್ಯಯಿಸಲಾಯಿತು'.[೨೪] ಅರಣ್ಯ ಅಧಿಕಾರಿಗಳಿಗೆ ಹೊಸಪೇಟೆಯಲ್ಲಿ ನೂತನವಾಗಿ ಕಛೇರಿಯನ್ನು ಕಟ್ಟಿಕೊಡಲಾಗಿದೆ.

ಪ್ರಸ್ತುತ ಈ ಕಟ್ಟಡದಲ್ಲಿ ಗ್ರಾಮೀಣ ಪೊಲೀಸ್ ಠಾಣೆ ಮತ್ತು ಕಂದಾಯ ಇಲಾಖೆಯು ಕಾರ್ಯನಿರ್ವಹಿಸುತ್ತಿದೆ. ಈ ಕಛೇರಿಯ ಹಿಂಭಾಗದಲ್ಲಿ ತಾಲೂಕು ಸಬ್‌ಜೈಲ್ ಇದೆ. ಮುಂಭಾಗದಲ್ಲಿ ಹೊಸ ತಾಲೂಕು ಕಛೇರಿಯು ಕಾರ್ಯನಿರ್ವಹಿಸುತ್ತಿದೆ.

**ಹರಪನಹಳ್ಳಿ ತಾಲೂಕು ಕಛೇರಿ :** ಪ್ರಸ್ತುತ ದಾವಣಗೆರೆ ಜಿಲ್ಲಾ ವ್ಯಾಪ್ತಿಯಲ್ಲಿರುವ ಹರಪನಹಳ್ಳಿ ತಾಲೂಕು ಜಿಲ್ಲಾ ಕೇಂದ್ರದಿಂದ ೫೦ ಕಿಲೋಮೀಟರ್ ದೂರದಲ್ಲಿದೆ. ಇದು ತೆಲಗಿ, ಹಲುವಾಗಲು, ಅರಿಸೀಕೆರೆ ಮತ್ತು ಚಿಗಟೇರಿ ನಾಲ್ಕು ಹೋಬಳಿ, ೬೪ ಗ್ರಾಮಗಳನ್ನು ಹೊಂದಿದ್ದು, ೨೦೧೧ರ ಜನಗಣತಿಯ ಪ್ರಕಾರ ೧.೦೫.೧೩೨ ಜನಸಂಖ್ಯೆಯನ್ನು ಹೊಂದಿದೆ. ಹರಪನಹಳ್ಳಿ ತಾಲೂಕು ದಿ. ಜೆ.ಎಚ್. ಪಟೇಲರು ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಬಳ್ಳಾರಿಯಿಂದ ವಿಭಜನೆಗೊಂಡು

ದಿನಾಂಕ ೧೫-೦೮-೧೯೯೭ರಲ್ಲಿ ದಾವಣಗೆರೆ ಜಿಲ್ಲೆಗೆ ಸೇರ್ಪಡೆಗೊಂಡಿತು. ಇದಕ್ಕೂ ಪೂರ್ವದಲ್ಲಿ ಇದು ಬಳ್ಳಾರಿ ಜಿಲ್ಲಾ ವ್ಯಾಪ್ತಿಯಲ್ಲಿತ್ತು. ಇಲ್ಲಿ ೧೭ ಮತ್ತು ೧೮ನೆಯ ಶತಮಾನದಲ್ಲಿ ಹರಪನಹಳ್ಳಿ ಪಾಳೆಯಗಾರರು ಆಳ್ವಿಕೆ ಮಾಡುತ್ತಿದ್ದರು. ಪಾಳೆಯಗಾರರು ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ಹರಪನಹಳ್ಳಿಯು ಅರಣ್ಯ ಸಂಪತ್ತಿನಿಂದ ಕೂಡಿದ್ದು, ಉತ್ತಮ ಹವಾಗುಣವನ್ನು ಹೊಂದಿತ್ತು. ೧೮೦೦ರಲ್ಲಿ ಬ್ರಿಟಿಷರು ಹರಪನಹಳ್ಳಿ ಪಾಳೆಯಗಾರರ ಅಧಿಕಾರವನ್ನು ಮೊಟಕುಗೊಳಿಸಿ ಅವರಿಗೆ ಮಾಶಾಸನ ನೀಡಲ್ಪಟ್ಟರು.

ಬ್ರಿಟಿಷರು ಹರಪನಹಳ್ಳಿಯಲ್ಲಿ ತಮ್ಮ ಆಡಳಿತದ ಅನುಕೂಲಕ್ಕಾಗಿ ವಿವಿಧ ಆಡಳಿತ ವಿಭಾಗಗಳನ್ನು ಸ್ಥಾಪಿಸಿಕೊಂಡು ಆಳ್ವಿಕೆ ಮಾಡಿರುವುದು ಕಂಡುಬಂದಿದೆ. ಹಳೆಯ ತಾಲೂಕು ಕಛೇರಿಯು ಸರ್ಕಾರಿ ಪದವಿಪೂರ್ವ ಕಾಲೇಜ್ ಎದುರುಗಡೆ ಕಂಡುಬರುತ್ತದೆ. ಇದು 'ಸರ್ವೇ ನಂಬರ್ ೧೫೧, ೬.೩೧ ಚದರ ಅಡಿ ಭೂ ವಿಸ್ತೀರ್ಣದಲ್ಲಿ',[೨೫] ಪಶ್ಚಿಮಾಭಿಮುಖವಾಗಿ ೧೮೬೫ರಲ್ಲಿ ಸ್ಥಾಪನೆಗೊಂಡಿದೆ. ಕಟ್ಟಡದ ತಳವಿನ್ಯಾಸವು F ಆಕಾರದಲ್ಲಿದ್ದು, ನಾಲ್ಕು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ಕಟ್ಟಲ್ಪಟ್ಟಿದೆ. ಈ ಕಟ್ಟಡದಲ್ಲಿ ವಿಶಾಲವಾದ ಕೊಠಡಿಗಳಿದ್ದು, ಪ್ರತಿಯೊಂದು ಕೊಠಡಿಗೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಮೇಲ್ಛಾವಣಿಯು ಆರ್.ಸಿ.ಸಿ.ನಿಂದ ಕಟ್ಟಿದ್ದು, ಅದಕ್ಕೆ ಹೊಂದಿಕೊಂಡಂತೆ ಕಟ್ಟಡದ ಮುಂಭಾಗ ಮತ್ತು ಹಿಂಭಾಗದಲ್ಲಿ ಹೆಂಚಿನ ಇಳಿಜಾರು ಛಾವಣಿಯಿಂದ ಕೂಡಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದತೀರು, ಮಂಗಳೂರು ಹೆಂಚ್, ಗಾರೆ ಮತ್ತು ಸುಣ್ಣವನ್ನು ಬಳಸಿ ನಿರ್ಮಿಸಿರುವುದು ಕಂಡುಬಂದಿದೆ.

**ಹೂವಿನಹಡಗಲಿ ತಾಲೂಕು ಕಛೇರಿ :** ಬಳ್ಳಾರಿಯಿಂದ ಪಶ್ಚಿಮಕ್ಕೆ ೧೧೮ ಕಿ.ಮೀ. ದೂರದಲ್ಲಿ, ಜಿಲ್ಲೆಯ ಪಶ್ಚಿಮ ತಾಲೂಕು ಆಡಳಿತ ಕೇಂದ್ರವೆಂದೇ ಹೆಸರಾದ ಹಡಗಲಿಯನ್ನು ಕ್ರಿ.ಶ. ೧೦೪೪ರ ಮೋರಿಗೇರಿ ಶಾಸನದಲ್ಲಿ 'ಪೂವಿನಪೊಸವಾಡಂಗಿಲೆ' ಎಂದೂ, ಕ್ರಿ.ಶ. ೧೧೦೪ರ ಕುರುವತ್ತಿ ಶಾಸನದಲ್ಲಿ 'ಎರಡು ಹಡಂಗಿಲೆ' ಎಂದು ಕರೆದಿದೆ. ಇದರಿಂದ ಹಡಗಲಿಯು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಭವ್ಯ ಪರಂಪರೆಯಿಂದ ಕೂಡಿದೆ. ಇಲ್ಲಿ ಆಳ್ವಿಕೆ ಮಾಡಿದ ಅರಸುಮನೆತನಗಳು ರಾಜಕೀಯ, ಧಾರ್ಮಿಕ, ಸಾಹಿತ್ಯಿಕ, ಶಿಕ್ಷಣ, ಕಲೆ ಮತ್ತು ವಾಸ್ತುಶಿಲ್ಪಕ್ಕೆ ತಮ್ಮದೇ ಆದ ಸಾಂಸ್ಕೃತಿಕ ಕೊಡುಗೆಯನ್ನು ನೀಡಿದ್ದಾರೆ.

ಬ್ರಿಟಿಷರು ಸ್ಥಾಪಿಸಿದ್ದ ಹಳೆಯ ತಾಲೂಕು ಕಛೇರಿಯು ಹೂವಿನಹಡಗಲಿ ಪಟ್ಟಣದ ಹೃದಯ ಭಾಗದಲ್ಲಿ ಹಾಗೂ ಹಡಗಲಿಯಿಂದ ಹರಪನಹಳ್ಳಿಗೆ ಹೋಗುವ ಮಾರ್ಗದ ಬಲಭಾಗದಲ್ಲಿ ಪೂರ್ವಾಭಿಮುಖವಾಗಿ ಕಂಡುಬರುತ್ತದೆ. 'ತಾಲೂಕು ಕಛೇರಿಯ ಕಟ್ಟಡವು ೧೮೬೦ರಲ್ಲಿ, ೧೦ನೆಯ ವಾರ್ಡ್, ಡೋರ್ ನಂಬರ್ ೫೨೪ರಲ್ಲಿ, ೬೩೮.೦೦ ಚದರ ಅಡಿಗಳ ಭೂ ವಿಸ್ತೀರ್ಣದಲ್ಲಿ ನಿರ್ಮಾಣಗೊಂಡಿದೆ. ಈ ಕಟ್ಟಡವನ್ನು ೧೮,೩೮೪ ರೂಪಾಯಿಗಳ ವೆಚ್ಚದಲ್ಲಿ'[೨೬]

ಬೃಹದಾಕಾರವಾಗಿ ೨೮ ಡೋರಿಕ್ ಶೈಲಿಯ ಕಂಬಗಳನ್ನು ಅಳವಡಿಸಿ, ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಬ್ರಿಟಿಷ್ ಅಧಿಕಾರಿಗಳು ಒಂದೇ ಕಟ್ಟಡದಲ್ಲಿ ತಾಲೂಕು ಕಛೇರಿ, ನ್ಯಾಯಾಲಯ, ಪೊಲೀಸ್ ಠಾಣೆ, ಸಬ್-ಜೈಲ್, ಈ ಕಛೇರಿಯ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದರು. ಮೇಲಿನ ಎಲ್ಲಾ ಕಛೇರಿಗಳು ೨೦೦೮ರಲ್ಲಿ ಬೇರೆ ಬೇರೆ ಹೊಸ ಕಟ್ಟಡಗಳಿಗೆ ಸ್ಥಳಾಂತರಗೊಂಡಿವೆ. ಈ ಕಟ್ಟಡವು ಪಾಳುಬಿದ್ದ ಕಾರಣಕ್ಕಾಗಿ ಪ್ರಸ್ತುತ ಕಂದಾಯ ಇಲಾಖೆ, ರೇಷ್ಮೆ ಇಲಾಖೆ, ಗೃಹರಕ್ಷಕದಳ ಮತ್ತು ನಿವೃತ್ತಿ ನೌಕರರ ಸಂಗದ ಸದಸ್ಯರು ಕಾರ್ಯನಿರ್ವಹಿಸುತ್ತಿದ್ದಾರೆ.

ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್, ಗಾರೆ ಮತ್ತು ಸುಣ್ಣವನ್ನು ಬಳಸಿ, ಬಹಳ ಸರಳವಾಗಿ ಹಾಗೂ ಸುಂದರವಾಗಿ ನಿರ್ಮಿಸಿದ್ದಾರೆ. ಕಟ್ಟಡದ ಒಳಭಾಗಕ್ಕೆ ಸಾಕಷ್ಟು ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟ,ಕಿ ಬಾಗಿಲು ಮತ್ತು ಗಾರೆಯಿಂದ ಮಾಡಿದ ಜಾಲಂಧ್ರಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಪ್ರವೇಶ ದ್ವಾರವು ಹೂಬಳ್ಳಿಗಳಿಂದ ಆಲಂಕರಣೆಗೊಂಡಿದ್ದು, ಆಕರ್ಷಿಸುವ ಕಾಮಾನುನಿಂದ ವಿನ್ಯಾಸಗೊಳಿಸಿದ್ದಾರೆ. ಕಟ್ಟಡದ ಸುತ್ತಲೂ ಕಾಂಪೌಂಡ್ ನಿರ್ಮಿಸಿರುವುದು ಕಂಡುಬರುತ್ತದೆ.

**ಆದೋನಿ ತಾಲೂಕು ಕಛೇರಿ** : ಆದೋನಿಯು ಬಳ್ಳಾರಿಯಿಂದ ಈಶಾನ್ಯ ದಿಕ್ಕಿನಲ್ಲಿ ೯೬ ಕಿಲೋಮೀಟರ್ ದೂರದಲ್ಲಿದೆ. ಪ್ರಸ್ತುತ ಇದು ಕರ್ನೂಲು ಜಿಲ್ಲೆ ತೆಲಂಗಾಣ ರಾಜ್ಯ ವ್ಯಾಪ್ತಿಯಲ್ಲಿದೆ. ಇದಕ್ಕೂ ಪೂರ್ವದಲ್ಲಿ ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಪ್ರಮುಖ ತಾಲೂಕು ಆಡಳಿತ ಕೇಂದ್ರವಾಗಿತ್ತು. ಇದು ಪ್ರಾಚೀನ ಕಾಲದಿಂದಲೂ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಏಕೆಂದರೆ ಇಲ್ಲಿನ ಮಣ್ಣು ಕಪ್ಪು ಮಿಶ್ರಿತ ಆಗಿರುವುದರಿಂದ ವಾಣಿಜ್ಯ ಬೆಳೆಯುವುದಕ್ಕೆ ಯೋಗ್ಯ ಭೂಮಿ ಇದಾಗಿತ್ತು. ಇದರ ಜೊತೆಗೆ ತುಂಗಭದ್ರಾ ನದಿಯ ನೀರು ಕಾಲುವೆಯ ಮೂಲಕ ಹರಿಯುತ್ತಿರುವುದರಿಂದ ಇಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದರು. ಇಂತಹ ಫಲವತ್ತತೆಯ ಭೂಮಿಯನ್ನು ಹೊಂದಿದ್ದ ಭೂ ಪ್ರದೇಶವು ಹೈದರಾಬಾದ್ ನಿಜಾಮ್‌ನಿಂದ ಬ್ರಿಟಿಷರ ವ್ಯಾಪ್ತಿಗೆ ಒಳಪಟ್ಟಾಗ ಅವರು ಇಲ್ಲಿ ತಮ್ಮ ಅನುಕೂಲಕ್ಕೆ ತಕ್ಕ ಹಾಗೆ ಸಿದ್ಧಪಡಿಸಿಕೊಂಡರು. ಇಲ್ಲಿ ಬ್ರಿಟಿಷರು ಪ್ರಮುಖವಾಗಿ ತಾಲೂಕು ಕಛೇರಿ, ಪೊಲೀಸ್ ಠಾಣೆ, ರೈಲ್ವೆಸ್ಟೇಷನ್, ನ್ಯಾಯಾಲಯ, ಶಿಕ್ಷಣ ಸಂಸ್ಥೆಗಳು, ಪರಿವೀಕ್ಷಣಾ ಬಂಗಲೆ ಇತ್ಯಾದಿ ಕಟ್ಟಡಗಳನ್ನು ನಿರ್ಮಿಸಿ ಕೊಂಡಿದ್ದರು.

ತಾಲೂಕು ಕಛೇರಿಯ ಕಟ್ಟಡವು ಆದೋನಿ ಪಟ್ಟಣದ ಮಧ್ಯಭಾಗದಲ್ಲಿದೆ. ಇದು ನಾಲ್ಕು ಎಕರೆ ಭೂ ವಿಸ್ತೀರ್ಣದ ವಿಶಾಲ ಆವರಣದ ಮಧ್ಯಭಾಗದಲ್ಲಿ ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ದಕ್ಷಿಣಾಭಿಮುಖವಾಗಿ ೧೮೬೫ರಲ್ಲಿ ನಿರ್ಮಾಣಗೊಂಡಿದೆ. ಕಟ್ಟಡದ ತಳವಿನ್ಯಾಸವು L ಆಕಾರದಲ್ಲಿ ಚಚ್ಚೌಕವಾಗಿದ್ದು, ಅದು ಉದ್ದಕ್ಕಿಂತ ಅಗಲ ಹೆಚ್ಚಾಗಿರುವುದು

ಕಂಡುಬಂದಿದೆ. ಈ ಕಟ್ಟಡದಲ್ಲಿ ವಿಶಾಲವಾದ ಕೊಠಡಿಗಳನ್ನು ಹೊಂದಿದ್ದು ಪ್ರತಿಯೊಂದು ಕೊಠಡಿಗೂ ಸಾಕಷ್ಟು ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳನ್ನು ಅಳವಡಿಸಿರುವುದು ಕಾಣಬಹುದು. ಇದರ ಮೇಲ್ಛಾವಣಿಯು ಹೆಂಚಿನ ಇಳಿಜಾರು ಛಾವಣಿಯಿಂದ ಕೂಡಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚು, ಗಾರೆ ಮತ್ತು ಸುಣ್ಣವನ್ನು ಬಳಸಿ ಕಟ್ಟಲಾಗಿದೆ.

**ರಾಯದುರ್ಗ ತಾಲೂಕು ಕಛೇರಿ** : ರಾಯದುರ್ಗ ತಾಲೂಕು ಬಳ್ಳಾರಿಯಿಂದ ಆಗ್ನೇಯ ದಿಕ್ಕಿನಲ್ಲಿ ೫೮ ಕಿಲೋಮೀಟರ್ ದೂರದಲ್ಲಿದೆ. ಇದರ ಭೌಗೋಳಿಕ ವಿಸ್ತೀರ್ಣವು ೩೩.೫೨೩ ಹೊಂದಿದ್ದು, ೧೯೦೧ರ ಜನಗಣತಿಯ ಪ್ರಕಾರ ೧೦.೪೮೮ ಜನಸಂಖ್ಯೆಯನ್ನು ಹೊಂದಿತ್ತು. ಪ್ರಸ್ತುತ ೪ ಹೋಬಳಿಗಳು, ೧೫ ರೆವಿನ್ಯೂ ಗ್ರಾಮಗಳು, ೧೨ ಗ್ರಾಮ ಪಂಚಾಯಿತ್‌ಗಳನ್ನು ಒಳಗೊಂಡಿದೆ. ರಾಯದುರ್ಗ ಮಂಡಲವು ಪೂರ್ವದಲ್ಲಿ ಬೆಳಗುಪ್ಪ ಮಂಡಲಂ, ಪಶ್ಚಿಮದಲ್ಲಿ ಕರ್ನಾಟಕದ ಸರಿಮಾದ್ದುಲು, ಉತ್ತರದಲ್ಲಿ ದಂಡಿನ ಪೆರ್‌ಮಾಳ್ ಮಂಡಲಂ, ದಕ್ಷಿಣದಲ್ಲಿ ಗುಮ್ಮಪುಟ್ಟ ಮಂಡಲಂ ವ್ಯಾಪ್ತಿಯ ಸರಹದ್ದನ್ನು ಹೊಂದಿದೆ. ಇದು ಅನಂತಪುರ ಜಿಲ್ಲೆ, ರಾಯಲ್‌ಸೀಮಾ ರಾಜ್ಯದ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಇದಕ್ಕೂ ಪೂರ್ವದಲ್ಲಿ ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯ ಮೊದಲ ಕಲೆಕ್ಟರ್ ಆಗಿದ್ದ ಥಾಮಸ್ ಮನ್ರೋ ರಾಯದುರ್ಗ ಪಾಳೆಯಗಾರರನ್ನು ಹತ್ತಿಕ್ಕಿ ಅವರಿಗೆ ಮಾಶಾಸನ ನೀಡಲ್ಪಟ್ಟನು. ಅಂದು ಈ ತಾಲೂಕನ್ನು ಬ್ರಿಟಿಷರು ಅನುಕೂಲಕ್ಕಾಗಿ ಬಳಸಿಕೊಂಡರು. ಆಡಳಿತದ ಅನುಕೂಲಕ್ಕಾಗಿ ತಾಲೂಕು ಕಛೇರಿ, ಪೊಲೀಸ್ ಠಾಣೆ, ಸಬ್-ಜೈಲ್, ನ್ಯಾಯಾಲಯ, ಪ್ರಾಥಮಿಕ ಶಾಲೆ, ಪರಿವೀಕ್ಷಣಾ ಮಂದಿರವನ್ನು ಐರೋಪ್ಯ ವಾಸ್ತುಶೈಲಿಯಲ್ಲಿ ನಿರ್ಮಿಸಿಕೊಂಡು ಆಳ್ವಿಕೆ ಮಾಡಿರುವುದು ಕಂಡುಬಂದಿದೆ.

ರಾಯದುರ್ಗ ಪಟ್ಟಣದಿಂದ ಅನಂತಪುರಕ್ಕೆ ಹೋಗುವ ಮಾರ್ಗದ ಎಡಭಾಗದಲ್ಲಿ ಸಾಯಿಬಾಬ ದೇವಾಲಯವಿದೆ. ಈ ದೇವಸ್ಥಾನದ ಎದುರುಗಡೆ ಕಂಡು ಬರುವುದೇ ಹಳೆಯ ತಾಲೂಕು ಕಛೇರಿ. ಇದು ಒಂದು ಎಕರೆ ಭೂ ವಿಸ್ತೀರ್ಣ ಪ್ರದೇಶದ ಮಧ್ಯಭಾಗದಲ್ಲಿ ಪಶ್ಚಿಮಾಭಿಮುಖವಾಗಿ ಕಾಣುತ್ತದೆ. ಇಲ್ಲಿ 'ಮೊಟ್ಟ ಮೊದಲು ೦೧-೦೧-೧೯೧೦ರಲ್ಲಿ ರೆವಿನ್ಯೂ ಡಿವಿಜನ್‌ನ್ನು ಸ್ಥಾಪಿಸಲಾಯಿತು'.[೨೭] ಈ ಇಲಾಖೆಯ ಮೂಲಕ ಇಲ್ಲಿನ ರೈತರಿಂದ ಕಂದಾಯ ಸಂಗ್ರಹಣೆ ಮಾಡುತ್ತಿದ್ದರು. ಇದರ ಮೇಲುಸ್ತುವಾರಿಗಾಗಿ 'ಬಳ್ಳಾರಿ ಜಿಲ್ಲಾ ಬೋರ್ಡ್ ಅಧಿನಿಯಮ ೦೧-೦೪-೧೯೧೧ರ ಪ್ರಕಾರ ರಾಯದುರ್ಗ ತಾಲೂಕು ಬೋರ್ಡ್‌ನ್ನು ಸ್ಥಾಪಿಸಲಾಯಿತು'.[೨೮] ಇದರನ್ವಯ ತಾಲೂಕು ಕಛೇರಿಯ ಕಟ್ಟಡದ ನಿರ್ಮಾಣ ಕಾರ್ಯವು ೧೯೧೧ರಂದು ಪ್ರಾರಂಭಗೊಂಡು ೧೯೧೬ರಲ್ಲಿ ಪೂರ್ಣಗೊಂಡಿತ್ತು. ಈ ಹೊಸ ಕಟ್ಟಡದಲ್ಲಿ ಕಾರ್ಯನಿರ್ವಹಿಸಿದ 'ಏಳನೆಯ ವರ್ಗದ ಅಧಿಕಾರಿಯಾಗಿ ಬಿ. ರಂಗನಾಥರಾವ್, ಹತ್ತನೆಯ ವರ್ಗದ ಕ್ಲರ್ಕ್ ಆಗಿ

ಡಬ್ಲ್ಯೂ ನೆಮಕಲ್‌ರಾವ್, ಅಚೇಂದ್ರು ಆಗಿ ಎಂ. ಯಲ್ಲಪ್ಪ[೨೫] ಇತ್ಯಾದಿ ಅಧಿಕಾರಿಗಳು ಕಾರ್ಯನಿರ್ವಹಿಸಿದರು.

ತಾಲೂಕು ಕಛೇರಿಯ ಕಟ್ಟಡದ ತಳವಿನ್ಯಾಸವು L ಆಕಾರದಲ್ಲಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಕಟ್ಟಲ್ಪಟ್ಟಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಹಾಸುಬಂಡೆ, ಕಬ್ಬಿಣ, ಮರದ ತೀರು, ಗಾರೆ, ಸುಣ್ಣ, ಮಂಗಳೂರು ಹೆಂಚ್‌ನ್ನು ಬಳಸಿ ಕಟ್ಟಿರುವುದು ಕಂಡುಬರುತ್ತದೆ. ಕಟ್ಟಡದ ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳನ್ನು ಅಳವಡಿಸಿರುವುದು ಕಾಣಬಹುದಾಗಿದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿದೆ.

**ಆಲೂರು ತಾಲೂಕು ಕಛೇರಿ :** ಆಲೂರು ತಾಲೂಕು ಬಳ್ಳಾರಿಯಿಂದ ಈಶಾನ್ಯ ದಿಕ್ಕಿಗೆ ೫೬ ಕಿಲೋಮೀಟರ್ ದೂರದಲ್ಲಿದೆ. ಪ್ರಸ್ತುತ ಈ ತಾಲೂಕು ಕರ್ನೂಲ್ ಜಿಲ್ಲೆ, ತೆಲಂಗಾಣ ರಾಜ್ಯದ ವ್ಯಾಪ್ತಿಯಲ್ಲಿದ್ದು, ಐದು ಮಂಡಲ, ೬೬ ಗ್ರಾಮ ಪಂಚಾಯಿತಿಗಳು, ೯೪ ಗ್ರಾಮಗಳನ್ನು ಒಳಗೊಂಡಿದೆ. ಇದಕ್ಕೂ ಪೂರ್ವದಲ್ಲಿ ಬಳ್ಳಾರಿ ಜಿಲ್ಲೆಯ ಒಂಬತ್ತು ತಾಲೂಕುಗಳಲ್ಲಿ ಇದು ಒಂದಾಗಿತ್ತು. ಆಲೂರು ೧೮೦೦ರ ಕಾಲಾವಧಿಯಲ್ಲಿ ಒಂದು ಚಿಕ್ಕ ಗ್ರಾಮವಾಗಿತ್ತು. ಬ್ರಿಟಿಷರಿಗೆ ಇದು ಆಯಾಕಟ್ಟಿನ ಪ್ರದೇಶವಾಗಿದ್ದು ಕಾರಣಕ್ಕಾಗಿ ಅದನ್ನು ತಾಲೂಕನ್ನಾಗಿ ರಚಿಸಿ, ಅಲ್ಲಿ ತಮಗೆ ಅನುಕೂಲತೆಗೆ ತಕ್ಕ ಹಾಗೆ ಆಡಳಿತ ವಿಭಾಗಗಳನ್ನು ಸ್ಥಾಪಿಸಿಕೊಂಡು ಆಳ್ವಿಕೆ ಮಾಡಿರುವುದು ಇವುಗಳಿಂದ ನಮಗೆ ದೃಢಪಟ್ಟಿದೆ.

ಆಲೂರು ತಾಲೂಕು ಕಛೇರಿಯ ಕಟ್ಟಡವು ೧೮೬೫ರಲ್ಲಿ ಸ್ಥಾಪನೆಗೊಂಡಿದೆ. ಇದು ಪಟ್ಟಣದ ಮಧ್ಯಭಾಗದಲ್ಲಿದ್ದು, ೨೫ ಸೆಂಟ್ಸ್ ವಿಸ್ತೀರ್ಣದಲ್ಲಿ ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಈ ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದೆ. ಇದು ಒಂಬತ್ತು ಕೊಠಡಿಗಳನ್ನು ಒಳಗೊಂಡಿದೆ. ಆರಂಭದಲ್ಲಿ ತಾಲೂಕು ಕಛೇರಿ, ಕಂದಾಯ ಇಲಾಖೆ, ಪೊಲೀಸ್ ಠಾಣೆ, ಸಬ್ ಜೈಲು, ಇತ್ಯಾದಿ ಇಲಾಖೆಗಳು ಕಾರ್ಯನಿರ್ವಹಿಸಿವೆ. ನಂತರ ಅವು ಸ್ಥಳಾಂತರಗೊಂಡಿವೆ. ಆದರೆ, ತಾಲೂಕು ಕಛೇರಿ ಮಾತ್ರ ಪ್ರಸ್ತುತವೂ ಇದೆ. ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. ಈ ಕಟ್ಟಡದಲ್ಲಿರುವ ಒಂಬತ್ತು ಕೊಠಡಿಗಳಿಗೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸೂಚಿಸಲು ಹೆಚ್ಚು ಹೆಚ್ಚು ಕಿಟಕಿ, ಬಾಗಿಲುಗಳನ್ನು ಅಳವಡಿಸಿರುವುದು ಕಂಡುಬಂದಿದೆ. ಪ್ರತಿಯೊಂದು ಕೊಠಡಿಯಲ್ಲಿ ಬ್ರಿಟಿಷ್ ಅಧಿಕಾರಿಗಳು ಬಳಸಿರುವ ಕುರ್ಚಿ, ಟೇಬಲ್, ಮರದ ಪೆಟ್ಟಿಗೆಗಳು ಇಂದಿಗೂ ಇವೆ. ಅವುಗಳಲ್ಲಿ ಕೆಲವು ಹಾಳಾಗಿವೆ. ಇನ್ನೂ ಕೆಲವು ಸಲಕರಣೆಗಳನ್ನು ಪ್ರಸ್ತುತವೂ ಬಳಸುತ್ತಿರುವುದು ಗಮನಾರ್ಹ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಿಸಲಾಗಿದೆ. ಕಟ್ಟಡದ ಪ್ರವೇಶ ದ್ವಾರದ ಮೇಲ್ಛಾಣಿಯು ಅರ್ಧ ವೃತ್ತಾಕಾರವಾಗಿದೆ.

ಇದರ ಮೇಲೆ ಹೂ ಬಳ್ಳಿಯ ಚಿತ್ರಗಳಿವೆ. ಇದರ ಮುಂಭಾಗದಲ್ಲಿ ಹಜಾರವಿದೆ. ಈ ಹಜಾರದಲ್ಲಿ ಡೋರಿಕ್ ಶೈಲಿಯ ಎಂಟು ಕಂಬಗಳು ಕಂಡುಬರುತ್ತವೆ. ಈ ಕಂಬಗಳು ಇಡೀ ಕಟ್ಟಡದ ಭಾರವನ್ನು ಹೊತ್ತುಕೊಂಡಿವೆ ಎನ್ನುವ ಹಾಗೆ ಕಾಣುತ್ತೇವೆ. ಇದರ ಮೇಲ್ಛಾವಣಿಯು ಮರದ ತೀರುಗಳನ್ನು ಹಾಸಿ ಅದರ ಮೇಲೆ ಮಂಗಳೂರು ಹೆಂಚ್‌ನ್ನು ಹೊದ್ದಿಸಿರುವುದು ಕಂಡುಬರುತ್ತವೆ. ಕಟ್ಟಡದ ಮುಂಭಾಗದಲ್ಲಿ ವಾಯುವ್ಯ ದಿಕ್ಕಿನಲ್ಲಿ ಒಂದು ಸಮಾಧಿ ಇದೆ. ಆರಂಭದಲ್ಲಿ ಸಿವಿಲ್ ನ್ಯಾಯಾಲಯವು ತಾಲೂಕು ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಂತಹ ಸಂದರ್ಭದಲ್ಲಿ ದಿವಂಗತ ಧರ್ಮವರಂ ಕೃಷ್ಣಂ ಚಾರ್ಲುರವರು ಈ ತಾಲೂಕಿನಲ್ಲಿ ಹಿರಿಯ ವಕೀಲರು, ಸಾಹಿತಿಗಳು ಆಗಿದ್ದರು. ಇವರು ಈ ನ್ಯಾಯಾಸ್ಥಾನದಲ್ಲಿ ಇನ್ನೊಬ್ಬರ ಪರವಾಗಿ ವಕಾಲತ್ತು ಮಾಡುವ ಸಂದರ್ಭದಲ್ಲಿ ಅಲ್ಲಿಯೇ ಕುಸಿದು ಬಿದ್ದು ೩೦ ನವೆಂಬರ್ ೧೯೧೨ರಲ್ಲಿ ಸಾವನಪ್ಪಿದರು. ಇದರ ಸ್ಮರಣಾರ್ಥವಾಗಿ ಸಮಾಧಿಯನ್ನು ಕಛೇರಿಯ ಮುಂಭಾಗದಲ್ಲಿ ಕಟ್ಟಲಾಗಿದೆ. ಇದು ಪ್ರಸ್ತುತವೂ ಸಂರಕ್ಷಣೆಯಲ್ಲಿದೆ. ಪ್ರಸ್ತುತ ಅವಧಿಯಲ್ಲಿ ಸುತ್ತಲೂ ಕಾಂಪೌಂಡು ಕಂಡುಬರುತ್ತದೆ. ಆದರೆ, ಅದು ಒಡೆದು ಹಾಳಾಗಿದೆ. ಈ ಮೇಲಿನ ಎಲ್ಲಾ ಮಾಹಿತಿಯನ್ನು ತಹಶೀಲ್ದಾರ್‌ರಾದ ವಿ.ಎಸ್. ಪ್ರಸಾದ್ ಮತ್ತು ಡಿ. ಮಾಬು ಸುಬ್ಬಣ್ಣರಾವ್ ಅವರಿಂದ ಪಡೆಯಲಾಗಿದೆ.

**ಸಬ್ ರಿಜಿಸ್ಟ್ರೀ ಕಛೇರಿ - ಆಲೂರು**

ಸಬ್ ರಿಜಿಸ್ಟ್ರೀ ಕಛೇರಿಯು ಬಳ್ಳಾರಿಯಿಂದ ಆಲೂರು ಬಸ್ಸ್ಟ್ಯಾಂಡ್‌ಗೆ ಹೋಗುವ ಮಾರ್ಗದ ಎಡಭಾಗದಲ್ಲಿ ಪೂರ್ವಾಭಿಮುಖವಾಗಿದೆ. ಈ ಕಟ್ಟಡವು ೩೩.೮ ಸೆಂಟ್ಸ್ ವಿಸ್ತೀರ್ಣದಲ್ಲಿ ೧೮೯೭ರಲ್ಲಿ ಆರಂಭಗೊಂಡಿದೆ. ಈ ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಇದು ಕೇವಲ ಎರಡು ಕೊಠಡಿಗಳನ್ನು ಒಳಗೊಂಡಿದೆ. ಪ್ರತಿಯೊಂದು ಕೊಠಡಿಯು ವಿಶಾಲವಾಗಿದ್ದು, ಕೊಠಡಿಗಳ ಒಳಭಾಗಕ್ಕೆ ಬೆಳಕು ಮತ್ತು ಗಾಳಿ ಒಳಸೂಸಿಲು ಕಿಡಕಿ ಹಾಗೂ ಬಾಗಿಲುಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಇದರ ಮೇಲ್ಛಾವಣಿಯು ಆರ್.ಸಿ.ಸಿ.ನ್ನು ಹೊಂದಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಮರದ ತೀರು, ಕಬ್ಬಿಣ, ಹಾಸುಬಂಡೆಗಳು, ಗಾರೆಯನ್ನು ಬಳಸಿರುವುದು ಕಂಡುಬಂದಿದೆ. ಕಟ್ಟಡದ ಸುತ್ತಲೂ ಕಾಂಪೌಂಡನ್ನು ನಿರ್ಮಿಸಿದ್ದು, ಅದು ಪ್ರಸ್ತುತವು ಕಂಡು ಬರುತ್ತದೆ. ಈ ಮೇಲಿನ ಎಲ್ಲಾ ಮಾಹಿತಿಯನ್ನು ಸುನಂದ ಎನ್. ಅವರಿಂದ ಪಡೆಯಲಾಗಿದೆ.

**ತಾಲೂಕು ಕಛೇರಿ - ಕೂಡ್ಲಿಗಿ**

ಕೂಡ್ಲಿಗಿ ಪಟ್ಟಣದ ಹೃದಯ ಭಾಗದಲ್ಲಿ ಮತ್ತು ಕೂಡ್ಲಿಗಿಯಿಂದ ಗುಡೇಕೋಟೆಗೆ ಹೋಗುವ ಮಾರ್ಗದ ಎಡಭಾಗದಲ್ಲಿ ದಕ್ಷಿಣಾಭಿಮುಖವಾಗಿರುವುದೇ ತಾಲೂಕು ಕಛೇರಿ. ಇದು ಕ್ರಿ.ಶ. ೧೯೧೬ರಲ್ಲಿ ನಿರ್ಮಾಣಗೊಂಡಿದೆ ಎಂದು ಪ್ರಸ್ತುತ ತಹಶೀಲ್ದಾರ್ ಆಗಿರುವ ಕೃಷ್ಣಮೂರ್ತಿ ಅವರ ಅಭಿಪ್ರಾಯವಾಗಿದೆ. ಕ್ರಿ.ಶ. ೧೯೧೦ರಲ್ಲಿ ಈ ಕಛೇರಿಯು ನಿರ್ಮಾಣಗೊಂಡಿದೆ

ಎಂದು ತಾಲೂಕಿನಲ್ಲಿರುವ ಕಾರ್ಯನಿರ್ವಾಹಕ ಅಭಿಯಂತರ ಕಛೇರಿಯ ದೊರೆತ ಕಡದಿಂದ ದೃಢಪಟ್ಟಿದೆ. ಇದರ ಬಗ್ಗೆ ನನಗೆ ಗೊಂದಲ ಉಂಟಾಯಿತು. ಹಾಗಾಗಿ ನಾನು ಚನ್ನೈನ ಎಗ್ಮೋರ್‌ನಲ್ಲಿರುವ ರಾಜ್ಯ ಪತ್ರಾಗಾರ ಇಲಾಖೆಗೆ ಭೇಟಿ ನೀಡಿ ಬಳ್ಳಾರಿ ಜಿಲ್ಲೆಗೆ ಸಂಬಂಧಪಟ್ಟ ಪತ್ರಗಳನ್ನು ಪರಿಶೀಲಿಸಿದಾಗ ಕೂಡ್ಲಿಗಿ ತಾಲೂಕಿನ ಸಬ್-ರಿಜಿಸ್ಟ್ರೀ ಆಫೀಸ್ ಬಗ್ಗೆ ಈ ರೀತಿ ಮಾಹಿತಿ ದೊರಕಿದೆ. ಗೆಜೆಟ್ ಆದೇಶ ಸಂಖ್ಯೆ ೧೫೪೯, ನ್ಯಾಯಿಕ, ದಿನಾಂಕ ೧೨ ಅಕ್ಟೋಬರ್ ೧೯೦೩ರಲ್ಲಿ ನಮೂದಿಸಿರುವಂತೆ ವಿಶೇಷ ಉಪನೋಂದಣಾಧಿಕಾರಿಯ ಅಧೀನದಲ್ಲಿ ಖಾಸಗಿ ಕಟ್ಟಡವನ್ನು ೧೮೭೨ರಲ್ಲಿ ಖರೀದಿಸಿ ಅದರಲ್ಲಿ ಕಾರ್ಯನಿರ್ವಹಿಸಲಾಗುತ್ತಿತ್ತು. ಇದಕ್ಕೆ ಪ್ರತಿ ತಿಂಗಳು ೧೪೫ ರೂಪಾಯಿಗಳನ್ನು ಬಾಡಿಗೆ ನೀಡಲಾಗುತ್ತಿತ್ತು.[೫೦] ಈ ಕಟ್ಟಡವು ಮಳೆ ಬಂದರೆ ಸೋರುತ್ತಿತ್ತು. ಇದರ ಜೊತೆಗೆ ಇಲಿಗಳ ಹಾವಳಿಯಿಂದ ಸರಕಾರದ ಕಡತಗಳು ಹಾಳಾಗುತ್ತಿದ್ದವು. ಇದಕ್ಕಾಗಿ ಹೊಸ ಸರಕಾರ ಕಟ್ಟಡ ಒದಗಿಸುವುದು ಅವಶ್ಯಕವಾಗಿತ್ತು. ಬಳ್ಳಾರಿ ಕಲೆಕ್ಟರ್ ಜಿ.ಎ. ಕಯಿಂಗ್ ಅವರು ಕಮಿಷನರ್ ಭೂಕಂದಾಯ ಕಾರ್ಯದರ್ಶಿ ಮದರಾಸ್ ಅವರಿಗೆ ಪತ್ರ ಬರೆದರು. ಈ ಪತ್ರದಲ್ಲಿ ಕೂಡ್ಲಿಗಿ ಪಟ್ಟಣದಲ್ಲಿರುವ ತಾಲೂಕು ಕಛೇರಿಯ ಕಟ್ಟಡವು ಹಳೆಯ ವಿನ್ಯಾಸಾಧಾರಿತವಾಗಿದ್ದು, ಅಲ್ಲಿನ ಅಧಿಕಾರಿಗಳಿಗೆ ಅತ್ಯಂತ ಚಿಕ್ಕದಾಗಿದೆ ಎಂದು ಗೌರವಪೂರ್ವಕವಾಗಿ ತಿಳಿಸಲಿಚ್ಛಿಸುತ್ತೇನೆ. ತಹಶೀಲ್ದಾರ ಹಾಗೂ ಉಪನ್ಯಾಯಾಧೀಶರಿಗೆ ಒದಗಿಸಿರುವ ವಸತಿ ಸೌಕರ್ಯವು ಸಮರ್ಪಕವಾಗಿಲ್ಲ ಹಾಗೂ ಕಡತಗಳಿಗೆ ವ್ಯವಸ್ಥಿತವಾದ ಕೊಠಡಿ ಇಲ್ಲದೆ ಪರದಾಡುವಂತಾಗಿದೆ. ಆದುದರಿಂದ ಮಂಡಳಿಯು ಸರಕಾರದಿಂದ ತಹಶೀಲ್ದಾರರಿಗೆ ಮತ್ತು ಉಪನ್ಯಾಯಾಧೀಶರು ಹಾಗೂ ಅವರ ಸಿಬ್ಬಂದಿಗೆ ಸಂಖ್ಯೆ ೭೨೫ ಡಬ್ಲ್ಯೂ ೨ ಮಾರ್ಚ್ ೧೯೦೪, ಬಿ.ಪಿ. ಸಂಖ್ಯೆ ೧೧೮ ಎಲ್.ಆರ್. ದಿನಾಂಕ ೧೫-೦೬-೧೯೦೪ರಲ್ಲಿ ಉಲ್ಲೇಖಿಸಿರುವ ನೂತನ ವಿನ್ಯಾಸದ ಕಟ್ಟಡ ನಿರ್ಮಾಣಕ್ಕೆ ಅನುಮೋದನೆಯನ್ನು ನೀಡಬೇಕೆಂದು ಗೌರವ ಪೂರ್ವಕವಾಗಿ ವಿನಂತಿಸುತ್ತೇನೆ[೫೧] ಎಂದು ಕೋರಿದರು.

ಈ ಪತ್ರವನ್ನು ಸ್ವೀಕರಿಸಿದ ಗೌರವಾನ್ವಿತ ಶ್ರೀ ಸಿ.ಜೆ. ಮೈರ್, ಕಮಿಷನರ್ ಭೂಕಂದಾಯ ಇಲಾಖೆ ಮದರಾಸ್, ಅವರು ಪತ್ರದಲ್ಲಿರುವ ಮಾಹಿತಿಯನ್ನು ಪರಿಶೀಲಿಸಿ ಗೆಜೆಟ್ ಆದೇಶ ಸಂಖ್ಯೆ ೧೧೩೬ ಡಬ್ಲ್ಯೂ, ದಿನಾಂಕ ೧೫-೧೦-೧೯೧೯ರಂದು ಕ್ರಿಯಾ ಯೋಜನೆಯಲ್ಲಿ ಈ ಕಾಮಗಾರಿಗೆ ೧೧,೬೦೦ ರೂಪಾಯಿ ಅಂದಾಜು ವೆಚ್ಚದಲ್ಲಿ ನೂತನ ಸಬ್ ರಿಜಿಸ್ಟ್ರಿ ಕಟ್ಟಡ ನಿರ್ಮಾಣಕ್ಕೆ ಅನುಮೋದನೆಯನ್ನು ನೀಡುತ್ತಾರೆ.[೫೨] ಈ ಮೇಲಿನ ಮಾಹಿತಿಯ ಪ್ರಕಾರ ಕೂಡ್ಲಿಗಿ ತಾಲೂಕು ಕಛೇರಿಯ ೧೮೭೨ರಲ್ಲಿ ಖಾಸಗಿ ಕಟ್ಟಡದಲ್ಲಿ ಕಾರ್ಯನಿರ್ವಹಿಸಿ, ೧೯೧೯ರಲ್ಲಿ ಹೊಸ ಕಟ್ಟಡ ಆರಂಭಗೊಂಡಿದೆ. ಈ ಕಟ್ಟಡವು ಇಂದು ಶತಮಾನ ಕಂಡ ಕಟ್ಟಡವಾಗಿದ್ದು, ಪ್ರಸ್ತುತ ಇದೇ ಕಟ್ಟಡದಲ್ಲಿ ತಾಲೂಕು ಕಛೇರಿಯು ಕಾರ್ಯನಿರ್ವಹಿಸುತ್ತಿದೆ. ಆದರೆ, ಮಳೆ ಬಂದರೆ ಸಂಪೂರ್ಣವಾಗಿ ಕಟ್ಟಡವು ಸೋರುತ್ತಿದ್ದರಿಂದ ಇಲ್ಲಿನ ದಾಖಲೆಗಳನ್ನು ರಕ್ಷಿಸಿಕೊಳ್ಳುವುದೇ ಸಿಬ್ಬಂದಿಗೆ ತಲೆನೋವಾಗಿದೆ.

ಹಳೆ ತಾಲೂಕು ಕಛೇರಿಯ ನೈರುತ್ಯ ದಿಕ್ಕಿನಲ್ಲಿ, ಪೂರ್ವಾಭಿಮುಖವಾಗಿ ಭೂಪಾನ ಕೇಂದ್ರದ ಕಟ್ಟಡವಿದೆ. ಇದು ಸಹ ೧೯೦೯ರಲ್ಲಿ ನಿರ್ಮಾಣಗೊಂಡಿದೆ. ಪ್ರಸ್ತುತ ಕಟ್ಟಡವು ಕುಸಿಯುವ ಹಂತದಲ್ಲಿದೆ. ಇದರಲ್ಲಿ ಅಗತ್ಯವಾದ ಭೂ ದಾಖಲೆಗಳನ್ನು ಇಟ್ಟಿದ್ದು, ಅವುಗಳಿಗೆ ರಕ್ಷಣೆ ಇಲ್ಲದೆ ಇರುವುದು ಕಾಣಬಹುದು. ಮಳೆಗಾಲದಲ್ಲಿ ಮಳೆಯ ನೀರಿನಿಂದ ಕಡತಗಳನ್ನು ರಕ್ಷಿಸಲು ಸಿಬ್ಬಂದಿ ಹರಸಾಹಸ ಮಾಡುತ್ತಿದ್ದಾರೆ. ಕಟ್ಟಡದಲ್ಲಿರುವ ದಾಖಲೆಗಳನ್ನು ಮಳೆನೀರಿನಿಂದ ರಕ್ಷಿಸಿಕೊಳ್ಳಲು ಛಾವಣಿ ಮತ್ತು ಕಪಾಟುಗಳಿಗೆ ಪ್ಲಾಸ್ಟಿಕ್ ಹೊದಿಕೆ ಹಾಕಲಾಗಿದೆ. ಇದರ ಛಾವಣಿಯ ಮೇಲೆ ಗಿಡಗಳು ಬೆಳೆದಿದ್ದು, ಬೇರುಗಳು ಕಟ್ಟಡದ ಒಳಭಾಗದಲ್ಲಿ ಹರಡಿಕೊಂಡಿವೆ. ಇದರಿಂದ ಕಟ್ಟಡದ ಒಂದು ಭಾಗದ ಮೇಲ್ಛಾವಣಿಯು ಕುಸಿಯುವ ಹಂತದಲ್ಲಿದ್ದ, ಕಾರಣಕ್ಕಾಗಿ ಇಲ್ಲಿನ ಸಿಬ್ಬಂದಿ ಹಳೆ ಜೈಲು ಆವರಣದಲ್ಲಿ ಕುಳಿತು ಕಾರ್ಯನಿರ್ವಹಿಸುತ್ತಿದ್ದಾರೆ. ಕಟ್ಟಡಕ್ಕೆ ಬರ್ಮಾದಿಂದ ತರಿಸಿದ ತೇಗ ಮರದ ತೀರುಗಳು, ಮಂಗಳೂರು ಹೆಂಚು, ಕಬ್ಬಿಣ, ಕಲ್ಲು, ಇಟ್ಟಿಗೆ, ಗಾರೆ, ಬಣ್ಣದ ಗಾಜನ್ನು ಕಿಟಕಿಗಳಿಗೆ ಅಳವಡಿಸಿ ನಿರ್ಮಾಣಗೊಂಡಿದೆ.

**ಸಿರುಗುಪ್ಪ ತಾಲೂಕು ಕಛೇರಿ** : ಬಳ್ಳಾರಿ ಜಿಲ್ಲೆಯ ತಾಲೂಕು ಕೇಂದ್ರವಾದ ಸಿರುಗುಪ್ಪ ಬಳ್ಳಾರಿಯಿಂದ ೫೬ ಕಿಲೋಮೀಟರ್ ದೂರದಲ್ಲಿದೆ. ಇದರ ದಕ್ಷಿಣದಲ್ಲಿ ಬಳ್ಳಾರಿ, ನೈರುತ್ಯದಲ್ಲಿ ಹೊಸಪೇಟೆ, ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆಯ ಗಂಗಾವತಿ ಮತ್ತು ರಾಯಚೂರು ಜಿಲ್ಲೆಯ ಸಿಂಧನೂರು, ಉತ್ತರ ಮತ್ತು ಪೂರ್ವದಲ್ಲಿ ಆಂಧ್ರಪ್ರದೇಶವೂ ಈ ತಾಲೂಕನ್ನು ಸುತ್ತುವರಿದಿದೆ. ಬ್ರಿಟಿಷರು ಸಿರುಗುಪ್ಪವನ್ನು ತಾಲೂಕು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ತಮಗೆ ಅನುಕೂಲಕ್ಕೆ ತಕ್ಕ ಹಾಗೆ ಅವರು ಇಲ್ಲಿ ತಮ್ಮ ಐರೋಪ್ಯ ವಾಸ್ತುಶೈಲಿಯಲ್ಲಿ ಕಟ್ಟಡಗಳನ್ನು ನಿರ್ಮಿಸಿಕೊಂಡು ಆಳ್ವಿಕೆ ಮಾಡಿರುವುದು ಕಂಡುಬಂದಿದೆ.

ಹಳೆಯ ತಾಲೂಕು ಕಛೇರಿಯು ಸಿರುಗುಪ್ಪದಿಂದ ಆದೋನಿಗೆ ಹೋಗುವ ಮಾರ್ಗದ ಎಡಭಾಗದಲ್ಲಿ, ದಕ್ಷಿಣಾಭಿಮುಖವಾಗಿ ಕಂಡುಬರುತ್ತದೆ. ಇದು ಸರ್ವೇ ನಂ. ೧೮೧೬ರಲ್ಲಿ ನಾಲ್ಕು ಎಕರೆ ಭೂ ವಿಸ್ತೀರ್ಣದ ಮಧ್ಯಭಾಗದಲ್ಲಿದೆ. ಕಟ್ಟಡದ ತಳವಿನ್ಯಾಸವು L ಆಕಾರದಲ್ಲಿದ್ದು, ಎರಡು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ೧೯೧೭ರಲ್ಲಿ ನಿರ್ಮಾಣಗೊಂಡಿದೆ. ಕಟ್ಟಡದ ಒಳಭಾಗಕ್ಕೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿಗಳನ್ನು ಅಳವಡಿಸಲಾಗಿದೆ. ಕಟ್ಟಡದ ಮೇಲ್ಛಾವಣಿಯು ಹೆಂಚಿನ ಇಳಿಜಾರು ಛಾವಣಿಯಿಂದ ಕೂಡಿದೆ.

**ನ್ಯಾಯಾಲಯಗಳು** : ಮದ್ರಾಸ್ ಪ್ರಾಂತ್ಯದಲ್ಲಿ ಪ್ರತಿಯೊಂದು ಜಿಲ್ಲೆಯ ಅವುಗಳ ಅಧಿಕಾರವನ್ನು ಕುರಿತಂತೆ ರಚಿತವಾದ ಕಾನೂನು ಕಾಯ್ದೆಗಳಿಗೆ ೧೮೦೨-೦೬ರ ಕಾಲಾವಧಿಯಲ್ಲಿ ಅಂಗೀಕಾರ ದೊರೆಯಿತು. ಈ ನ್ಯಾಯಮಂಡಲಗಳು ಪ್ರಮುಖವಾದ ಅಪರಾಧ ಪ್ರಕರಣಗಳನ್ನು ವಿಚಾರಣೆ ಮಾಡುತ್ತಿದ್ದವು. ಜಿಲ್ಲೆಯಲ್ಲಿ ಜಿಲ್ಲಾ ನ್ಯಾಯಾಧೀಶನು ಸಿವಿಲ್ ಹಾಗೂ ಕ್ರಿಮಿನಲ್ ಮೊಕದ್ದಮೆಗಳಲ್ಲಿ ಪ್ರಧಾನ ನ್ಯಾಯಾಧೀಶನಾಗಿರುತ್ತಿದ್ದ ಮತ್ತು ರಿಜಿಸ್ಟ್ರಾರ್ ಅಥವಾ ಸಹಾಯಕ

ನ್ಯಾಯಾಧೀಶರಿಂದ ನೆರವು ಪಡೆಯುತ್ತಲೂ ಇದ್ದ. ಈ ಮೇಲಿನ ಕೋರ್ಟುಗಳಲ್ಲಿ ಮುಖ್ಯಾಧಿಕಾರಿಗಳಾಗಿದ್ದವರು ಕರಾರಿನ ಮೇಲೆ ನೇಮಕಗೊಂಡಿದ್ದ ಕಂಪನಿಯ ಐರೋಪ್ಯ ನೌಕರರಾಗಿರುತ್ತಿದ್ದರು. ಈ ನ್ಯಾಯಾಲಯವನ್ನು ಜಿಲ್ಲಾ ನ್ಯಾಯಾಲಯವೆಂದು ಕರೆಯಲಾಯಿತು. ಇವು ಜಿಲ್ಲೆಯ ಮೇಲೆ ಸಂಪೂರ್ಣ ಅಧಿಕಾರ ವ್ಯಾಪ್ತಿಯನ್ನು ಹೊಂದಿತ್ತು. ಇಲ್ಲಿ ಸಿವಿಲ್ ಮತ್ತು ಕ್ರಿಮಿನಲ್‌ಗಳ ವ್ಯಾಜ್ಯಗಳನ್ನು ಪರಿಶೀಲಿಸುತ್ತಿದ್ದವು. ಆಗ ಸಿವಿಲ್ ನ್ಯಾಯಾಲಯವನ್ನು ಸದರ ಎಂತಲೂ, ಕ್ರಿಮಿನಲ್ ನ್ಯಾಯಾಲಯವನ್ನು ಫೌಜ್ದುರಿ ಅದಾಲತ್ ಎಂದು ಕರೆಯಲಾಗುತ್ತಿತ್ತು. ಜಿಲ್ಲಾ ನ್ಯಾಯಾಲಯವು ಸಿವಿಲ್ ಮತ್ತು ದಂಡಾಧಿಕಾರದ ನ್ಯಾಯಾಲವಾಗಿತ್ತು. ಆರಂಭದಲ್ಲಿ ಜಿಲ್ಲಾ ಮ್ಯಾಜಿಸ್ಟ್ರೇಟ್ ಕಲೆಕ್ಟರನೇ ಕಾರ್ಯನಿರ್ವಾಹಕ ಮುಖ್ಯಾಧಿಕಾರಿಯಾಗಿದ್ದ. ನಂತರ ೧೮೬೯ರಲ್ಲಿ ಪ್ರತ್ಯೇಕ ನ್ಯಾಯಾಧೀಶನು ನೇಮಕಗೊಳ್ಳುತ್ತಿದ್ದರಿಂದ ಜಿಲ್ಲಾ ಮತ್ತು ಸೆಕ್ಷನ್ಸ್ ಜಡ್ಜಿಗಳ ಕೈಕೆಳಗೆ ಅಧೀನ ನ್ಯಾಯಾಧೀಶರನ್ನಾಗಿ ಮಾಡಲಾಯಿತು.[೩೩] ಕಾನೂನುಬದ್ಧ ಆಡಳಿತದ ಪ್ರಕಾರ ಹೊಸದಾಗಿ ಸ್ಥಾಪಿತವಾಗಿದ್ದ ನ್ಯಾಯಾಲಯಗಳು ಬಡವರಿಗೆ ಮತ್ತು ದುರ್ಬಲ ವರ್ಗದವರಿಗೆ ವರದಾನವಾಗಿ ಪರಿಣಮಿಸಬೇಕಾಗಿತ್ತು. ಆದರೆ ಈ ನ್ಯಾಯಾಲಯಗಳಿಂದ ಅವರು ನಿರೀಕ್ಷಿಸಿದ್ದ ಯಾವ ಪ್ರಯೋಜನವೂ ಅವರಿಗೆ ದೊರೆಯುಲಿಲ್ಲ. ನ್ಯಾಯಾಲಯುಗಳು ಅತ್ಯಂತ ಜಟಿಲ ಕಾರ್ಯವಿಧಾನವನ್ನು ಅನುಸರಿಸುತ್ತಿದ್ದುದೇ ಇದಕ್ಕೆ ಕಾರಣವಾಗಿತ್ತು. ಇವು ಜನರಿಗೆ ಅಪರಿಚಿತವಾದ ಹಾಗೂ ಅರ್ಥ ಮಾಡಿಕೊಳ್ಳಲು ಸಾಧ್ಯವಾಗದಿದ್ದಂತಹ ಕಾರ್ಯ ವಿಧಿಗಳಾಗಿದ್ದವು.

ಬಳ್ಳಾರಿ ಜಿಲ್ಲೆಯಲ್ಲಿ ಮೂರು ಹಂತದ ನ್ಯಾಯಾಲಗಳನ್ನು ಸ್ಥಾಪಿಸಲಾಯಿತು. ಅವುಗಳೆಂದರೆ, ಗ್ರಾಮ ಮುನ್ಸೀಫ್ ನ್ಯಾಯಾಲಯ, ಜಿಲ್ಲಾ ಮುನ್ಸೀಫ್ ನ್ಯಾಯಾಲಯ ಮತ್ತು ಜಿಲ್ಲಾ ನ್ಯಾಯಾಲಯಗಳು. '೧೮೮೯ರ ಗ್ರಾಮ ನ್ಯಾಯಾಲಯ ಕಾಯ್ದೆ ೧ರ ೯ನೆಯ ಸೆಕ್ಷನ್ ಕೆಳಗೆ ಬೆಂಚ್ ನ್ಯಾಯಾಲಯಗಳು ಜಿಲ್ಲೆಯ ಕೆಲವು ಸ್ಥಳಗಳಲ್ಲಿ ಕಾರ್ಯರಾಂಭ ಮಾಡಿದವು'.[೩೪]

ಬಳ್ಳಾರಿ ಜಿಲ್ಲಾ ನ್ಯಾಯಾಲವು ಸತ್ಯನಾರಾಯಣಪೇಟೆಯಲ್ಲಿದೆ. ಇದು ವಿಶಾಲವಾದ ಆವರಣದಲ್ಲಿ ದಕ್ಷಿಣಾಭಿಮುಖವಾಗಿದ್ದು, ೧೮೧೭ರಲ್ಲಿ ಆರಂಭಗೊಂಡಿದೆ. ಕಟ್ಟಡವು '೨೦೦ ಚದರ ಮೀಟರ್ ವಿಸ್ತೀರ್ಣದಲ್ಲಿ'[೩೫] ನಿರ್ಮಾಣಗೊಂಡಿದೆ. ಇದು ಎರಡು ಅಂತಸ್ತಿನ ಕಟ್ಟಡವಾಗಿದ್ದು, ವಿಶಾಲವಾದ ಕೊಠಡಿಗಳನ್ನು ಒಳಗೊಂಡಿದೆ. ಕಟ್ಟಡದ ಒಳಭಾಗದಲ್ಲಿ ಒಂದು ಗೋಡೆಯಿಂದ ಇನ್ನೊಂದು ಗೋಡೆಗೆ ಹೊಂದಿಕೊಂಡಂತೆ ಅರ್ಧವೃತ್ತಾಕಾರಾದ ಕಮಾನುಗಳನ್ನು ಅಳವಡಿಸಿರುವುದನ್ನು ಗಮನಿಸಲಾಗಿದೆ. ಇಲ್ಲಿ ಕಾರ್ಯನಿರ್ವಹಿಸಿದ ಸಿವಿಲ್ ನ್ಯಾಯಾಧೀಶರು ಜಿಲ್ಲಾ ಮ್ಯಾಜಿಸ್ಟ್ರೇಟರಾಗಿ ಇಡೀ ಬಳ್ಳಾರಿ ಕಂದಾಯ ಜಿಲ್ಲೆಯ ಮೇಲೆ ಅಧಿಕಾರ ಹೊಂದಿದರು. ಬಳ್ಳಾರಿ ಜಿಲ್ಲಾ ಸೆಕ್ಷನ್ಸ್ ನ್ಯಾಯಾಲಯದಲ್ಲಿ ಕ್ರಿ.ಶ. ೧೮೧೭ರಿಂದ ೧೯೫೩ರವರೆಗೆ ಒಟ್ಟು ೮೬ ಐರೋಪ್ಯ ನ್ಯಾಯಾಧೀಶರು ಕಾರ್ಯನಿರ್ವಹಿಸಿದ್ದಾರೆ. ಇವರ ಕೈಕೆಳಗೆ ಪ್ರತಿಯೊಂದು ತಾಲೂಕಿನಲ್ಲಿ ಸೆಕ್ಷನ್ಸ್ ಸಬ್ ಮ್ಯಾಜಿಸ್ಟ್ರೇಟ್‌ಗಳಿದ್ದರು. ಅವು ಈ ಕೆಳಗಿನಂತಿವೆ.

**ಜ್ಯೂನಿಯರ್ ಸಿವಿಲ್ ಜಡ್ಜ್ ಕೋರ್ಟು - ಆಲೂರು** : ಆಲೂರು ತಾಲೂಕಿನಲ್ಲಿ ಸಿವಿಲ್ ನ್ಯಾಯಾಲಯವು ಆರಂಭದಲ್ಲಿ ಹಳೆಯ ತಾಲೂಕು ಕಛೇರಿಯಲ್ಲಿತ್ತು. ಈ ತಾಲೂಕಿನ ಹಿರಿಯ ವಕೀಲರು ಹಾಗೂ ಸಾಹಿತಿಯು ಆಗಿದ್ದ ದಿವಂಗತ ಧರ್ಮವರಂ ಕೃಷ್ಣಂ ಚಾರ್ಲುರವರು ಈ ನ್ಯಾಯಾಲಯದಲ್ಲಿ ತನ್ನ ಕಕ್ಷಿದಾರನ ಪರವಾಗಿ ವಕಾಲತ್ತು ಮಾಡುವ ಸಂದರ್ಭದಲ್ಲಿ ಅಲ್ಲಿಯೇ ಕುಸಿದು ಬಿದ್ದು ೩೦ ನವೆಂಬರ್ ೧೯೧೨ರಲ್ಲಿ ಸಾವನಪ್ಪಿದರು. ಈ ಕಾರಣದಿಂದ ನ್ಯಾಯಾಲಯವನ್ನು ಹೊಸ ಕಟ್ಟಡಕ್ಕೆ ಸ್ಥಳಾಂತರಿಸಲಾಯಿತು. ಪ್ರಸ್ತುತ ಇದು ಹಲೆಯ ಬಸ್‌ಸ್ಟ್ಯಾಂಡ್ ಪಕ್ಕದಲ್ಲಿದೆ. ಇದು ಉತ್ತಾರಾಭಿಮುಖವಾಗಿದ್ದು, ೧೯೧೫ರಲ್ಲಿ ನಿರ್ಮಾಣಗೊಂಡಿದೆ. ಕಟ್ಟಡದ ತಳವಿನ್ಯಾಸವು ಯೇಸುವಿನ ಶಿಲುಬೆಯಾಕಾರದಲ್ಲಿದ್ದು, ನಾಲ್ಕು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಕಟ್ಟಡದ ಮೇಲ್ಚಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕಟ್ಟಲ್ಪಟ್ಟಿದೆ. ಕಟ್ಟಡಕ್ಕೆ ಹೊಂದಿಕೊಂಡಂತೆ ಕಟ್ಟಡದ ಸುತ್ತಲೂ ಇಳಿಜಾರು ಹೆಂಚಿನ ಛಾವಣಿಯನ್ನು ಹೊಂದಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಗಾರೆ, ಸುಣ್ಣ ಮತ್ತು ಕೆಂಪು ಬಣ್ಣ ಬಳಸಿ ಕಟ್ಟಿರುವುದನ್ನು ಗಮನಿಸಲಾಗಿದೆ.

**ನ್ಯಾಯಸ್ಥಾನಂ ರಾಯದುರ್ಗ** : ರಾಯದುರ್ಗ ಪಟ್ಟಣದಲ್ಲಿ ನ್ಯಾಯಸ್ಥಾನಂ ಅನಂತಪುರಕ್ಕೆ ಹೋಗುವ ಮಾರ್ಗದ ಎಡಭಾಗದಲ್ಲಿದೆ. ಇದು ಕ್ರಿ.ಶ. ೧೯೧೫ರಲ್ಲಿ ಸ್ಥಾಪನೆಗೊಂಡಿರುವುದು ಹಳೆಯ ಕಟ್ಟಡದ ಪ್ರವೇಶ ದ್ವಾರದ ಬಲಗಡೆ ಗೋಡೆಯ ಮೇಲಿರುವ ಶಿಲಾಫಲಕದಿಂದ ದೃಢಪಟ್ಟಿದೆ. ಆರಂಭದಲ್ಲಿ ಈ ನ್ಯಾಯಸ್ಥಾನಂನಲ್ಲಿ ಕೇವಲ ಕ್ರಿಮಿನಲ್ ಕೇಸುಗಳನ್ನು ಮಾತ್ರ ವಿಚಾರಣೆ ನಡೆಸುತ್ತಿದ್ದರು.[೬೬] ನಂತರ ೦೧ ಅಕ್ಟೋಬರ್ ೧೯೫೭ರಂದು ಶ್ರೀ ಜಿ. ವೆಂಕಟರೆಡ್ಡಿನಾಯುಡುಗಾರು ಎಲ್ಲಾ ರೀತಿಯ ಕೇಸುಗಳನ್ನು ವಿಚಾರಣೆ ನಡೆಸಲು ಅನುಮತಿ ನೀಡಿದರು. ಇದರಿಂದ ಇದು ೧-೩-೧೯೧೬ರಲ್ಲಿ ಅನಂತಪುರ ಜಿಲ್ಲೆಯ ಪ್ರಥಮ ಶ್ರೇಣಿ ಮ್ಯಾಜಿಸ್ಟ್ರೇಟ್ ಕೋರ್ಟ್ ಆಗಿ ಪರಿವರ್ತನೆಗೊಂಡಿದೆ. ಈ ನ್ಯಾಯಸ್ಥಾನಂನಲ್ಲಿ ಹದಿನೈದು ವಕೀಲರಿದ್ದರು. ಪ್ರಸ್ತುತ ವಕೀಲರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಅದು ಉದ್ದಕ್ಕಿಂತ ಅಗಲ ಹೆಚ್ಚಾಗಿರುವುದು ಕಂಡುಬಂದಿದೆ. ಇದು ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಕಟ್ಟಡದ ಒಳಭಾಗದಲ್ಲಿ ವಿಶಾಲವಾದ ನ್ಯಾಯಸ್ಥಾನಂ ವೇದಿಕೆಯ ಕೊಠಡಿ ಹಾಗೂ ಅಧಿಕಾರಿಗಳಿಗೆ ಎರಡು ಕೊಠಡಿಗಳು ಒಟ್ಟು ಮೂರು ಕೊಠಡಿಗಳನ್ನು ಒಳಗೊಂಡಿದೆ. ಪ್ರತಿಯೊಂದು ಕೊಠಡಿಗೂ ಗಾಳಿ ಮತ್ತು ಬೆಳಕು ಒಳಸೂಸಿಸಲು ಮರದ ಕಿಡಕಿ ಮತ್ತು ಬಾಗಿಲುಗಳನ್ನು ಅಳವಡಿಸಿರುವುದು ಕಂಡು ಬರುತ್ತದೆ. ಇದರ ಮೇಲ್ಚಾವಣಿಯು ಇಳಿಜಾರು ಛಾವಣಿಯ ಹೆಂಚಿನ ಕಟ್ಟಡ. ಇದಕ್ಕೆ ಮರದ ತೀರುಗಳನ್ನು ಹಾಸಿ, ಅದರ ಮೇಲೆ ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಿಸಿರುವುದನ್ನು ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಕಟ್ಟಡಕ್ಕೆ ಹೊಂದಿಕೊಂಡಂತೆ ಹೊರಭಾಗದ ಸುತ್ತಲೂ ಹೆಂಚಿನ ಇಳಿಜಾರು ಛಾವಣಿಯಿದೆ. ಅದಕ್ಕೆ ಸುತ್ತಲೂ ಮರದ ಕಂಬಗಳನ್ನು ನಿಲ್ಲಿಸಲಾಗಿದೆ.

ಈ ಕಂಬಗಳು ಇಡೀ ಕಟ್ಟಡ ಭಾರವನ್ನು ಹೊತ್ತುಕೊಂಡಿವೆ ಎನ್ನುವ ಹಾಗೆ ಕಾಣುತ್ತವೆ. ಹಳೆಯ ಕಟ್ಟಡದ ಆಗ್ನೇಯ ದಿಕ್ಕಿನಲ್ಲಿ ಒಂದು ನ್ಯಾಯಾಧೀಶರ ವಸತಿ ಗೃಹವಿದೆ. ಇದರ ಜೊತೆಗೆ ಎರಡು ಹೊಸ ಕಟ್ಟಡಗಳು ಹಳೆಯ ಕಟ್ಟಡದ ಮುಂಭಾಗದಲ್ಲಿ ನಿರ್ಮಾಣಗೊಂಡಿವೆ. ನ್ಯಾಯಸ್ಥಾನಂ ಕಟ್ಟಡದ ಸುತ್ತಲೂ ಆರು ಅಡಿ ಎತ್ತರದ ಕಾಂಪೌಂಡ್ ನಿರ್ಮಿಸಿರುವುದು ಕಂಡುಬರುತ್ತದೆ.

**ಸಿವಿಲ್ ನ್ಯಾಯಾಲಯ ಹೊಸಪೇಟೆ** : ಹೊಸಪೇಟೆಯಲ್ಲಿ ಸಿವಿಲ್ ನ್ಯಾಯಾಲಯು ತಾಲೂಕು ಕಛೇರಿಯ ಪಕ್ಕದಲ್ಲಿದೆ. ಇದು ಉತ್ತಾರಾಭಿಮುಖವಾಗಿದ್ದು, ೧೯೨೧ರಲ್ಲಿ ಆರಂಭಗೊಂಡಿದೆ. ಕಟ್ಟಡದ ತಳವಿನ್ಯಾಸವು ಯೇಸುವಿನ ಶಿಲುಬೆಯಾಕಾರದಲ್ಲಿದ್ದು, ೪ ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಈ ನ್ಯಾಯಾಲಯವು '೭೦೦ ಚದರ ಮೀಟರ್ ವಿಸ್ತೀರ್ಣವನ್ನು'[೩೭] ಹೊಂದಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಹಾಸುಬಂಡೆ, ಗಾರೆ, ಸುಣ್ಣ ಮತ್ತು ಕೆಂಪು ಬಣ್ಣವನ್ನು ಬಳಸಿ ನಿರ್ಮಿಸಿರುವುದು ಕಂಡುಬಂದಿದೆ.

ಹೊಸಪೇಟೆಯ ಉಪವಿಭಾಗದ ಅಸಿಸ್ಟೆಂಟ್ ಕಮಿಷನರ್, ಕಾರ್ಯಾಂಗದ ಮ್ಯಾಜಿಸ್ಟ್ರೇಟರಾಗಿ ಉಪವಿಭಾಗ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಾರೆ. ಈ ಎಲ್ಲಾ ಅಧೀನ ಅಧಿಕಾರಿಗಳು ಜಿಲ್ಲಾ ವ್ಯಾಜಿಸ್ಟ್ರೇಟರ್ ಸಾಮಾನ್ಯ ನಿಯಂತ್ರಣಕ್ಕೆ ಒಳಗಾಗಿರುತ್ತಾರೆ. ಕಾರ್ಯಾಂಗದ ಮ್ಯಾಜಿಸ್ಟ್ರೇಟರು ತಮ್ಮ ವ್ಯಾಪ್ತಿಗೊಳಪಟ್ಟ ಪ್ರದೇಶಗಳ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಜವಾಬ್ದಾರಿಯನ್ನು ಹೊತ್ತಿರುತ್ತಾರೆ.

**ಸಿವಿಲ್ ಜಡ್ಜ್ ಕೋರ್ಟು - ಆದೋನಿ** : ಆದೋನಿ ತಾಲೂಕಿನಲ್ಲಿ ನ್ಯಾಯಾಲಯವು ೧೯೧೫ರಲ್ಲಿ ಸ್ಥಾಪನೆಗೊಂಡಿದೆ. ಇದು ಹಳೆಯ ತಾಲೂಕು ಕಛೇರಿಯ ಪಕ್ಕದಲ್ಲಿದ್ದು, ದಕ್ಷಿಣಾಭಿಮುಖವಾಗಿ ಕಂಡುಬರುತ್ತದೆ. ಕಟ್ಟಡದ ತಳವಿನ್ಯಾನವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಕಟ್ಟಲ್ಪಟ್ಟಿದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ನಿರ್ಮಿಸಲ್ಪಟ್ಟಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್, ಗಾರೆ, ಸುಣ್ಣ ಮತ್ತು ಕೆಂಪು ಬಣ್ಣವನ್ನು ಬಳಸಿ ನಿರ್ಮಿಸಲ್ಪಟ್ಟಿದೆ.

**ಸಿವಿಲ್ ನ್ಯಾಯಾಲಯ ಹಡಗಲಿ** : ಹಡಗಲಿ ತಾಲೂಕಿನಲ್ಲಿ ನ್ಯಾಯಾಲಯವು ಹರಪನಹಳ್ಳಿಗೆ ಹೋಗುವ ಮಾರ್ಗದ ಎಡಭಾಗದಲ್ಲಿ ಕಂಡುಬರುತ್ತದೆ. ಇದು ಹಳೆಯ ತಾಲೂಕು ಕಛೇರಿಯಿಂದ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದೆ.

**ಸಿವಿಲ್ ನ್ಯಾಯಾಲಯ ಹರಪನಹಳ್ಳಿ** : ಹರಪನಹಳ್ಳಿ ತಾಲೂಕಿನಲ್ಲಿ ಹೊಸಪೇಟೆಗೆ ಬರುವ ಮಾರ್ಗದ ಬಲಭಾಗದಲ್ಲಿ ಹೊಸದಾಗಿ ನಿರ್ಮಾಣಗೊಂಡಿದೆ. ಇದು ಹಳೆಯ ತಾಲೂಕು ಕಛೇರಿಯಿಂದ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದೆ.

**ಸಿವಿಲ್ ನ್ಯಾಯಾಲಯ ಸಿರುಗುಪ್ಪ :** ಸಿರುಗುಪ್ಪ ತಾಲೂಕಿನಲ್ಲಿ ನ್ಯಾಯಾಲಯು ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದೆ.

**ಸಿವಿಲ್ ನ್ಯಾಯಾಲಯ ಕೂಡ್ಲಿಗಿ :** ಕೂಡ್ಲಿಗಿ ತಾಲೂಕಿನಲ್ಲಿ ಬ್ರಿಟಿಷರು ಸ್ಥಾಪಿಸಿದ ಕಟ್ಟಡವನ್ನು ಕೆಡವಿ, ಅದೇ ಸ್ಥಳದಲ್ಲಿ ಹೊಸ ಕಟ್ಟಡವನ್ನು ೨೦೧೦ರಲ್ಲಿ ನಿರ್ಮಿಸಲಾಗಿದೆ. ಪ್ರಸ್ತುತ ಇದು ಹಳೆಯ ತಾಲೂಕು ಕಛೇರಿಯ ಎದುರುಗಡೆ ಕಂಡುಬರುತ್ತದೆ.

### ೩.೪. ರಕ್ಷಣಾ ಕಟ್ಟಡಗಳು

### ಸೈನಿಕ ಕಟ್ಟಡಗಳು

ಲಾರ್ಡ್ ವೆಲ್ಲೆಸ್ಲಿಯು ಜಾರಿಗೆ ತಂದ ಸಹಾಯಕ ಸೈನ್ಯ ಪದ್ಧತಿಯಿಂದ ಮಿತ್ರ ಭಾರತೀಯ ರಾಜ್ಯದ ರಾಜನು ಬ್ರಿಟಿಷ್ ಸೈನ್ಯಕ್ಕೆ ತನ್ನ ರಾಜ್ಯದಲ್ಲಿ ಶಾಶ್ವತ ನೆಲೆಯನ್ನು ನೀಡಬೇಕಾಗುತ್ತಿತ್ತು. ಈ ಸೈನ್ಯ ವ್ಯವಸ್ಥೆಯ ವೆಚ್ಚವನ್ನು ನೀಡಬೇಕಾಗಿತ್ತು. ಕೆಲವು ಸಂದರ್ಭದಲ್ಲಿ ಭಾರತೀಯ ರಾಜರು ವಾರ್ಷಿಕ ಸಹಾಯಧನವನ್ನು ನೀಡಲು ಸಾಧ್ಯವಾಗದೆ ಅದರ ಬದಲು ತನ್ನ ಅಧೀನದಲ್ಲಿದ್ದ ಕೆಲವು ಪ್ರದೇಶವನ್ನು ಒತ್ತೆಯಾಗಿ ಕಾಣಿಕೆ ನೀಡುತ್ತಿದ್ದರು. ಭಾರತದಲ್ಲಿ ಮೊದಲು ಸಹಾಯಕ ಸೈನ್ಯ ಪದ್ಧತಿಗೆ ಒಳಪಟ್ಟ ಮೊದಲ ರಾಜನೆಂದರೆ, ಹೈದರಾಬಾದ್ ನಿಜಾಮ. ನಿಜಾಮನು ಬ್ರಿಟಿಷ್ ಸೈನ್ಯದ ವೆಚ್ಚವನ್ನು ಭರಿಸಲು ಸಾಧ್ಯವಾಗದೆ ಇರುವ ಸಂದರ್ಭದಲ್ಲಿ ತನ್ನ ಅಧೀನದಲ್ಲಿದ್ದ ಬಳ್ಳಾರಿ, ಅನಂತಪುರ, ಕರ್ನೂಲು, ಕಡಪ ಜಿಲ್ಲೆಗಳನ್ನು ದತ್ತಮಂಡಲವೆಂದು ಘೋಷಿಸಿ, ಬ್ರಿಟಿಷರಿಗೆ ನೀಡಿದನು. ಕ್ರಿ.ಶ. ೧೮೦೦ರ ಕಾಲಾವಧಿಯಲ್ಲಿ ಬಳ್ಳಾರಿ ಜಿಲ್ಲೆಯು ಮದ್ರಾಸ್ ಪ್ರಾಂತ್ಯದಲ್ಲಿಯೇ ದೊಡ್ಡ ಜಿಲ್ಲೆ ಹಾಗೂ ಆಯಾಕಟ್ಟಿನ ಪ್ರದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಬ್ರಿಟಿಷರು ಬಳ್ಳಾರಿ ಕಂಟೋನ್ಮೆಂಟ್ ಎಂದು ಕರೆಯುವ ಪ್ರದೇಶದಲ್ಲಿ ನೆಲೆಗೊಳಿಸಿದ್ದರು. ಬ್ರಿಟಿಷರು ಯಾವುದೇ 'ರಾಜ್ಯ ಅಥವಾ ಜಿಲ್ಲೆಯ ಹೃದಯ ಭಾಗದಲ್ಲೇ ಬಲಯುತವಾದ ಸೈನ್ಯ ವ್ಯವಸ್ಥೆಯನ್ನು ನೆಲೆಗೊಳಿಸುತ್ತಿದ್ದರು'.[೩೮] ಏಕೆಂದರೆ, ಭಾರತವು ಆ ಕಾಲಕ್ಕೆ ಬಹು ಬೆಲೆಬಾಳುವ ವಸಾಹತು ಪ್ರದೇಶವಾಗಿತ್ತು. ಇದರಿಂದ ನಿರಂತರವಾಗಿ ಪ್ರಬಲ ಸ್ಪರ್ಧಿಗಳಾದ ರಷ್ಯಾ, ಫ್ರಾನ್ಸ್, ಜರ್ಮನಿ ಇತ್ಯಾದಿ ರಾಷ್ಟ್ರಗಳಿಂದ ರಕ್ಷಿಸಬೇಕಾಗಿತ್ತು. ಇದರ ಜೊತೆಗೆ ಬ್ರಿಟಿಷರ ವಿರುದ್ಧ ಸ್ಥಳೀಯವಾಗಿ ನಡೆಯುತ್ತಿದ್ದ ದಂಗೆಗಳು, ಹೋರಾಟಗಳು, ಸತ್ಯಾಗ್ರಹಗಳನ್ನು ನಿಯಂತ್ರಿಸುವಂತಹ ಒಂದು ಸಂಘಟಿತವಾದ ಸೈನ್ಯ ವ್ಯವಸ್ಥೆ ಬ್ರಿಟಿಷರಿಗೆ ಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಅವರು ಸೈನ್ಯ ವ್ಯವಸ್ಥೆಗೆ ಹೆಚ್ಚು ಪ್ರೋತ್ಸಾಹ ನೀಡಿ, ಅವರಿಗೆ ಇಲ್ಲಿ ವಸತಿ ವ್ಯವಸ್ಥೆಯನ್ನು ಒದಗಿಸಿಕೊಟ್ಟರು. ಈ ಸೈನ್ಯ ವ್ಯವಸ್ಥೆಯ ಖರ್ಚು-ವೆಚ್ಚವನ್ನು ಆಯಾ ರಾಜ್ಯ-ಜಿಲ್ಲಾ ಆಡಳಿತದಿಂದ ಭರಿಸಬೇಕಾಗಿತ್ತು. 'ಬ್ರಿಟಿಷರು ನೀಡಿದ್ದ ಸಹಾಯಕ ಸೈನ್ಯದ ವೆಚ್ಚವು ಅತ್ಯಂತ ಹೆಚ್ಚಿನದಾಗಿತ್ತು; ವಾಸ್ತವವಾಗಿ ಅದು ರಾಜ್ಯದ ಪಾವತಿಸುವ ಸಾಮರ್ಥ್ಯವನ್ನು ಮೀರಿತ್ತು. ಸ್ವೇಚ್ಛಾನುಸಾರಿಯಾಗಿ ನಿರ್ಧಾರಿತವಾದ ಮತ್ತು ಕೃತಕವಾಗಿ ಮಿತಿಯಿಂದ ಸಹಾಯಧನದ

ಪಾವತಿಯು ರಾಜ್ಯದ ಅಥವಾ ಜಿಲ್ಲೆಯ ಅರ್ಥ ವ್ಯವಸ್ಥೆಯನ್ನು ಹಾಳು ಮಾಡಿತು ಮತ್ತು ಜನತೆಯನ್ನು ಬಡತನಕ್ಕೆ ದೂಡಿತು'.[೩೯]

ಬ್ರಿಟಿಷರು ಕರ್ನಾಟಕದಲ್ಲಿ ಸೈನಿಕ ವ್ಯವಸ್ಥೆಗೆ ನೆಲೆಗೊಳಿಸಿದ ಸ್ಥಳಗಳನ್ನು ಕಂಟೋನ್ಮೆಂಟ್ ಎಂದು ಕರೆಯಲಾಗುವುದು. 'ಕಂಟೋನ್ಮೆಂಟ್' ಎನ್ನುವ ಪದವು ಮೂಲತಃ ಫ್ರೆಂಚ್ ಭಾಷೆಯ ಕ್ಯಾನ್‌ಟೋನ್ (Canton) ಎಂಬ ಪದದಿಂದ ಉತ್ಪತ್ತಿಯಾಗಿದೆ. ಕ್ಯಾನ್‌ಟೋನ್ ಎಂದರೆ, ಬ್ರಿಟಿಷ್ ವಸಾಹತುಶಾಹಿ ರಾಷ್ಟ್ರಗಳಲ್ಲಿ 'ಮಿಲಿಟರಿ ಪಡೆಗಳು ನೆಲೆಸುವ ಸ್ಥಳ' ಎಂದಾಗುತ್ತದೆ. 'ಕಂಟೋನ್ಮೆಂಟ್‌ಗಳನ್ನು ಲಷ್ಕರ್, ಪಾಳ್ಯ, ದಂಡು ಪ್ರದೇಶ, ದಂಡಿನ ಭಾವಣಿ'[೪೦] ಎಂಬ ಹೆಸರುಗಳಿಂದ ಕರೆಯಲಾಗುವುದು.

ಬ್ರಿಟಿಷರು ಕಂಟೋನ್ಮೆಂಟ್‌ಗಳಲ್ಲಿ ಮಿಲಿಟರಿ ಪಡೆಗಳನ್ನು ತಯಾರುಗೊಳಿಸುವ ಹಿನ್ನೆಲೆಯಲ್ಲಿ ಎರಡು ವಿಧವಾದ ಕಾರ್ಯಗಳನ್ನು ಕೈಗೊಂಡರು. ಮೊದಲಿಗೆ ದೇಶೀ ಪಡೆಗಳಿಗೆ ಯೂರೋಪಿಯನ್ ಮಾದರಿಯ ಸೈನಿಕ ತರಬೇತಿಯನ್ನು ನೀಡಲಾಯಿತು. ಎರಡನೆಯದಾಗಿ ಸ್ಥಳೀಯ ಪಡೆಗಳಿಂದ 'ಗೆರಿಲ್ಲಾ ಯುದ್ಧ' ತಂತ್ರವನ್ನು ಯೂರೋಪಿಯನ್ ಸೈನಿಕರಿಗೆ ಎರವಲು ಪಡೆಯಲಾಯಿತು. ಈ ಯುದ್ಧ ತಂತ್ರಗಳಿಂದ ಪ್ರಾಂತೀಯ ಅರಸರನ್ನು ಹತ್ತಿಕ್ಕಿ ಅವರಿಗೆ ಮಾಶಾಸನ ನೀಡುವ ಮೂಲಕ ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದರು. 'ಕರ್ನಾಟಕದಲ್ಲಿ ಬ್ರಿಟಿಷರು ಸ್ಥಾಪಿಸಿದ್ದ ಕಂಟೋನ್ಮೆಂಟ್‌ಗಳನ್ನು ಪ್ರಮುಖವಾಗಿ ಎರಡು ವಿಧದಲ್ಲಿರುವುದನ್ನು ಕಾಣಬಹುದು. ಒಂದು: ಶಾಶ್ವತ ಕಂಟೋನ್ಮೆಂಟುಗಳು, ಎರಡು: ತಾತ್ಕಾಲಿಕ ಕಂಟೋನ್ಮೆಂಟ್‌ಗಳು'.[೪೧] ಶಾಶ್ವತ ಎಂದರೆ, ಸೈನಿಕರು ಒಂದೇ ಸ್ಥಳದಲ್ಲಿ ಅಂದರೆ, ಪ್ರಾದೇಶಿಕ ಹಿನ್ನೆಲೆಯಲ್ಲಿ ನೆಲೆನಿಂತ ಅಥವಾ ಕಂಟೋನ್ಮೆಂಟ್ ಎಂದು ಕರೆಯಲಾಗುವುದು. ಇವುಗಳಲ್ಲಿ ಬೆಂಗಳೂರು, ಬೆಳಗಾವಿ, ಬಳ್ಳಾರಿ, ಮಂಗಳೂರು ಕಂಟೋನ್ಮೆಂಟ್‌ಗಳು. ತಾತ್ಕಾಲಿಕ ಕಂಟೋನ್ಮೆಂಟ್‌ಗಳೆಂದರೆ, ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯ ಕೆಲವೊಂದು ಅವಶ್ಯಕತೆಗಳನ್ನು ಪೂರೈಸುವ ಸಲುವಾಗಿ ಉದಯಗೊಂಡಂಥವು. ಅವುಗಳೆಂದರೆ, ಪಾಂಡವಪುರ, ಹರಿಹರ, ಧಾರವಾಡ, ಶಿವಮೊಗ್ಗ, ಕಲಾದಿಗಿ, ಲಿಂಗಸೂರು, ಚಿತ್ರದುರ್ಗ, ರಾಮನಗರ ಮತ್ತು ಮಡಿಕೇರಿ. ಬ್ರಿಟಿಷರು ಸ್ಥಾಪಿಸಿದ ಸೈನಿಕ ನೆಲೆವೀಡುಗಳಲ್ಲಿ ಐರೋಪ್ಯ ಶೈಲಿಯಲ್ಲಿ 'ಸೈನಿಕರ ಬ್ಯಾರಕ್ಸ್, ಕ್ಲಬ್ಬು, ಪೆವಿಲಿಯನ್ಸ್, ಸೈನಿಕರ ವಸತಿಗೃಹಗಳಲ್ಲಿ ಪಡಿಮೂಡಿದೆ'.[೪೨] ಬೆಂಗಳೂರು ದಂಡು ಪ್ರದೇಶವು ವಿಶಾಲವಾಗಿದ್ದರಿಂದ ಅದರಲ್ಲೇ ಆಟದ ಮೈದಾನ, ರಸ್ತೆ, ಅಂಗಡಿ, ಕ್ಲಬ್ ಮುಂತಾದ ಸಕಲ ಸೌಕರ್ಯಗಳನ್ನು ನಿರ್ಮಿಸಿಕೊಂಡಿದ್ದರು.

**ಬಳ್ಳಾರಿ ಕಂಟೋನ್ಮೆಂಟ್** : ಪ್ರಸ್ತುತ ಬಳ್ಳಾರಿ ನಗರದಲ್ಲಿ ಕಂಟೋನ್ಮೆಂಟ್ ಎಂದು ಕರೆಯಲ್ಪಡುವ ಪ್ರದೇಶದಲ್ಲಿ ಜಿಲ್ಲೆಯ ಪ್ರಥಮ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೋ ಮತ್ತು ಸೇನಾ ತುಕಡಿಯ ನಾಯಕನಾಗಿದ್ದ ಜನರಲ್ ಡುಗ್ಲಾಡ್ ಕಾಂಪ್ಬೆಲ್ ಅವರು '೧೮೦೧ರಲ್ಲಿ ಸೈನಿಕ ತರಬೇತಿ ಶಾಲೆ ಅಥವಾ ಕಂಟೋನ್ಮೆಂಟ್‌ನ್ನು ಸ್ಥಾಪಿಸಿದರು'.[೪೩] ಇದು ದತ್ತಮಂಡಲ ಅಥವಾ ಸೀಡೆಡ್ ಜಿಲ್ಲೆಗಳ ಪ್ರಧಾನ ಸೈನಿಕ ಕೇಂದ್ರವಾಗಿತ್ತು. ಇಲ್ಲಿ '೨೫ ಅಶ್ವಪಡೆ, ೪ ರೆಜಿಮೆಂಟ್,

ಆರು ಕಂಪನಿಗಳ ೭೩ ರೆಜಿಮೆಂಟ್, ಒಂದನೆಯ ಬಿಟಾಲಿಯನ್ ೧೨ ರೆಜಿಮೆಂಟ್, ಒಂದು ಫಿರಂಗಿ ಪಡೆ, ಒಂದು ಯೂರೋಪಿಯನ್ ರೆಜಿಮೆಂಟ್, ಸ್ಥಳೀಯ ರೆಜಿಮೆಂಟ್, ಸ್ಥಳೀಯ ಅಶ್ವದಳ ಹಾಗೂ ಎಸ್.ಎಂ.ಆರ್. ಸ್ವಯಂ ಸೇವಕರ ಸೇನಾ ವಿಭಾಗದ ಕೇಂದ್ರವು'[೪೪] ಆಗಿತ್ತು. ಬ್ರಿಟಿಷರು ಬಳ್ಳಾರಿಯಲ್ಲಿ ಸೈನಿಕ ವಸತಿಗಾಗಿ ಎರಡು ಬಗೆಯ ಸ್ಥಳವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಒಂದು: ಸಮತಟ್ಟಾದ ಪ್ರದೇಶ. ಇದು ಪ್ರಸ್ತುತ ನಗರದಲ್ಲಿರುವ ಕಂಟೋನ್ಮೆಂಟ್ ಏರಿಯಾ. ಎರಡು: ಗಿರಿ-ಬೆಟ್ಟ, ಸಂಡೂರು ತಾಲೂಕಿನಲ್ಲಿರುವ ರಾಮಘಡ ಬೆಟ್ಟವು ಬ್ರಿಟಿಷ್ ಸೈನಿಕರಿಗೆ ಬೇಸಿಗೆಯ ವಿಶ್ರಾಂತಿ ಧಾಮವಾಗಿತ್ತು.

ಪ್ರಸ್ತುತ ಬಳ್ಳಾರಿ ನಗರದಲ್ಲಿ ಕಂಟೋನ್ಮೆಂಟ್ ಎಂದು ಕರೆಯುವ ಪ್ರದೇಶವು ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಆಯಾಕಟ್ಟಿನ ಪ್ರದೇಶವಾಗಿತ್ತು. ಇಲ್ಲಿ ಸೈನಿಕರ ಕಾರ್ಯಾಚರಣೆಗಾಗಿ ಮತ್ತು ಯುದ್ಧೋಪಕರಣಗಳನ್ನು ಇಟ್ಟುಕೊಳ್ಳುವುದಕ್ಕಾಗಿ ಐರೋಪ್ಯ ವಾಸ್ತುಶೈಲಿಯಲ್ಲಿ ಕಟ್ಟಡಗಳನ್ನು ನಿರ್ಮಿಸಿದ್ದರು. ಅವುಗಳಲ್ಲಿ ಸೈನಿಕ ತರಬೇತಿ ಶಾಲೆ, ಕ್ರೀಡಾಂಗಣ, ವಸತಿಗೃಹಗಳನ್ನು ಡೋರಿಕ್ ಶೈಲಿಯ ಕಂಬಗಳನ್ನೊಳಗೊಂಡ ವಾಸ್ತುಶೈಲಿಯಲ್ಲಿ ನಿರ್ಮಿಸಿರುವುದು ಕಂಡುಬರುತ್ತವೆ. ಈ ಪ್ರದೇಶದಲ್ಲಿ ಸುಮಾರು ೩೦ಕ್ಕೂ ಹೆಚ್ಚು ಕಟ್ಟಡಗಳಿವೆ. ಅವುಗಳಲ್ಲಿ ಕೆಲವು ಪಾಳುಬಿದ್ದಿವೆ. ಇನ್ನೂ ಕೆಲವು ಕಟ್ಟಡಗಳಲ್ಲಿ ಸರ್ಕಾರಿ ನೌಕರ ವರ್ಗದವರು ವಾಸಿಸುತ್ತಿದ್ದಾರೆ. ಈ ಎಲ್ಲಾ ಕಟ್ಟಡಗಳ ತಳಪಾಯವು ಉದ್ದಕ್ಕಿಂತ ಅಗಲ ಹೆಚ್ಚಾಗಿದ್ದು, ಒಂದೇ ಕಟ್ಟಡದಲ್ಲಿ ೪ ಅಥವಾ ೬ ಮನೆಗಳಿರುವುದು ಕಂಡುಬರುತ್ತವೆ. ಪ್ರತಿಯೊಂದು ಮನೆಯಲ್ಲಿ ವಿಶಾಲವಾದ ಕೊಠಡಿ, ಆವರಣ, ರಕ್ಷಣಾಗೋಡೆ, ಕಟ್ಟಡದ ಮುಂಭಾಗದಲ್ಲಿ ಮೈದಾನ ಇರುವುದು ಕಂಡುಬರುತ್ತದೆ. ಕಟ್ಟಡಗಳ ಮೇಲ್ಛಾವಣಿಯು ಮರದ ತೀರುಗಳನ್ನು ಹಾಸಿ ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿದೆ. ಕಟ್ಟಡಗಳಿಗೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಗಾರೆ, ಸುಣ್ಣ, ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಿಸಿರುವುದನ್ನು ಗಮನಿಸಲಾಗಿದೆ.

**ಸೈನಿಕ ನೆಲೆ ರಾಮಘಡ**

ಸಂಡೂರು ಬಳ್ಳಾರಿ ಜಿಲ್ಲೆಯಿಂದ ನೈರುತ್ಯಕ್ಕೆ ೪೯ ಕಿ.ಮೀ. ದೂರದಲ್ಲಿದೆ. ಈ ತಾಲೂಕಿನಲ್ಲಿ ಮನತಣಿಸುವಂತಹ ಕುಮಾರಸ್ವಾಮಿ ಬೆಟ್ಟ, ಜಂಬುನಾಥ ಬೆಟ್ಟ ಹಾಗೂ ರಾಮಘಡ ಬೆಟ್ಟ ಇತ್ಯಾದಿ ಬೆಟ್ಟಗುಡ್ಡಗಳು, ನೀರಿನ ಝರಿಗಳು, ಸಮೃದ್ಧವಾದ ಅರಣ್ಯ ಸಂಪತ್ತು, ಐತಿಹಾಸಿಕ ಸ್ಮಾರಕಗಳು ಹಾಗೂ ಸ್ಥಳ ಮಹಿಮೆಯಿಂದ ಬಳ್ಳಾರಿ ಜಿಲ್ಲೆಯ ಪುಟ್ಟ ಕಾಶ್ಮೀರ ಹಾಗೂ ಮಲೆನಾಡು ಪ್ರದೇಶ ಎಂದೇ ಕರೆಸಿಕೊಂಡಿತ್ತು. ಈ ಪ್ರದೇಶದಲ್ಲಿ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಹೇರಳವಾಗಿ ದೊರೆಯುವುದರಿಂದ ಇದು ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಪ್ರಸ್ತುತ ಇಲ್ಲಿ ನಡೆಯುವ ಗಣಿಗಾರಿಕೆಯಿಂದ ಪ್ರಕೃತಿ ಹಾಗೂ ಜನಸಂಸ್ಕೃತಿಯ ಮೇಲೆ ದುಷ್ಪರಿಣಾಮ ಬೀರುತ್ತಿದೆ.

ಸಂಡೂರಿಂದ ಹೊಸಪೇಟೆಗೆ ಹೋಗುವ ಮಾರ್ಗದ ೧೬ ಕಿ.ಮೀ. ದೂರದಲ್ಲಿರುವ ರಾಮಘಡ ಬೆಟ್ಟವು ಅರಣ್ಯ ಪ್ರದೇಶದಿಂದ ಕೂಡಿದೆ. ಇದು ಸಮುದ್ರಮಟ್ಟದಿಂದ ೩೨೫೫ ಅಡಿ ಎತ್ತರದಲ್ಲಿರುವ ಬೆಟ್ಟವು ಪ್ರಾಚೀನ ಕಾಲದಿಂದಲೂ ಚಾರಣಪ್ರಿಯರನ್ನು ಆಕರ್ಷಿಸುತ್ತಿರುವ ಪ್ರದೇಶವಾಗಿದೆ. ಬೆಟ್ಟದ ಮೇಲೆ ಸಮತಟ್ಟಾದ ನೆಲದಲ್ಲಿ ಉತ್ತಮವಾದ ಗಾಳಿ, ನೀರು ದೊರೆಯುವುದರಿಂದ ಜನವಸತಿಗೆ ಯೋಗ್ಯ ನೆಲೆಯಾಗಿದೆ. ಸುಶೀಲಾ ನಗರ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಕಂಡುಬರುವ ರಾಮಘಡವು ೭೪ ಮನೆಗಳನ್ನು ಒಳಗೊಂಡಿದೆ. ಇಂದು ನಮಗೆ ಇದು ಪುಟ್ಟ ಗ್ರಾಮವಾಗಿ ತೋರಿದರೂ ಕೂಡ ಕುಮ್ಮಟ ನಾಯಕರ ಆಳ್ವಿಕೆಯ ಕಾಲಾವಧಿಯಲ್ಲಿ ಎರಡನೆಯ ರಾಜಧಾನಿಯಾಗಿ ಹಾಗೂ ೧೯ನೇ ಮತ್ತು ೨೦ನೆಯ ಶತಮಾನದಲ್ಲಿ ಬ್ರಿಟಿಷ್ ಅಧಿಕಾರಿಗಳಿಗೆ ನಿಸರ್ಗಧಾಮವಾಗಿ ಮೆರೆದಿದೆ ಎಂಬುದಕ್ಕೆ ಅಲ್ಲಿನ ಕೋಟೆಯ ಅವಶೇಷಗಳು, ದೇವಾಲಯಗಳು, ಶಾಸನಗಳು, ಮೂರ್ತಿಶಿಲ್ಪಗಳು ಹಾಗೂ ಬ್ರಿಟಿಷರ ಸ್ಮಾರಕಗಳು ಇಂದಿಗೂ ಮೂಕ ಸಾಕ್ಷಿಗಳಾಗಿವೆ.

ರಾಮಘಡ ಬೆಟ್ಟದಲ್ಲಿ ಭದ್ರವಾದ ಗಿರಿದುರ್ಗವನ್ನು ನಿರ್ಮಿಸಿ, ಅದನ್ನು ಹೊಸ ಮಲೆದುರ್ಗವೆಂದು ಕರೆದು, ತನ್ನ ಎರಡನೆಯ ರಾಜಧಾನಿಯನ್ನಾಗಿ ಮಾಡಿಕೊಂಡವನು ಕುಮ್ಮಟದುರ್ಗದ ಪ್ರಭು ಕಂಪಿಲರಾಯ. ಕಂಪಿಲರಾಯನ ಮಗನಾದ ಪರಮವೀರ ಕುಮಾರರಾಮನ ಹೆಸರು ಈ ಪ್ರದೇಶದಲ್ಲಿ ಇಂದಿಗೂ ಸ್ಥಿರವಾಗಿದೆ. ಏಕೆಂದರೆ ಕ್ರಿ.ಶ. ೧೩ನೆಯ ಶತಮಾನದಲ್ಲಿ ದಕ್ಷಿಣ ಭಾರತದ ರಾಜಕೀಯ ಸ್ಥಿತಿಗತಿಗಳು ಸ್ಪರ್ಧಾತ್ಮಕವಾಗಿದ್ದವು. ಈ ಸ್ಪರ್ಧೆಯಲ್ಲಿ ಸೇವುಣ, ಕಾಕತೀಯ ಹಾಗೂ ಹೊಯ್ಸಳರ ಮಧ್ಯೆ ನಡೆದ ಯುದ್ಧದಲ್ಲಿ ಅವರನ್ನು ಅವನತಿಗೊಳಿಸಿ ರಾಜ್ಯ ಕಟ್ಟಿದ ಶ್ರೇಯಸ್ಸು ಕಂಪಿಲರಾಯ ಮತ್ತು ಕುಮಾರರಾಮನಿಗೆ ಸಲ್ಲುತ್ತದೆ. ರಾಮಘಡ ಬೆಟ್ಟದಲ್ಲಿ ರಾಮನಾಥ ದೇವಾಲಯದಲ್ಲಿ ಕ್ರಿ.ಶ. ೧೩೨೮ರ ಶಾಸನವೊಂದಿದೆ. ಅದು ಹೊಸಮಲೆಯ ರಾಮನಾಥವೊಡೆಯನ(ಕುಮಾರರಾಮನ) ನೆನಪಿಗಾಗಿ ರಾಮನಾಥ ದೇವಾಲಯವನ್ನು ಕಟ್ಟಿಸಿದ ಸಂಗತಿಯನ್ನು ಹೇಳುತ್ತದೆ. ಈ ಶಾಸನದಿಂದ ನಮಗೆ ಕುಮ್ಮಟ ಅರಸರ ಕಾಲಾವಧಿಯಲ್ಲಿ ಇದನ್ನು ಹೊಸಮಲೆದುರ್ಗ ಎಂದು ಕರೆದಿರುವುದು ಸ್ಪಷ್ಟವಾಗಿದೆ. ನಂತರ ಈ ಪ್ರದೇಶವು ವಿಜಯನಗರ ಅರಸರ, ಜರಿಮಲೆ ಪಾಳೆಯಗಾರರ, ಬಿಜಾಪುರದ ಸುಲ್ತಾನರ, ಮರಾಠರ, ಈಸ್ಟ್ ಇಂಡಿಯಾ ಕಂಪನಿಯ ಹಾಗೂ ಸಂಡೂರು ಘೋರ್ಪಡೆ ವಶಂಸ್ಥರ ಆಳ್ವಿಕೆಯ ವ್ಯಾಪ್ತಿಯಲ್ಲಿತ್ತು.

ಸಂಡರೂ ಸಂಸ್ಥಾನ ಬಳ್ಳಾರಿ ಜಿಲ್ಲೆಯ ಒಂದು ಪ್ರಮುಖ ಮತ್ತು ಜೀವಂತ ಸಂಸ್ಥಾನ. ಇಲ್ಲಿ ಕ್ರಿ.ಶ. ೧೮೧೫ರಲ್ಲಿ ಸಂಡೂರನ್ನು ಶಿವರಾವ್ ಆಳುತ್ತಲಿದ್ದಾಗ ಪೇಶ್ವೆ ಬಾಜೀರಾವ್ ಬಂಡೇಳುತ್ತಾನೆ. "ಕುಮಾರಸ್ವಾಮಿಯ ದೇವಸ್ಥಾನಕ್ಕೆ ದರ್ಶನ ಪಡೆಯಲು ಬಂದಿರುವುದಾಗಿ ಸಬೂಬು ಹೇಳುತ್ತ ತನ್ನ ಸೈನ್ಯ ತುಕಡಿಯನ್ನು ಸಿದ್ಧಗೊಳಿಸುವ ಪ್ರಯತ್ನದಲ್ಲಿದ್ದಾಗ ಶಿವರಾವ್ ಅದಕ್ಕೆ ಒಪ್ಪದೆ ಕೆಲವು ಜನರಿಗೆ ಮಾತ್ರ ದರ್ಶನಾವಕಾಶ ನೀಡುತ್ತಾನೆ'.[೨೫] ಈ ಸಂಬಂಧ

ಪೇಶ್ವೆ ಬಾಜೀರಾವ್ ಮತ್ತು ಶಿವರಾವ್ ಇವರ ನಡುವೆ ಇದ್ದ ಶೀತಲ ಸಮರ ಬಿರುಸಾಗುವ ಸಂದರ್ಭದಲ್ಲಿದ್ದಾಗ ಟ್ರೀಟಿ ಆಫ್ ಬೆಸನ್(Treaty of Bsssien) ಒಪ್ಪಂದದನ್ವಯ ಈಸ್ಟ್ ಇಂಡಿಯಾ ಕಂಪನಿಯು ಪೇಶ್ವೆ ಬಾಜೀರಾಯನಿಗೆ ಸಹಾಯ ಹಸ್ತ ನೀಡುತ್ತದೆ. ಆಗ ಸರ್ ಥಾಮಸ್ ಮನ್ರೋ ತನ್ನ ಸೇನೆಯೊಂದಿಗೆ ಸಂಡೂರು ಕಣಿವೆಯನ್ನು ವಶಪಡಿಸಿಕೊಳ್ಳಲು ಉದ್ದೇಶಿಸಿ "೧೮ನೇ ಅಕ್ಟೋಬರ್ ೧೮೧೭ರಂದು ಶಿವರಾವ್‌ಗೆ ಪತ್ರ ಬರೆಯುತ್ತಾನೆ".[೯] ಶಿವರಾವ್ ಮತ್ತು ಬಾಜೀರಾಯನ ಮಧ್ಯೆ ಇದ್ದ ಶೀತಲ ಸಮರವನ್ನು ಕೊನೆಗೊಳಿಸಿ, ಸಂಡೂರನ್ನು ವಶಪಡಿಸಿಕೊಂಡಾದ ಮೇಲೆ ಹಿರೇಹಾಳವನ್ನು ಶಿವರಾವ್‌ಗೆ ಮತ್ತು ಇತರ ಎಂಟು ಗ್ರಾಮಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಜಹಗೀರು ನೀಡಿ ಸಂಡೂರನ್ನು ನಿಯಮಾನುಸಾರವಾಗಿ ಪೇಶ್ವೆ ಬಾಜೀರಾಯನಿಗೆ ಬಿಟ್ಟು ಕೊಡಲಾಗುತ್ತದೆ. ಆದರೆ, ಮರುವರ್ಷವೇ ಪೇಶ್ವೆಯ ಬಾಜೀರಾವ್ ಮತ್ತು ಇಂಗ್ಲಿಷರ ನಡುವೆ ಯುದ್ಧ ನಡೆದು ಪೇಶ್ವೆ ಬಾಜೀರಾವ್ ಅಧಿಕಾರದಿಂದ ಕೆಳಗಿಳಿಯುತ್ತಾನೆ. ಮನ್ರೋ ಸಂಡೂರನ್ನು ಪುನಃ ಶಿವರಾವ್‌ಗೆ ಕೊಟ್ಟು ಈಸ್ಟ್ ಇಂಡಿಯಾ ಕಂಪನಿಯೇ ಸಂಡೂರನ್ನು ೧ ಜುಲೈ ೧೮೧೮ರಿಂದ ಪುನರ್‌ರಚನೆ ಮಾಡಿತು.

ಥಾಮಸ್ ಮನ್ರೋ ಮತ್ತು ಸೇನಾಪಡೆಯ ನಾಯಕನಾಗಿದ್ದ ಡುಗ್ಲಾಡ್ ಕಾಂಪ್ಬೆಲ್‌ರವರು ಬಳ್ಳಾರಿ ನಗರದ ಕಂಟೋನ್ಮೆಂಟ್ ಪ್ರದೇಶದಲ್ಲಿ ಸೈನ್ಯ ವಸತಿ ಕೇಂದ್ರಕ್ಕೆ ಅನುಕೂಲ ಮಾಡಿಕೊಳ್ಳಬೇಕಾಗಿತ್ತು. ಆದರೆ, ಬಳ್ಳಾರಿಯ ಉಷ್ಣವಾತಾವರಣದ ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಬೇಕಾಗಿದ್ದರಿಂದ ಥಾಮಸ್ ಮನ್ರೋ ಸಂಡೂರಿನ 'ರಾಮಘಡ ನಿಸರ್ಗಧಾಮ'ವನ್ನು ಸೈನ್ಯ ತುಕಡಿಯ ಬೇಸಿಗೆ ವಸತಿಗಾಗಿ ಬಳಸಿಕೊಳ್ಳುವ ಆಲೋಚನೆ ಬಂದಿತು. ೧೮೪೦ರ ವೇಳೆಗೆ ಶಿವರಾವ್ ಮರಣಾನಂತರ ಅಧಿಕಾರಕ್ಕೆ ಬಂದ ವೆಂಕಟರಾವ್‌ರವರ ಸಹಾಯವನ್ನು ನಿರೀಕ್ಷಿಸಿ ಅವರಿಂದ ತನ್ನ ಕೆಲಸವನ್ನು ಪೂರೈಸಿಕೊಂಡನು. ಇದರಿಂದ ರಾಮಘಡ ನಿಸರ್ಗಧಾಮವನ್ನು ಕ್ರಿ.ಶ. ೧೮೪೦ರಿಂದ ೧೯೪೭ರವರೆಗೆ ಬ್ರಿಟಿಷರು ಸೇನಾ ತುಕಡಿಯ ವಿವಿಧೋದ್ದೇಶಗಳಿಗಾಗಿ ಬಳಸಿಕೊಂಡರು. ೧೮೪೭ರಲ್ಲಿ ರಾಮಘಡವನ್ನು ಉತ್ತಮ ಆರೋಗ್ಯ ವರ್ಧಕ ಸ್ಥಳ(Sanitorislus)ವಾಗಿ ಮಾರ್ಪಡಿಸಲಾಯಿತು. ಜೊತೆಗೆ ಸೈನಿಕರಿಗಾಗಿ ಆಸ್ಪತ್ರೆಯೊಂದನ್ನು ನಿರ್ಮಿಸಲಾಯಿತು. ಇದು ೧೯೪೭ರ ಸುಮಾರಿನವರೆಗೂ ವ್ಯವಸ್ಥಿತವಾದ ಪ್ರದೇಶವಾಗಿತ್ತು. ಇಂಥ ಒಂದು ಇತಿಹಾಸಕ್ಕೆ ಸಾಕ್ಷಿಯಾಗಿ ರಾಮಘಡದಲ್ಲಿ ಪಾಳುಬಿದ್ದ ಕಟ್ಟಡಗಳನ್ನು ಬಿಟ್ಟರೆ ಲಿಖಿತ ದಾಖಲೆಗಳಾವುವು ಅಲ್ಲಿ ಕಾಣಿಸಿಕ್ಕುವುದಿಲ್ಲ.

ರಾಮಘಡ ಬೆಟ್ಟದಲ್ಲಿ ಬ್ರಿಟಿಷರು ತಮ್ಮ ತಾಯ್ನಾಡಿನ ವಾಸ್ತುಶೈಲಿಯಲ್ಲಿ ಬಹಳ ಸರಳವಾಗಿ, ಸುಭದ್ರವಾಗಿ ಹಾಗೂ ಹೆಚ್ಚು ಆಕರ್ಷಕವಾಗಿ ನಿರ್ಮಿಸಿಕೊಂಡಿರುವುದು ಕಂಡುಬರುತ್ತವೆ. ಇಲ್ಲಿ ಬ್ರಿಟಿಷರು ಸೈನಿಕರಿಗಾಗಿ, ಅಧಿಕಾರಿಗಳಿಗಾಗಿ ಪ್ಯಾಲೆಸ್, ಮಹಿಳೆಯರಿಗಾಗಿ, ಆಸ್ಪತ್ರೆ, ಧಾರ್ಮಿಕ ಆರಾಧನೆಗಾಗಿ ಚರ್ಚ್ ಇತ್ಯಾದಿ ಒಟ್ಟು ೨೧ ಕಟ್ಟಡಗಳನ್ನು ನಿರ್ಮಿಸಲಾಗಿತ್ತು ಎಂದು ಬಳ್ಳಾರಿ ಜಿಲ್ಲಾ ಅರಣ್ಯ ವಲಯಾಧಿಕಾರಿಗಳ ಕಛೇರಿಯ ಕಡತಗಳಲ್ಲಿದ್ದ ಮಾಹಿತಿಯಿಂದ ದೃಢಪಡುತ್ತದೆ.

ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಹಾಗೂ ಸ್ಥಳೀಯರಿಂದ ಪಡೆದ ಮಾಹಿತಿಯ ಪ್ರಕಾರ ೧೫ ಕಟ್ಟಡಗಳು ಮಾತ್ರ ಕಂಡು ಬರುತ್ತವೆ. ಉಳಿದ ೬ ಕಟ್ಟಡಗಳು ಗಣಿಗಾರಿಕೆಯಿಂದ ನಶಿಸಿ ಹೋಗಿವೆ. ಪ್ರಸ್ತುತ ಕಣ್ಣಿಗೆ ಕಾಣುವ ಕಟ್ಟಡಗಳಲ್ಲಿ ೬ ಕಟ್ಟಡಗಳು ನೆಲಸಮವಾಗಿವೆ. ೫ ಕಟ್ಟಡಗಳಲ್ಲಿ ವಲಸೆ ಬಂದ ಜನರು ವಾಸಿಸುತ್ತಿದ್ದಾರೆ. ಉಳಿದ ಕಟ್ಟಡಗಳು ಪಾಳುಬಿದ್ದಿವೆ. ಬೆಟ್ಟದಲ್ಲಿದ್ದ ಪ್ರತಿಯೊಂದು ಕಟ್ಟಡಕ್ಕೂ ಬ್ರಿಟಿಷ್ ಅಧಿಕಾರಿಗಳ ಹೆಸರುಗಳನ್ನು ಇಟ್ಟಿರುವುದು ಅರಣ್ಯ ಇಲಾಖೆಯ ಕಡತಗಳಲ್ಲಿ ದಾಖಲೆಗೊಂಡಿರುವುದನ್ನು ಗಮನಿಸಲಾಗಿದೆ. ಅವುಗಳೆಂದರೆ,

೧. ಅರಮನೆ(ಪ್ಯಾಲೆಸ್)
೨. ಬ್ಯಾರಾಕ್ಸ್ ಬಂಗಲೆ
೩. ಹೂಗನ್ ಬಂಗಲೆ
೪. ಬೆಲ್ಲಾವಿತ್ ಬಂಗಲೆ
೫. ಬ್ಲಾನೆರಿ ಕ್ಯಾಸೆಲ್ ಬಂಗಲೆ
೬. ಮದರ್ಸ್ ಬಂಗಲೆ
೭. ಅಧಿಕಾರಿಗಳ ವಿಶ್ರಾಂತಿ ಗೃಹ
೮. ರಥನ್ ಬಂಗಲೆ
೯. ಪೋಸ್ಟ್ ಆಫೀಸ್
೧೦. ಪೊಲೀಸ್ ಇಲಾಖೆ
೧೧. ಕ್ಯಾಥೋಲಿಕ್ ಚರ್ಚ್
೧೨. ಅರಣ್ಯ ಇಲಾಖೆ

**ಬ್ಯಾರಾಕ್ಸ್ ಬಂಗಲೆ :** ಬ್ಯಾರಕ್ಸ್ ಬಂಗಲೆಯು ಬೆಟ್ಟದ ನೈರುತ್ಯ ಭಾಗದಲ್ಲಿದೆ. ದಕ್ಷಿಣ-ಉತ್ತರಾಭಿಮುಖವಾಗಿರುವ ಈ ಕಟ್ಟಡವು ದೊಡ್ಡ ಬಂಗಲೆಯಾಗಿದೆ. ಇದರ ಉದ್ದ ೧೪ ಅಡಿ, ಅಗಲ ೪೨ ಅಡಿ, ಎತ್ತರ ೨೫ ಅಡಿಯನ್ನು ಹೊಂದಿದೆ. ಈ ಕಟ್ಟಡದಲ್ಲಿ ೧೦ ಮನೆಗಳಿದ್ದು, ಪ್ರತಿಯೊಂದು ಮನೆಯಲ್ಲಿ ಚಿಕ್ಕ ಚಿಕ್ಕ ಐದು ಕೊಠಡಿಗಳು ಕಂಡುಬರುತ್ತವೆ. ಕಟ್ಟಡವು ಮೂರು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ನಿಂತಿದ್ದು, ಕಟ್ಟಡಕ್ಕೆ ಇಟ್ಟಿಗೆ, ಕಲ್ಲು, ಗಾರೆ, ಸಿಮೆಂಟ್, ಕಬ್ಬಿಣ, ಮಂಗಳೂರು ಹಂಚ್ ಮತ್ತು ಮರದ ತೀರುಗಳನ್ನು ಬಳಸಿ ನಿರ್ಮಿಸಿದ್ದಾರೆ. ಕಟ್ಟಡ ಕಿಟಕಿ ಮತ್ತು ಬಾಗಿಲುಗಳ ಮೇಲೆ ಎಲೆ ಮೊನಚಿನಂತಹ ಚೂಪಾದ ಕಮಾನುಗಳನ್ನು ಅಳವಡಿಸಲಾಗಿದೆ. ಕಟ್ಟಡದ ಒಳಭಾಗಕ್ಕೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸೂಚಿಸಲು ದೊಡ್ಡ ದೊಡ್ಡ ಬಾಗಿಲು, ಕಿಟಕಿ ಹಾಗೂ ಜಾಲಂಧ್ರಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಈ ಬಂಗಲೆಯಲ್ಲಿರುವ ೧೦ ಮನೆಗಳ ಹಿಂಭಾಗ ಮತ್ತು ಮುಂಭಾಗದಲ್ಲಿ ಹಜಾರವಿದೆ. ಉತ್ತರ ದಿಕ್ಕಿನ ಹಜಾರವು ೧೦ ಕಮಾನುಗಳಿಂದ ಕೂಡಿದ್ದು, ದಕ್ಷಿಣದ ಹಜಾರದಲ್ಲಿ ಮೇಲ್ಛಾವಣಿಗೆ ಆಧಾರವಾಗಿರುವ ತಡೆಗೋಡೆಯನ್ನು ಕಟ್ಟಲಾಗಿದೆ. ಪ್ರತಿ ಮನೆಯ ಹಿಂಭಾಗ ಮತ್ತು ಮುಂಭಾಗದ ಬಾಗಿಲುಗಳಿಗೆ ಮೆಟ್ಟಿಲುಗಳನ್ನು ಆಕರ್ಷಕವಾಗಿ ಕಟ್ಟಿರುವುದು ವಿಶೇಷ. ಇನ್ನೊಂದು ವಿಶೇಷತೆ ಎಂದರೆ ಈ ಕಟ್ಟಡವು ಡೋರಿಕ್ ಶೈಲಿಯಲ್ಲಿ ನಿರ್ಮಾಣಗೊಂಡಿದೆ.

ಬ್ಯಾರಕ್ಸ್ ಬಂಗಲೆಯನ್ನು ಸ್ಥಳೀಯ ವಿದ್ಯಾರ್ಥಿಯಾದ ಮಂಜುನಾಥ ಮತ್ತು ನಾನು ಸೂಕ್ಷ್ಮವಾಗಿ ಕಟ್ಟಡದ ಸುತ್ತಲೂ ವೀಕ್ಷಿಸುತ್ತಿರುವ ಸಂದರ್ಭದಲ್ಲಿ ನಮಗೆ ಒಂದು ರಹಸ್ಯ

ಮಾರ್ಗ ಅಥವಾ ಸುರಂಗಮಾರ್ಗ ಗೋಚರಿಸಿತು. ಈ ರಹಸ್ಯ ಮಾರ್ಗವು ಬ್ಯಾರಕ್ಸ್ ಬಂಗಲೆಯ ದಕ್ಷಿಣ ದಿಕ್ಕಿನಲ್ಲಿ ಅಂದರೆ, ಕಟ್ಟಡದ ಹಿಂಭಾಗದಲ್ಲಿ ನೈರುತ್ಯ ದಿಕ್ಕಿನಿಂದ ಪ್ರಾರಂಭಗೊಂಡು, ಈಶಾನ್ಯ ದಿಕ್ಕಿನ ಕಡೆಗೆ ಮುಂದುವರಿದಿದೆ. ಕಟ್ಟಡದ ಮುಂಭಾಗದಲ್ಲಿ ಕುಸಿದು ಬಿದ್ದ ಕಾರಣದಿಂದ ನಮ್ಮ ಕಣ್ಣಿಗೆ ಕಂಡುಬಂತು. ಇದನ್ನು ಸ್ವಲ್ಪ ದೂರ ನಿಂತು ನೋಡಿದರೆ ಕಾಣುವುದಿಲ್ಲ, ಬಹಳ ಹತ್ತಿರದಿಂದ ನೋಡಿದರೆ ಮಾತ್ರ ಗೋಚರಿಸುತ್ತದೆ. ಇದರ ಪ್ರಾರಂಭ ಸಿಕ್ಕಿದೆ. ಆದರೆ, ಎಲ್ಲಿಗೆ ಮುಕ್ತಾಯಗೊಂಡಿದೆ ಎಂದು ನಿಖರವಾಗಿ ಹೇಳುವುದು ಕಷ್ಟ. ಇದು ರಹಸ್ಯ ಮಾರ್ಗವೇ? ಅಥವಾ ಒಳಚರಂಡಿಯೇ? ಎನ್ನುವಂತಹ ಪ್ರಶ್ನೆ ಉದ್ಭವವಾಗುತ್ತದೆ. ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಪ್ರಕಾರ ಇದು ರಹಸ್ಯ ಮಾರ್ಗವೇ ಹೊರತು ಒಳಚರಂಡಿ ಅಲ್ಲ. ಏಕೆಂದರೆ, ಬೆಟ್ಟದ ಮೇಲೆ ಸಮತಟ್ಟಾದ ಸ್ಥಳದಲ್ಲಿ ಕಟ್ಟಡಗಳನ್ನು ಕಟ್ಟಿಸಿರುವುದರಿಂದ ಒಳಚರಂಡಿಯ ಅವಶ್ಯಕತೆ ಕಂಡುಬರುವುದಿಲ್ಲ. ಇಲ್ಲಿ ಕಟ್ಟಿಸಿರುವ ಕಟ್ಟಡಗಳು ಒಂದೇ ಸ್ಥಳದಲ್ಲಿ ಅಂದರೆ, ಅಕ್ಕ-ಪಕ್ಕದಲ್ಲಿ ಕಟ್ಟದೆ, ಬೆಟ್ಟದ ಎಲ್ಲಾ ದಿಕ್ಕಿನಲ್ಲಿ ಒಂದು ಕಟ್ಟಡದಿಂದ ಇನ್ನೊಂದು ಕಟ್ಟಡಕ್ಕೆ ಸ್ವಲ್ಪ ದೂರದ ಅಂತರದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಇಲ್ಲಿ ಚರಂಡಿಯ ಅವಶ್ಯಕತೆಯಿಲ್ಲ. ಇದು ಪ್ರಾಯಶಃ ಸ್ಥಳೀಯ ದಾಳಿಕೋರರು ಯಾವ ಸಮಯ ದಲ್ಲಾದರೂ ದಾಳಿ ಮಾಡಬಹುದು ಎಂಬ ಭಯದಿಂದ ತಮ್ಮ ರಕ್ಷಣೆಗಾಗಿ ಒಂದು ಕಟ್ಟಡದಿಂದ ಇನ್ನೊಂದು ಕಟ್ಟಡಕ್ಕೆ ಹೋಗುವ ಮಾರ್ಗಕ್ಕಾಗಿ ಕೊರೆದಿರಬಹುದು. ಈ ಮಾರ್ಗವು ಅರ್ಧವೃತ್ತ ಅಥವಾ ಕುದುರೆಯ ಲಾಳದ ಆಕಾರದಲ್ಲಿದೆ. ಇದಕ್ಕೆ ಸುಟ್ಟ ಇಟ್ಟಿಗೆ, ಕಪ್ಪು-ಕೆಂಪು ಮಿಶ್ರಿತ ಕಲ್ಲನ್ನು ಬಳಸಿ ಕಟ್ಟಿರುವುದನ್ನು ಗಮನಿಸಲಾಗಿದೆ.

**ಪ್ಯಾಲೆಸ್ ಅಥವಾ ಅರಮನೆ :** ಪ್ಯಾಲೆಸ್ ಬೆಟ್ಟದ ಮಧ್ಯಭಾಗದಲ್ಲಿ. ಇದು ದಕ್ಷಿಣ-ಉತ್ತರಾಭಿಮುಖವಾಗಿದ್ದು, ೧೬ ಕೊಠಡಿಗಳನ್ನು ಒಳಗೊಂಡಿದೆ. ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಇಲ್ಲಿ ಬ್ರಿಟಿಷ್ ವಿಶೇಷ ಅಧಿಕಾರಿಗಳಿಗೆ ಮಾತ್ರ ವಾಸ್ತವ್ಯ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು. ಅವರಿಗೆ ಈ ಕಟ್ಟಡದಲ್ಲಿ ಪ್ರತ್ಯೇಕ ಕೊಠಡಿಯಲ್ಲಿ ಸ್ನೂಕರ್ ಆಟವಾಡುವ ವ್ಯವಸ್ಥೆಯೊಂದನ್ನು ಸಿದ್ಧಗೊಳಿಸಲಾಗಿತ್ತು ಎಂಬುದಕ್ಕೆ ಅಲ್ಲಿ ಈಗಲೂ ಟೇಬಲ್, ಬೆಳಕು ಬೀಳಲು ವಿದ್ಯುತ್ ಪರಿಕರಗಳನ್ನು ಅವರು ಬಳಸಿ, ಬಿಟ್ಟಿರುವುದನ್ನು ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ. ಇದರಲ್ಲಿ ಪ್ರತ್ಯೇಕ ಅಡಿಗೆ ಕೊಠಡಿ ಇದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹಂಚು, ಗಾರೆ, ಹಾಸುಬಂಡೆಯನ್ನು ಬಳಸಿ ನಿರ್ಮಿಸಿದ್ದಾರೆ. ಕಟ್ಟಡದ ಒಲಭಾಗಕ್ಕೆ ಗಾಳಿ ಮತ್ತು ಬೆಳಕು ಒಳಸೂಚಿಸಲು ದೊಡ್ಡ ದೊಡ್ಡ ಕಿಟಕಿ, ಬಾಗಿಲುಗಳು, ಗಾರೆಯಿಂದ ಮಾಡಿದ ಜಾಲಂಧ್ರಗಳನ್ನು ಅಳವಡಿಸಿರುವುದು ಕಂಡುಬರುತ್ತದೆ.

ಪ್ಯಾಲೆಸ್ ಕಟ್ಟಡದ ಆಗ್ನೇಯ ದಿಕ್ಕಿನಲ್ಲಿ ಕುದುರೆಗಳಿಗೆ ಪ್ರತ್ಯೇಕ ಕೊಠಡಿಗಳನ್ನು ನಿರ್ಮಿಸಿರುವುದು ಕಾಣಬಹುದಾಗಿದೆ. ಕಟ್ಟಡದ ಸುತ್ತಲೂ ವಿಶಾಲವಾದ ಆವರಣವಿದ್ದು,

ಅದಕ್ಕೆ ಹೊಂದಿಕೊಂಡಂತೆ ಸುತ್ತಲೂ ಕಾಂಪೌಂಡನ್ನು ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ. ಪ್ರಸ್ತುತ ಈ ಕಟ್ಟಡವು ಪಾಳುಬಿದ್ದಿರುವುದರಿಂದ ಮೈನಿಂಗ್ ಕಂಪನಿಯ ಕಾರ್ಮಿಕರು ಕಿಟಕಿಗಳನ್ನು ಒಡೆದು ಅವುಗಳ ಮೂಲಕ ಒಳಕ್ಕೆ ಪ್ರವೇಶಿಸಿ ಅಲ್ಲಿ ವಾಸ್ತವ್ಯ ಹೂಡಿದ್ದಾರೆ.

**ಹೂಗನ್ ಬಂಗಲೆ** : ಹೂಗನ್ ಬಂಗಲೆಯು ಬೆಟ್ಟದ ಉತ್ತರ ಭಾಗದಲ್ಲಿದೆ. ಇದು ಉತ್ತರ ಮತ್ತು ದಕ್ಷಿಣಾಭಿಮುಖವಾಗಿರುವ ಕಟ್ಟಡವಾಗಿದ್ದು, ನಾಲ್ಕು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಕಟ್ಟಡದ ಮೇಲ್ಛಾವಣಿಯೂ ಬಿದ್ದೊಗಿದ್ದು, ಕೇವಲ ಡೋರಿಕ್ ಶೈಲಿಯ ಕಂಬಗಳು ಮತ್ತು ಸುತ್ತಲೂ ಗೋಡೆ ಮಾತ್ರ ಕಂಡುಬರುತ್ತದೆ. ಈ ಕಟ್ಟಡದಲ್ಲಿ ಡೋರಿಕ್ ಶೈಲಿಯ ಕಂಬಗಳು ಸುಂದರವಾಗಿ ಹಾಗೂ ಎತ್ತರವಾಗಿ ನಿರ್ಮಿಸಿರುವುದು ಕಂಡುಬರುತ್ತವೆ. ಇವು ಅಲಂಕಾರಿಕರಿಂದ ಕಾಣದಿದ್ದರೂ, ನೋಟಕ್ಕೆ ಸೊಗಸಾಗಿ ಕಾಣುತ್ತವೆ. ಕಟ್ಟಡವು ದೂರದ ನೋಟಕ್ಕೆ ಸ್ತಂಭ ಮಾದರಿಯ ಕಟ್ಟಡವಾಗಿ ಗೋಚರಿಸುತ್ತದೆ.

**ಬೆಲ್ಲಾವಿತ್ ಬಂಗಲೆ** : ಈ ಬಂಗಲೆಯು ಬೆಟ್ಟದ ವಾಯುವ್ಯ ದಿಕ್ಕಿನಲ್ಲಿ ಕಂಡುಬರುತ್ತದೆ. ಇದು ದಕ್ಷಿಣ-ಉತ್ತರಾಭಿಮುಖವಾಗಿದ್ದು, ನಾಲ್ಕು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿದೆ. ಕಟ್ಟಡವು ಡೋರಿಕ್ ಶೈಲಿಯ ಕಟ್ಟಡವಾಗಿದೆ. ಏಕೆಂದರೆ ಕಟ್ಟಡದಲ್ಲಿ ಕೇವಲ ಡೋರಿಕ್ ಶೈಲಿಯ ಕಂಬಗಳು ಮಾತ್ರ ಕಂಡುಬರುತ್ತವೆ. ಉಳಿದ ಭಾಗ ನಶಿಸಿಹೋಗಿದೆ.

**ಬ್ಲಾನೆರಿ ಕ್ಯಾಸೆಲ್ ಬಂಗಲೆ** : ಈ ಬಂಗಲೆಯು ಬೆಟ್ಟದ ಉತ್ತರ ದಿಕ್ಕಿನಲ್ಲಿ ಕಂಡುಬರುತ್ತದೆ. ಇದು ಬೃಹದಾಕಾರವಾದ ಕಟ್ಟಡವಾಗಿದ್ದು, ಉತ್ತರ-ದಕ್ಷಿಣಾಭಿಮುಕವಾಗಿ ನಿರ್ಮಾಣಗೊಂಡಿದೆ. ಕಟ್ಟಡವು ಡೋರಿಕ್ ಶೈಲಿಯಲ್ಲಿದ್ದು, ಕಂಬಗಳ ಮಧ್ಯೆ ಕಮಾನುಗಳನ್ನು ಒಳಗೊಂಡಂತೆ ಗೋಡೆಯನ್ನು ಮಾತ್ರ ಕಾಣಬಹುದು. ಇದರ ಮೇಲ್ಭಾಗವು ಹಾಳಾಗಿದೆ. ಇದರ ಸುತ್ತಲೂ ಗಿಡಗಂಟೆಗಳು ಬೆಳೆದಿರುವುದರಿಂದ ಕಟ್ಟಡವು ದೂರದಿಂದ ನಿಂತು ನೋಡಿದರೆ ಕಾಣುವುದಿಲ್ಲ.

**ರಥನ್ ಬಂಗಲೆ** : ರಥನ್ ಬಂಗಲೆಯು ಬ್ಲಾನೆರಿ ಕ್ಯಾಸಲ್ ಕಟ್ಟಡದ ಪಕ್ಕದಲ್ಲಿದೆ. ಇದು ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಉತ್ತರ-ದಕ್ಷಿಣಾಭಿಮುಖವಾಗಿ ನಿರ್ಮಾಣಗೊಂಡಿದೆ. ಕಟ್ಟಡವು ಡೋರಿಕ್ ಶೈಲಿಯಿಂದ ಕೂಡಿದ್ದು, ಕಿಟಕಿ ಹಾಗೂ ಬಾಗಿಲುಗಳ ಮೇಲ್ಭಾಗವು ಕಮಾನಿಕಾರದಲ್ಲಿ ಕಂಡುಬರುತ್ತದೆ. ಇಲ್ಲಿರುವ ಕಂಬಗಳಿಗೆ ಒಂದು ಕಂಬದಿಂದ ಇನ್ನೊಂದು ಕಂಬದ ಮಧ್ಯೆ ಅರ್ಧವೃತ್ತ ಕಮಾನುಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಮೇಲ್ಛಾವಣಿಯು ಬಿದ್ದೊಗಿದೆ. ಕಟ್ಟಡದ ಸುತ್ತಲೂ ಗಿಡ-ಮರಗಳು ಬೆಳೆದು ನಿಂತಿರುವುದು ಕಂಡುಬರುತ್ತದೆ.

ಬೆಟ್ಟದಲ್ಲಿ ಪೊಲೀಸ್ ಠಾಣೆ ಮತ್ತು ಪೋಸ್ಟ್ ಆಫೀಸ್ ಇತ್ತು ಎಂದು ಸ್ಥಳೀಯರು ಹೇಳುತ್ತಾರೆ. ಕಟ್ಟಡಗಳು ಕಂಡುಬರುತ್ತವೆ. ಆದರೆ ಪೊಲೀಸ್‌ಠಾಣೆ ಮತ್ತು ಪೋಸ್ಟ್ ಆಫೀಸ್‌ಗೆ ಸಂಬಂಧಪಟ್ಟ ಯಾವುದೇ ದಾಖಲೆಯು ಕಂಡು ಬರುವುದಿಲ್ಲ. ಈ ಎರಡು ಕಟ್ಟಡಗಳು ನಶಿಸಿಸುವಂತ ಸ್ಥಿತಿಯಲ್ಲಿವೆ.

ಅರಣ್ಯ ಇಲಾಖೆಯ ಕಟ್ಟಡವು ಬೆಟ್ಟದ ಮಧ್ಯಭಾಗದಲ್ಲಿ ಪಶ್ಚಿಮಾಭಿಮುಖವಾಗಿದೆ. ಇದನ್ನು ಬ್ರಿಟಿಷರು ಸ್ಥಾಪಿಸಿದ್ದ ಕಟ್ಟಡದಲ್ಲಿಯೇ ಪ್ರಸ್ತುತ ಅರಣ್ಯ ಇಲಾಖೆಯ ಅಧಿಕಾರಿಗಳು ವಾಸ್ತವ್ಯ ತಂಗಿದ್ದಾರೆ. ಕಟ್ಟಡವು ಡೋರಿಕ್ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯನ್ನು ಹೊಂದಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಗಾರೆ, ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಿಸಲಾಗಿದೆ. ಈ ಕಟ್ಟಡದಲ್ಲಿ ಅರಣ್ಯ ಸಿಬ್ಬಂದಿಯು ಕಾರ್ಯನಿರ್ವಹಿಸುತ್ತಿದ್ದಾರೆ.

ರಾಮಘಡ ಬೆಟ್ಟವು ಈ ಹಿಂದೆ ಸಮೃದ್ಧವಾದ ಅರಣ್ಯ ಸಂಪತ್ತು ಮತ್ತು ಖನಿಜ ಸಂಪತ್ತಿನಿಂದ ಕೂಡಿದ ಪ್ರದೇಶವಾಗಿತ್ತು. ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಬ್ರಿಟಿಷರಿಗೆ ಇದು ನಿಸರ್ಗಧಾಮವಾಗಿ ಅಥವಾ ವಿಶ್ರಾಂತಿ ತಂಗುದಾಣವಾಗಿತ್ತು. ಇಂದು ಜಾಗತೀಕರಣದ ಹಿನ್ನೆಲೆಯಲ್ಲಿ ಹಣದಾಸೆಗೆ ಬಲಿಯಾದ ಮಾನವ ಇಲ್ಲಿ ದೊರೆಯುವ ಅದಿರನ್ನು ಹೊರ ತೆಗೆಯುವ ಹಾಗೂ ಅದನ್ನು ಹೊರದೇಶಗಳಿಗೆ ಮಾರಾಟ ಮಾಡುವ ದುಷ್ಕೃತ್ಯದಲ್ಲಿ ತೊಡಗಿರುವುದರಿಂದ ಬ್ರಿಟಿಷರ ಸ್ಮಾರಕಗಳಿಗೆ ದೊಡ್ಡ ಪೆಟ್ಟು ಬಿದ್ದಿದೆ. ಮುಂದಿನ ದಿನಗಳಲ್ಲಿ ಇಲ್ಲಿ ಬ್ರಿಟಿಷರ ಸ್ಮಾರಕಗಳು ಇದ್ದವು ಎನ್ನುವ ಯಾವ ಕುರುವು ಕಾಣದ ಹಾಗೆ ಕಂಡುಬರುವುದರಲ್ಲಿ ಯಾವುದೇ ಸಂಶಯವಿಲ್ಲ ಎಂದು ಹೇಳಬಹುದಾಗಿದೆ.

### ಜೈಲ್ ಕಟ್ಟಡಗಳು

ಭಾರತದಲ್ಲಿ ಆರಂಭಿಕ ಜೈಲ್ ವ್ಯವಸ್ಥೆಯು ಇಂಗ್ಲಿಷ್ ಮಾದರಿಯಂತೆಯೇ ಅನಾರೋಗ್ಯಕರ, ನೀತಿಹಾನಿಕರ ಮತ್ತು ಅನಿರೋಧವಾಗಿತ್ತು. ಜೈಲುವಾಸಿಗಳಿಗೆ ಭಾರಿ ಶಿಕ್ಷೆ ನೀಡಲಾಗುತ್ತಿತ್ತು. ಅನೇಕ ವೇಳೆ ಅವರನ್ನು ರಸ್ತೆ ಕೆಲಸಗಾರರ ತಂಡಗಳಲ್ಲಿ ತೊಡಗಿಸಲಾಗುತ್ತಿತ್ತು; ಆರೋಗ್ಯದ ನಿಯಮಗಳನ್ನು ಪಾಲಿಸುತ್ತಿರಲಿಲ್ಲ; ಸಾವಿನ ಪ್ರಮಾಣ "ಸಾವಿರಕ್ಕೆ ನೂರಕ್ಕಿಂತಲೂ ಹೆಚ್ಚಾಗಿತ್ತು. ಇಂತಹ ಸ್ಥಿತಿಯಲ್ಲಿ ಜೈಲು ಸುಧಾರಣೆಯ ಅತ್ಯಂತ ಮೊದಲಿನ ಪ್ರಯತ್ನ 'ಲಾರ್ಡ್ ಮೆಕಾಲೆಯ ಪ್ರೇರಣೆಯಿಂದ ೧೮೩೪ರ ಶಾಸನದ ಮೂಲಕ ಆಯಿತು'.[೪೭] ಮೆಕಾಲೆಯ ಸೂಚನೆಯ ಮೇರೆಗೆ, ಭಾರತದಲ್ಲಿನ ಜೈಲುಗಳ ವಾಸ್ತವಿಕ ಸ್ಥಿತಿಯನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಲು ಮತ್ತು ಅವುಗಳನ್ನು ಸುಧಾರಿಸಲು ಯೋಜನೆಯೊಂದನ್ನು ತಯಾರಿಸಲು ೧೮೩೬ರ ಜನವರಿ ೨ ರಂದು ಒಂದು ಸಮಿತಿ ನೇಮಕಗೊಂಡಿತು. ಈ ಸಮಿತಿಯ ಶಿಫಾರಸ್ಸುಗಳಲ್ಲಿ ಒಂದಾದ 'ಖೈದಿಗಳನ್ನು ತಿದ್ದಲು ಹಾಗೂ ಸುಧಾರಿಸಲು ಹೊಸ ದೊಡ್ಡ ಕೇಂದ್ರೀಯ ಶೈಕ್ಷಣಿಕ ಕಾರಾಗೃಹಗಳನ್ನು ನಿರ್ಮಿಸಿ, ಅದರ ಮೇಲುಸ್ತುವಾರಿಯಾಗಿ ನೇಮಿಸುವುದಾಗಿತ್ತು'.[೪೮] ಈ ಸಮಿತಿನ್ವಯ ಕಾರಾಗೃಹಗಳು ಭಾರತದಲ್ಲಿ ಹೆಚ್ಚು ಹೆಚ್ಚು ಸ್ಥಾಪಿಸಲ್ಪಟ್ಟವು. ಈ ಹಿನ್ನೆಲೆಯಲ್ಲಿ ಮದ್ರಾಸ್ ಪ್ರೆನಿಡೆನ್ಸಿಯಲ್ಲಿ ಬಳ್ಳಾರಿ ಜಿಲ್ಲೆಯು ದೊಡ್ಡ ಜಿಲ್ಲೆ ಮತ್ತು ಸೈನಿಕ ನೆಲೆಯಾಗಿದ್ದರಿಂದ ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ ಕೇಂದ್ರ ಕಾರಾಗೃಹ ಮತ್ತು ಅಲ್ಲಿಪುರ ಜೈಲು ದೊಡ್ಡ ಜೈಲುಗಳಾಗಿ, ಪ್ರತಿ ತಾಲೂಕಿನಲ್ಲಿ ಸಬ್ ಜೈಲುಗಳಾಗಿ ಸ್ಥಾಪಿಸಲ್ಪಟ್ಟವು.

## ಅಲ್ಲಿಪುರ ಜೈಲು

ಅಲ್ಲಿಪುರ ಜೈಲು ಪ್ರಸ್ತುತ ಬಳ್ಳಾರಿ ನಗರದಲ್ಲಿರುವ ವಿಜಯನಗರ ವೈದ್ಯಕೀಯ ಮಹಾವಿದ್ಯಾಲಯದ ಆವರಣದಲ್ಲಿತ್ತು. ಸ್ವಾತಂತ್ರ್ಯಾನಂತರದಲ್ಲಿ ಅಲ್ಲಿಪುರ ಜೈಲಿನಲ್ಲಿದ್ದ ಕೈದಿಗಳನ್ನು ಮತ್ತು ಕಛೇರಿಯಲ್ಲಿದ್ದ ಕೆಲವು ದಾಖಲೆಗಳನ್ನು ೧೯೫೮ರಲ್ಲಿ ಬಳ್ಳಾರಿ ಕೇಂದ್ರ ಕಾರಾಗೃಹಕ್ಕೆ ಸ್ಥಳಾಂತರಿಸಲಾಯಿತು. ಅಲ್ಲಿಪುರ ಜೈಲ್‌ದ್ದ ಆವರಣವನ್ನು ಹಾಗೂ ಕಟ್ಟಡಗಳನ್ನು ನವೀಕರಿಸಿ, ೧೯೬೧ರಲ್ಲಿ ವಿಜಯನಗರ ವೈದ್ಯಕೀಯ ಮಹಾವಿದ್ಯಾಲಯವು ಸ್ಥಾಪನೆಗೊಂಡಿತು. ಇದು ಪ್ರಸ್ತುತವೂ ಕಾರ್ಯನಿರ್ವಹಿಸುತ್ತಿದೆ.

೧೯ನೇ ಶತಮಾನದಲ್ಲಿ ಅಲ್ಲಿಪುರ ಜೈಲು ದಕ್ಷಿಣ ಭಾರತದಲ್ಲಿಯೇ ಏಕೈಕ ದೊಡ್ಡ ಜೈಲ್ ಇದಾಗಿತ್ತು. ಏಕೆಂದರೆ, ಇದು ವಿಶಾಲವಾದ ಕೊಠಡಿಗಳು ಹಾಗೂ ಭದ್ರವಾದ ಕಾರಾಗೃಹವಾಗಿತ್ತು. ಈ ಜೈಲ್‌ನಲ್ಲಿ ಸುಮಾರು ೨೫೦೦ ಖೈದಿಗಳನ್ನು ಏಕಕಾಲದಲ್ಲಿ ಇಡಬಹುದಾಗಿತ್ತು. ಈ ಜೈಲು ಉತ್ತಮ ವಾಸ್ತವ್ಯ ಸೌಲಭ್ಯ ಹೊಂದಿದ್ದ ಕಾರಣಕ್ಕಾಗಿ ಸ್ಥಳೀಯ ಖೈದಿಗಳನ್ನಲ್ಲದೆ, ದೇಶ-ವಿದೇಶದ ಅಪರಾಧ ಖೈದಿಗಳನ್ನು ಬಂಧಿಸಲಾಗುತ್ತಿತ್ತು. ‘೩೦ ಆಗಸ್ಟ್ ೧೯೨೧ರಲ್ಲಿ ಕೇರಳದಲ್ಲಿ ನಡೆದ ‘ಮಾಪಿಳ್ಳೆ ದಂಗೆ’ಯಲ್ಲಿ ಸೆರೆಯಾದ ಸಾವಿರಾರು ಮುಸ್ಲಿಂ ಗೇಣಿದಾರರನ್ನು ಬಳ್ಳಾರಿಗೆ ಕರೆ ತಂದು ಅಲ್ಲಿಪುರ ಜೈಲಿನಲ್ಲಿಡಲಾಗಿತ್ತು’.[೪೯] ಈ ಜೈಲ್‌ನಲ್ಲಿದ್ದ ಕೆಲವು ಕೈದಿಗಳು ಜಾಮೀನ ಆಧಾರದ ಮೇಲೆ ಬಿಡುಗಡೆಗೊಳ್ಳುತ್ತಿದ್ದರು. ಇನ್ನೂ ಕೆಲವರು ಶಿಕ್ಷೆಯ ಅವಧಿ ಪೂರ್ಣಗೊಳ್ಳುವವರೆಗೆ ಇರುತ್ತಿದ್ದರು. ಶಿಕ್ಷೆಯ ಅವಧಿ ಪೂರ್ಣಗೊಳ್ಳದೇ ಇರುವ ಅಂದರೆ, ವಯಸ್ಸು ಆದ ಖೈದಿಗಳು ಜೈಲ್‌ನಲ್ಲಿಯೇ ಮರಣವನ್ನಪ್ಪುತ್ತಿದ್ದರು. ೧೯೪೨ರಲ್ಲಿ ಅಲ್ಲಿಪುರ ಜೈಲ್‌ನಲ್ಲಿದ್ದ ಖೈದಿಯ ಸಂಖ್ಯೆ-೧೬೨೩, ದೀನ ದಯಾಲು ನಾಯ್ದು ಎಂಬ ಖೈದಿಯು ಸಿ.ಕೆ. ವಿಜಯ ರಾಘವನ್ ಐ.ಸಿ.ಎಸ್. ಜಿಲ್ಲಾ ಮ್ಯಾಜಿಸ್ಟ್ರೇಟ್ ತಂಜಾವೂರ್ ಅವರ ಮೂಲಕ ಬಿಡುಗಡೆಯ ಜಾಮೀನು ಮನವಿ ಪತ್ರವನ್ನು ಸರ್ಕಾರದ ಕಾರ್ಯದರ್ಶಿಗಳು ಗೃಹ ಇಲಾಖೆ, ಪೋರ್ಟ್ ಸೇಂಟ್ ಜಾರ್ಜ್, ಮದ್ರಾಸ್ ಇವರಿಗೆ ಸಲ್ಲಿಸಿದ್ದರು. ಇದನ್ನು ಪರಿಶೀಲಿಸಿದ ಗೃಹ ಇಲಾಖೆಯು ದೀನ ದಯಾಲು ನಾಯ್ಡು ಎಂಬ ಖೈದಿಗೆ ಜಾಮೀನುದಾರರಾಗಿ ಬಂದ ಶ್ರೀ ಟಿ.ಆರ್. ನಾರಾಯಣಸ್ವಾಮಿ ಅವರಿಂದ ನೂರು ರೂಪಾಯಿಗಳ ಶ್ಯೂರಿಟಿಯನ್ನು ಬಳ್ಳಾರಿ ಜಿಲ್ಲಾ ಮ್ಯಾಜಿಸ್ಟ್ರೇಟ್‌ರವರ ಸಮಕ್ಷದಲ್ಲಿ ಪಡೆದು, ಖೈದಿಯನ್ನು ಬಿಡುಗಡೆ ಮಾಡುವಂತೆ ಆರ್. ಹೋವ್ ಸೂಪರಿಂಟೆಂಡೆಂಟ್, ಅಲ್ಲಿಪುರಂ ಜೈಲ್, ಬಳ್ಳಾರಿ ಇವರಿಗೆ ಆದೇಶ ಸಂಖ್ಯೆ: ೮೭೮, ಗೃಹ ಇಲಾಖೆ, ದಿನಾಂಕ: ೧೪ನೇ ಮಾರ್ಚ್ ೧೯೪೨ರಂದು ಆದೇಶ ನೀಡಿತು.[೫೦] ಇದರನ್ವಯ ಅಲ್ಲಿಪುರ ಜೈಲ್‌ನ ಸೂಪರಿಂಟೆಂಡೆಂಟ್ ಆಗಿದ್ದ ಆರ್. ಹೋವ್ ಅವರು ತಂಜಾವೂರಿನ ಖೈದಿಯಾಗಿದ್ದ ದೀನದಯಾಲು ನಾಯ್ಡು ಅವರನ್ನು ಬಿಡುಗಡೆ ಮಾಡಲಾಗಿದೆ. ಅಪರಾಧ ಶಿಕ್ಷೆ ಪೂರ್ಣಗೊಳಲ್ಲದೆ ಇರುವ ಖೈದಿಗಳು ಈ ಜೈಲಿನಲ್ಲಿಯೇ ಅಸುನೀಗಿದ ಸುಮಾರು ೨೦೦ಕ್ಕೂ ಹೆಚ್ಚು ಟರ್ಕಿಯ ಯುದ್ಧ ಖೈದಿಗಳ ಸಮಾಧಿಗಳು ಇಂದಿಗೂ

ಅಲ್ಲಿಪುರದಲ್ಲಿ ನೋಡಲು ಕಂಡುಬರುತ್ತವೆ. ‘ಟರ್ಕಿ ದೇಶದ ರಾಯಭಾರ ಕಛೇರಿಯ ನೆರವಿನೊಂದಿಗೆ ಅಲ್ಲಿಪುರದ ಬಳಿಯಿರುವ ಟರ್ಕಿ ದೇಶದ ನಾಗರಿಕರ ಸಮಾಧಿಗಳಿರುವ ಸ್ಥಳವನ್ನು ಭವ್ಯ ಸ್ಮಾರಕವಾಗಿ ಅಭಿವೃದ್ಧಿ ಪಡಿಸಲಾಗಿದೆ’.[೫೧] ಇಲ್ಲಿರುವ ಸಮಾಧಿಗಳಲ್ಲಿ ಅಬ್ದುಲ್ ಸಲಾ ಅಷಾಭಾಷಾ ಎನ್ನುವ ಟರ್ಕಿಯ ಯುವರಾಜನೊಬ್ಬನ ಸಮಾಧಿಯೂ ಇದೆ.

ಭದ್ರತೆಯ ದೃಷ್ಟಿಯಿಂದ ಈ ಜೈಲಿನ ಸುತ್ತ ಹಾಕಲಾಗಿದ್ದ ಮುಳ್ಳುತಂತಿ ಬೇಲಿಗೆ ೧೯೨೨ರಿಂದ ವಿದ್ಯುತ್ ಹರಿಸುವ ಕ್ರಮ ಜಾರಿಗೆ ಬಂದಿತು. ಸ್ವಾತಂತ್ರ್ಯ ಹೋರಾಟದ ಕಿಚ್ಚು ಹೆಚ್ಚಾಗಿದ್ದ ಕಾರಣದಿಂದ ಪ್ರಾಯಶಃ ಈ ಪದ್ಧತಿಯನ್ನು ಜಾರಿಗೆ ತಂದಿರಬಹುದು. ಅಲ್ಲಿಪುರ ಜೈಲ್‌ಗೆ ಚಾರಿತ್ರಿಕ ಮಹತ್ವವಿದೆ. ಕಾರಣ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನೂರಾರು ಸತ್ಯಾಗ್ರಹಿಗಳನ್ನು ಈ ಜೈಲಿನಲ್ಲಿ ಕೂಡಿಡಲಾಗುತ್ತಿತ್ತು. ಅಂಥವರಲ್ಲಿ ಚಕ್ರವರ್ತಿ ರಾಜಗೋಪಾಲಚಾರಿ, ಕಾಮರಾಜ, ಟಿ.ವಿ. ಸುಬ್ಬಾಶೆಟ್ಟಿ, ಜಿ. ಲಚ್ಚಣ್ಣ, ಒ.ಎ. ಆಳಗೇಶನ್, ಬೆಜವಾಡ ಗೋಪಾಲರೆಡ್ಡಿ, ಪೊಟ್ಟಿ ಶ್ರೀರಾಮುಲು, ಬುಲುಸು ಸಾಂಬಮೂರ್ತಿ ಮುಂತಾದ ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರರೆಲ್ಲ ಈ ಜೈಲುವಾಸ ಅನುಭವಿಸಿದರು. ‘ಕಾರಾಗೃಹದಲ್ಲಿ ಶಿಕ್ಷೆ ಅನುಭವಿಸಿದ ಖೈದಿಗಳು ಬಡಗಿ, ಹೊಲಿಗೆ, ನೇಯ್ಗೆ, ಸಾಬೂನ್, ಕಮ್ಮಾರಿಕೆ ಮಾಡುವ ವಿಭಾಗಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದರು. ಇವರು ಕೇವಲ ಶ್ರಮದಾನ ಮಾಡುವುದಷ್ಟೇ ಅಲ್ಲದೆ, ಅವರ ಮನೋ ವಿಕಾಸಕ್ಕಾಗಿ ಗ್ರಂಥಾಲಯ, ಕ್ರೀಡಾ ಸಾಮಗ್ರಿಗಳನ್ನು ಒದಗಿಸಲಾಗಿತ್ತು’.[೫೨] ಗ್ರಂಥಾಲಯದಲ್ಲಿ ದಿನಪತ್ರಿಕೆ, ವಾರಪತ್ರಿಕೆ, ಮಾಸಪತ್ರಿಕೆಗಳು ಇಲ್ಲಿಗೆ ಬರುತ್ತಿದ್ದವು. ಸ್ವಾತಂತ್ರ್ಯನಂತರ ಅಲ್ಲಿಪುರ ಜೈಲ್ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಕಾರಣ ಬ್ರಿಟಿಷರು ಭಾರತವನ್ನು ೧೯೪೭ರಲ್ಲಿ ಬಿಟ್ಟು ಹೋದ ಮೇಲೆ ಬಳ್ಳಾರಿಯಲ್ಲಿದ್ದ ದಾಖಲೆಗಳನ್ನು ಕೇಂದ್ರ ಆಡಳಿತ ಕಛೇರಿಯಾಗಿದ್ದ ಮದ್ರಾಸ್‌ಗೆ ರವಾನಿಸಿದ್ದರು. ಜೊತೆಗೆ ಜೈಲ್‌ನ ಉಸ್ತುವಾರಿಯು ಕುಂಟಿತಗೊಂಡಿತು. ಹಾಗಾಗಿ, ಇಲ್ಲಿದ್ದ ಖೈದಿಗಳನ್ನು ಹಾಗೂ ಕೆಲವು ದಾಖಲೆಗಳನ್ನು ಕೇಂದ್ರ ಕಾರಾಗೃಹಕ್ಕೆ ಸ್ಥಳಾಂತರಿಸಲಾಯಿತು. ಇದರಿಂದ ಅಲ್ಲಿಪುರ ಜೈಲು ಪಾಳುಬಿದ್ದಿತು. ಇದನ್ನು ಗಮನಿಸಿದ ಮೈಸೂರು ಸರ್ಕಾರವು ೧೯೫೬-೫೮ರ ಅವಧಿಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರಿಂದ ಬಳ್ಳಾರಿಯಲ್ಲಿ ಪಾಳುಬಿದ್ದ ಅಲ್ಲಿಪುರ ಜೈಲನ್ನು ೧೯೫೮ರಲ್ಲಿ ಬಳ್ಳಾರಿ ವೈದ್ಯಕೀಯ ಕಾಲೇಜ್‌ಗೆ ನೀಡಿದ್ದರಿಂದ ಅದು ೧೯೬೧ರಲ್ಲಿ ವೈದ್ಯಕೀಯ ಮಹಾವಿದ್ಯಾಲಯವಾಗಿ ಹೊರಹೊಮ್ಮಿತು. ಅದು ಪ್ರಸ್ತುತವೂ ಕಾರ್ಯನಿರ್ವಹಿಸುತ್ತಿದೆ. ಆದರೆ, ಇಲ್ಲಿ ಜೈಲೊಂದಿತ್ತು. ಸ್ವಾತಂತ್ರ್ಯ ಹೋರಾಟಗಾರರು ಅಲ್ಲಿ ಸೆರೆಮನೆವಾಸ ಅನುಭವಿಸಿದರು ಎಂಬುದನ್ನು ನೆನಪಿಸುವಂತಹ ಗುರುತುಗಳು ಇಲ್ಲವಾಗಿದೆ. ಚರಿತ್ರೆಯ ಗುರುತುಗಳನ್ನು ಹೀಗೆ ಅಳಿಸಿ ಹಾಕುವುದು ಸಾಧುವಲ್ಲ.

### ಬಳ್ಳಾರಿ ಕೇಂದ್ರ ಕಾರಾಗೃಹ

ಕ್ರಿ.ಶ. ೧೮೦೦ರಲ್ಲಿ ದತಮಂಡಲವನ್ನು ಈಸ್ಟ್ ಇಂಡಿಯಾ ಕಂಪನಿ ತನ್ನ ವಶಕ್ಕೆ ತೆಗೆದುಕೊಂಡಾಗ ಬಳ್ಳಾರಿಯಲ್ಲಿ ಯಾವ ಕಾರಾಗೃಹವೂ ಇರಲಿಲ್ಲ. ಜಿಲ್ಲೆಗೆ ಪ್ರಥಮ ಕಲೆಕ್ಟರ್

ಆಗಿ ಬಂದ ಸರ್ ಥಾಮಸ್ ಮನ್ರೋ ಕಾರಗೃಹಗಳ ಅಗತ್ಯವನ್ನು ಮನಗಂಡನು. ಏಕೆಂದರೆ, ಸರಕಾರದ ವಿರುದ್ಧ ಸ್ಥಳೀಯ ಹೋರಾಟಗಾರರು, ಯಾವ ಸಮಯದಲ್ಲಾದರೂ ಹಿಂಸಾತ್ಮಕ ಕಾರ್ಯಚಟುವಟಿಕೆಗಳಲ್ಲಿ ತೊಡಗಬಹುದು ಎಂಬ ಭಯದಿಂದ ಅವರನ್ನು ಸೆರೆ ಹಿಡಿದು ಜೈಲಿನಲ್ಲಿ ಬಂಧಿಸಲಾಗುತ್ತಿತ್ತು. ಆ ಮೂಲಕ ಸಮಾಜದಲ್ಲಿ ಶಾಂತಿ-ಸುವ್ಯವಸ್ಥೆಯನ್ನು ಸ್ಥಾಪಿಸುವ ಹಿತದೃಷ್ಟಿಯಿಂದ ಜೈಲುಗಳ ಸ್ಥಾಪನೆಗೆ ಮುಂದಾದನು. ಈ ಬಗ್ಗೆ "ಮದ್ರಾಸ್ ಸರ್ಕಾರಕ್ಕೆ ಮನವಿಯೊಂದನ್ನು ಸಲ್ಲಿಸಿದನು'.[೩೩] ಇದನ್ನು ಪರಿಶೀಲಿಸಿದ ಮದ್ರಾಸ್ ಸರ್ಕಾರವು ೧೮೬೬ರಲ್ಲಿ ಬಳ್ಳಾರಿಯಲ್ಲಿ ಕಾರಗೃಹವೊಂದನ್ನು ನಿರ್ಮಿಸುವ ಯೋಜನೆ ತಯಾರಾಗಿತ್ತು. ಆದರೆ, ಕೆಲವು ಕಾರಣಗಳಿಂದ ಅದು ವೆಲ್ಲೂರಿಗೆ ವರ್ಗಾವಣೆಯಾಯಿತು. ನಂತರ ೧೮೮೪ರಲ್ಲಿ ಬಳ್ಳಾರಿ ನಗರದಲ್ಲಿ ಒಂದು ಜೈಲನ್ನು ಸ್ಥಾಪಿಸಲಾಯಿತು. ಬಳ್ಳಾರಿ ಜಿಲ್ಲಾ ಕೇಂದ್ರ ಕಾರಗೃಹವು ಕನಕದುರ್ಗಮ್ಮ ಗುಡಿಯ ನೈರುತ್ಯ ದಿಕ್ಕಿನಲ್ಲಿ ಕಂಡುಬರುತ್ತದೆ.

ಈ ಕಾರಾಗೃಹದ ಆವರಣವು ೫೯.೧೮ ಎಕರೆಗಳಷ್ಟು ಭೂವಿಸ್ತೀರ್ಣವನ್ನು ಹೊಂದಿದೆ. ಅದರಲ್ಲಿ ೧೮ ಎಕರೆ ಭೂ ಪ್ರದೇಶದಲ್ಲಿ ಕಾರಾಗೃಹದ ಕಟ್ಟಡವನ್ನು '೪.೩೨ ಲಕ್ಷ ರೂಪಾಯಿಗಳ ವೆಚ್ಚದಲ್ಲಿ'[೩೪] ಕಟ್ಟಡದ ನಿರ್ಮಾಣ ಕಾರ್ಯ '೧೮೮೪ರಲ್ಲಿ ಆರಂಭಗೊಂಡಿದ್ದು, ೧೮೯೪ರಲ್ಲಿ ಪೂರ್ಣಗೊಂಡಿತ್ತು'.[೩೫] ಅಂದು ಸಾರ್ವಜನಿಕವಾಗಿ ಈ ಕಾರಾಗೃಹ ಸ್ಥಾಪಿಸಲ್ಪಟ್ಟಿತ್ತು. ಇದರಲ್ಲಿ ಒಂಬತ್ತು ಬ್ಲಾಕ್‌ಗಳು, ೩೦೬ ಕೊಠಡಿಗಳಿವೆ. ಅದರಲ್ಲಿ ೩೦೨ ವರ್ಗದ ಕೊಠಡಿಗಳಿವೆ. ಈ ಕಾರಾಗೃಹದಲ್ಲಿ ೭೧೭ ಪುರುಷರು, ೫೦ ಜನ ಮಹಿಳಾ ಕೈದಿಗಳನ್ನು ಬಂಧಿಸಲು ಸ್ಥಳಾವಕಾಶವಿದೆ. ಇಲ್ಲಿ ಕೇವಲ ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ ಜಿಲ್ಲೆಗಳಲ್ಲದೇ ರಾಜ್ಯದ ಎಲ್ಲಾ ಜಿಲ್ಲೆಗಳ ಕೈದಿಗಳನ್ನು ಬಂಧಿಸಲಾಗುತ್ತಿದೆ.

ಬಳ್ಳಾರಿ ಕೇಂದ್ರ ಕಾರಾಗೃಹದಲ್ಲಿ ನಿರಂತರವಾಗಿ ಕೈದಿಗಳ ಮೇಲ್ವಿಚಾರಣೆ ಮಾಡುವ ಕಾರಾಗೃಹ ಮತ್ತು ಉಪಕಾರಾಗೃಹ ಸಿಬ್ಬಂದಿಯ ಕಾರ್ಯಕ್ಷಮತೆಯನ್ನು ಹೆಚ್ಚಿಸಲು ಕಾರಾಗೃಹ ಇಲಾಖೆಯು ತರಬೇತಿ ಕಾರ್ಯಾಗಾರಗಳನ್ನು ಸದ್ದಿಲ್ಲದೆ ಹಮ್ಮಿಕೊಳ್ಳಲಾಗುತ್ತಿದೆ. ಇದು ಬೆಂಗಳೂರು ವೃಕ್ಷಂ ಟ್ಯಾಲೆಂಟ್ ಗ್ರೂಪ್ ಸಹಯೋಗದಲ್ಲಿ ತರಬೇತಿಯು ಆರು ತಿಂಗಳಿಗೊಮ್ಮೆ ಎರಡು ದಿನಗಳ ಕಾಲ ನಡೆಯುತ್ತಿದೆ. ಈ ಕಾರ್ಯಕ್ರಮದ ಮೂಲ ಆಶಯ ಕಾರ್ಯಕ್ಷಮತೆ ಮತ್ತು ವೈಯಕ್ತಿಕ ಸಾಮರ್ಥ್ಯ ಹೆಚ್ಚಿಸಿಕೊಳ್ಳುವ ಹಲವು ಪಾಠಗಳನ್ನು ಸಿಬ್ಬಂದಿಗೆ ಹೇಳಿಕೊಡಲಾಗುತ್ತಿದೆ. ಕೈದಿಗಳ ಜೊತೆಗೆ ಕರುಣೆ, ಅನುಕಂಪದಿಂದ ವರ್ತಿಸುವುದು ಹೇಗೆ? ಪ್ರಭಾವ ಮತ್ತು ಜನ ಸಂಪರ್ಕವಿಲ್ಲದ ಪರಿಸ್ಥಿತಿಯಲ್ಲಿ ಕೈದಿಗಳೊಡನೆ ಕೆಲಸ ಮಾಡುವಾಗ ಆತ್ಮವಿಶ್ವಾಸ ಕುಗ್ಗದಂತೆ ಎಚ್ಚರ ವಹಿಸುವುದು ಹೇಗೆ ಎಂಬುದೂ ಸೇರಿದಂತೆ ಎಂಬ ಪ್ರಶ್ನೆಗಳ ನಡುವೆಯೇ ದಿನದೂಡುತ್ತಿರುವ ಸಿಬ್ಬಂದಿಗಾಗಿ ವಿಶೇಷ ಕಾರ್ಯಾಗಾರ ಆಯೋಜನೆಗೊಂಡಿರುತ್ತದೆ. ಪೊಲೀಸರು ಮತ್ತು ಕಾರಾಗೃಹ ಸಿಬ್ಬಂದಿಯ ಕೆಲಸ ಒಂದೇ ಬಗೆಯದ್ದು ಎಂಬುದು ಬಹುತೇಕ ಸಾರ್ವಜನಿಕರ ಅಭಿಪ್ರಾಯ. ಆದರೆ, ಪೊಲೀಸರಿಗೆ ಇರುವಷ್ಟು ಪ್ರಭಾವ, ಜನಸಂಪರ್ಕ ಕಾರಾಗೃಹ ಸಿಬ್ಬಂದಿಗೆ

ಇರುವುದಿಲ್ಲ. ಅನೇಕ ಕಾರಣಗಳಿಂದ ಕಾರಾಗೃಹದ ಬಹುತೇಕ ಸಿಬ್ಬಂದಿಯು ನಿರುತ್ಸಾಹ ಮತ್ತು ಖಿನ್ನತೆಗೆ ಒಳಗಾಗುತ್ತಾರೆ. ಅದು ಅವರ ಕಾರ್ಯಕ್ಷಮತೆಯನ್ನೂ ಕುಗ್ಗಿಸುತ್ತದೆ. ಇತರೆ ಇಲಾಖೆಗಳ ಅಧಿಕಾರಿಗಳು, ಸಿಬ್ಬಂದಿಯ ಕಡತಗಳು ಹಾಗೂ ಸಾರ್ವಜನಿಕರೊಂದಿಗೆ ಕೆಲಸ ಮಾಡುತ್ತಾರೆ, ಆದರೆ ಕಾರಾಗೃಹದ ಸಿಬ್ಬಂದಿಯು ಅಪರಾಧಿ ಕೈದಿಗಳ ಜೊತೆ ಕೆಲಸ ಮಾಡಬೇಕಾಗುತ್ತದೆ. ಇಂತಹ ದಿನಚರಿಯಲ್ಲಿ ಪ್ರತಿದಿನವೂ ಶಾಂತಚಿತ್ತರಾಗಿ ಇರುವುದು ಕಷ್ಟಸಾಧ್ಯ. ಕಷ್ಟಕರವಾದ ಇಂಥ ಸನ್ನಿವೇಶಗಳನ್ನು ಸಮರ್ಥವಾಗಿ ನಿಭಾಯಿಸುವುದು ಹೇಗೆ ಎಂಬಿತ್ಯಾದಿ ಅಂಶಗಳ ಕುರಿತು ಕಾರ್ಯಾಗಾರದಲ್ಲಿ ತರಬೇತಿ ನೀಡಲಾಗುತ್ತದೆ ಎಂದು ಕೇಂದ್ರ ಕಾರಾಗೃಹ ಸೂಪರಿಂಟೆಂಡೆಂಟ್ ಆದ ಡಾ. ಪಿ. ರಂಗನಾಥ್ ಮತ್ತು ಕಾರಾಗೃಹದ ಜೈಲರ್ ಆದ ಶರಣಬಸಪ್ಪ ಅವರಿಂದ ಮಾಹಿತಿ ಸಂಗ್ರಹಿಸಲಾಗಿದೆ.

ಬ್ರಿಟಿಷರು ಆಡಳಿತದ ಅನುಕೂಲಕ್ಕಾಗಿ ಪ್ರತಿಯೊಂದು ತಾಲೂಕಿನಲ್ಲಿ ಪೊಲೀಸ್ ಠಾಣೆಯ ಪಕ್ಕದಲ್ಲಿ ಅಥವಾ ತಾಲೂಕು ಕಛೇರಿಯ ಪಕ್ಕದಲ್ಲಿ ಸಬ್ ಜೈಲ್‌ಗಳನ್ನು ಸ್ಥಾಪಿಸಿಕೊಂಡಿದ್ದರು. ಅವುಗಳಲ್ಲಿ ಹೊಸಪೇಟೆ ಮತ್ತು ಆದೋನಿ ತಾಲೂಕುಗಳಲ್ಲಿ ಬ್ರಿಟಿಷರು ಸ್ಥಾಪಿಸಿದ್ದ ಜೈಲ್ ಕಟ್ಟಡಗಳಲ್ಲಿಯೇ ಪ್ರಸ್ತುತವು ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು. ಇನ್ನೂ ಉಳಿದ ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ, ಸಿರುಗುಪ್ಪ, ಆಲೂರು ಮತ್ತು ರಾಯದುರ್ಗ ತಾಲೂಕುಗಳಿದ್ದ ಸಬ್ ಜೈಲುಗಳು ಪಾಳುಬಿದ್ದಿರುವುದನ್ನು ಗಮನಿಸಲಾಗಿದೆ.

ಬ್ರಿಟಿಷರು ಭಾರತವನ್ನು ಆಳಲು ಪ್ರಾರಂಭಿಸುವುದಕ್ಕಿಂತ ಪೂರ್ವದಲ್ಲಿ ಕಾನೂನು ಮತ್ತು ಶಿಸ್ತನ್ನು ಕಾಪಾಡುವ ಕರ್ತವ್ಯಗಳನ್ನು ಪ್ರಾಂತೀಯ ರಾಜನ ಹಾಗೂ ಅವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಜಮೀನ್ದಾರರು, ಕಿಲ್ಲೇದಾರರು, ಹೋಬಳಿದಾರರು, ಶೇಕ್‌ದಾರರು ಹಾಗೂ ಗ್ರಾಮೀಣ ಸ್ಥಳಗಳಲ್ಲಿ ಊರಿನ ಒಡೆಯ ಅಥವಾ ಗೌಡನ ಅಧೀನದಲ್ಲಿ ಕೇಂದ್ರೀಕೃತಗೊಂಡಿತು. ಈ ಅಧಿಕಾರವನ್ನು 'ಲಾರ್ಡ್ ಕಾರ್ನ್‌ವಾಲೀಸ್‌ನು ಮೊಟಕುಗೊಳಿಸಿ, ಹೊಸ ವ್ಯವಸ್ಥೆಯನ್ನು ಜಾರಿಗೆ ತಂದು, ಅದರ ಜವಾಬ್ದಾರಿಗಳನ್ನು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ವರ್ಗಾಯಿಸಿದನು'.[೫೬] ಇದರಿಂದ ಜಿಲ್ಲೆಯ ಸಂಪೂರ್ಣ ಜವಾಬ್ದಾರಿ ಅವನ ಕೈಯಲ್ಲಿತ್ತು. ನಂತರ 'ಲಾರ್ಡ್ ವಿಲಿಯಂ ಬೆಂಟಿಂಕ್‌ನ ಆಡಳಿತ ಕ್ರಮದಲ್ಲಿ ಕೆಲವು ಬದಲಾವಣೆಗಳಾದವು. ಅದರಲ್ಲಿ ಮ್ಯಾಜಿಸ್ಟ್ರೇಟನ ಕರ್ತವ್ಯವನ್ನು ನ್ಯಾಯಾಧೀಶನಿಂದ ಕಲೆಕ್ಟರನಿಗೆ ವರ್ಗಾಯಿಸಲಾಯಿತು'.[೫೭] ಕಲೆಕ್ಟರ್ ತನ್ನ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಪೊಲೀಸ್ ಮುಖ್ಯಾಧಿಕಾರಿಯೂ ಆಗಿ ಕಾರ್ಯನಿರ್ವಹಿಸುತ್ತಿದ್ದರು. ಈತನು ಪ್ರತಿ ಜಿಲ್ಲೆಯನ್ನು ಅನೇಕ ಠಾಣೆಗಳಾಗಿ ವಿಭಾಗಿಸಿ, ಆ ಸ್ಥಳದಲ್ಲಿ ಕಾನೂನು ಮತ್ತು ಶಿಸ್ತನ್ನು ಕಾಪಾಡಲು ಪ್ರತಿಯೊಂದು ಪೊಲೀಸ್ ಠಾಣೆಯೂ ಒಬ್ಬ ದರೋಗನ ಕೈಕೆಳಗಿರುತ್ತಿತ್ತು. ದರೋಗನ ಕೈಕೆಳಗೆ ಅನೇಕ ಸಶಸ್ತ್ರ ಸೈನಿಕರು ಇರುತ್ತಿದ್ದರು. ಈ ದರೋಗನಿಗೆ ಅಪರಾಧಿಗಳಿಗೆ ಶಿಕ್ಷಿಸುವ ಅಥವಾ ಸಂಪೂರ್ಣ ಸ್ವಾತಂತ್ರ್ಯ ನಿರ್ಧಾರ ತೆಗೆದುಕೊಳ್ಳುವ ಅಧಿಕಾರ ಇರಲಿಲ್ಲ. ಕೇವಲ ಮೇಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವ ಒಂದು ಜವಾಬ್ದಾರಿ

ಅವರ ಮೇಲಿತ್ತು. ಈ 'ವ್ಯವಸ್ಥೆ ಒಂದು ದುಬಾರಿ ವೈಫಲ್ಯ' ಆಯಿತು. ಈ ವೈಫಲ್ಯದಿಂದ ೧೮೧೩ರಲ್ಲಿ ಡೈರೆಕ್ಟರುಗಳ ಮಂಡಲಿಯು ಭಾರತದಲ್ಲಿನ ಕಂಪನಿಯ ಪ್ರದೇಶಗಳ ಪೊಲೀಸ್ ಆಡಳಿತದ ಸ್ಥಿತಿಯನ್ನು ತನಿಖೆ ಮಾಡಲು ಒಂದು ವಿಶೇಷ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ಶಿಫಾರಸ್ಸಿನನ್ವಯ ೧೮೧೪ರಲ್ಲಿ ಮಂಡಳಿಯು ದರೋಗರನ್ನು ಮತ್ತು ಅವರ ಕೆಳಗಿನ ಅಧಿಕಾರಿಗಳ ನೇಮಕವನ್ನು ಖಂಡಿಸಿ, ಗ್ರಾಮೀಣ ಪೊಲೀಸರನ್ನು ಮತ್ತು ನೇಮಕ ಮಾಡುವಂತೆ ಆಜ್ಞೆಗಳನ್ನು ಹೊರಡಿಸಿದರು. ಈ ಆಜ್ಞೆಗಳನ್ನು ಜಾರಿಗೊಳಿಸಲು ಸರ್‌ಥಾಮಸ್ ಮನ್ರೋ ಮತ್ತು ಸ್ಟ್ರಾಟ್‌ನರನ್ನು ಕಮಿಷನರುಗಳನ್ನಾಗಿ ನೇಮಿಸಿತು. ಅವರ ಪ್ರಕಾರ 'ಇಡೀ ಪ್ರೆಸಿಡೆನ್ಸಿಯಲ್ಲಿ ಸಾಮಾನ್ಯ ಪೊಲೀಸ್ ವ್ಯವಸ್ಥೆಯನ್ನು ಸ್ಥಾಪಿಸಲು ೧೮೧೬ರ ಮದ್ರಾಸ್ ರೆಗ್ಯುಲೇಷನ್ ಹನ್ನೊಂದನ್ನು ಅಂಗೀಕರಿಸಲಾಯಿತು'.[೫೮] ಭಾರತದಲ್ಲಿ ಬ್ರಿಟಿಷರ ವಿರುದ್ಧ ನಡೆಯುವ ದಂಗೆಗಳು, ಹೋರಾಟಗಳು, ಸತ್ಯಾಗ್ರಹಗಳನ್ನು ಸದೆಬಡಿಯುವಂತಹ ಒಂದು ಸಂಘಟಿತವಾದ ಪೊಲೀಸ್ ವ್ಯವಸ್ಥೆ ಬ್ರಿಟಿಷರಿಗೆ ಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಅವರು ಭಾರತದಲ್ಲಿ ಒಂದು ವ್ಯವಸ್ಥಿತವಾದ ಪೊಲೀಸ್ ವ್ಯವಸ್ಥೆಯನ್ನು ಜಾರಿಗೆ ತಂದಿದ್ದು ೧೮೧೬ರಲ್ಲಿ. ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಮೊದಲಗೊಂಡು, ನಂತರ ತನ್ನ ಪ್ರಾಂತ್ಯದಲ್ಲಿದ್ದ ಜಿಲ್ಲೆಗಳಲ್ಲಿಯೂ ಪೊಲೀಸ್ ವ್ಯವಸ್ಥೆಯನ್ನು ಆಯೋಜಿಸಲಾಗಿತ್ತು.

'೧೮೫೫ರ ಚಿತ್ರ' ಹಿಂಸೆ ಸಮಿತಿ(ಟಾರ್ಚರ್ ಕಮಿಷನ್) ಕಂದಾಯ ವಸೂಲಿ ಮತ್ತು ಪೊಲೀಸ್ ಕರ್ತವ್ಯಗಳನ್ನು ಬೇರ್ಪಡಿಸಿ, ಪೊಲೀಸ್ ಆಡಳಿತವನ್ನು ಸ್ವತಂತ್ರ್ಯ ಐರೋಪ್ಯ ಅಧಿಕಾರಿಗಳ ಅಧೀನದಲ್ಲಿಡುವಂತೆ ಅದು ಶಿಫಾರಸ್ಸು ಮಾಡಿತು. ಇದನ್ನು ೧೮೫೯ರ ೨೪ನೆಯ ರೆಗ್ಯುಲೇಷನ್ ಜಾರಿಗೆ ತಂದಿತು'.[೫೯] ಇದರನ್ವಯ ಪೊಲೀಸ್ ವಿಭಾಗವನ್ನು ಇಂಗ್ಲಿಷ್ ಹಾಗೂ ಐರಿಷ್ ಮಾದರಿಗಳ ಮೇಲೆ ಪುನರ್ವ್ಯಸ್ಥೆ ಮಾಡಲಾಯಿತು. ಪ್ರೆಸಿಡೆನ್ಸಿಯ ಪೊಲೀಸ್ ಆಡಳಿತವನ್ನು ಪೊಲೀಸ್ ಕಮಿಷನರಿಗೆ ವಹಿಸಲಾಯಿತು. ಅವನ ಸಹಾಯಕ್ಕೆ ಕೆಳ ಅಧಿಕಾರಿಗಳಿದ್ದರು. ಪ್ರತಿ ಜಿಲ್ಲೆಯನ್ನು ಒಬ್ಬ ಸೂಪರಿಂಟೆಂಡೆಂಟ್‌ನಿಗೆ ಜವಾಬ್ದಾರಿ ವಹಿಸಲಾಯಿತು.

ಕ್ರಿ.ಶ. ೧೮೬೧ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಆಯಾ ಜಿಲ್ಲೆಯಲ್ಲಿರುವ ಪೊಲೀಸ್ ಠಾಣೆಗಳ ಹಾಗೂ ಅಧಿಕಾರಿಗಳ ಮೇಲುಸ್ತುವಾರಿಯನ್ನು ಸೂಪರಿಂಟೆಂಡೆಂಟ್‌ನು ಅಧಿಕಾರ ವಹಿಸಿಕೊಂಡಾಗ ಬಳ್ಳಾರಿ ಜಿಲ್ಲೆಯಲ್ಲಿದ್ದ ಎಲ್ಲಾ ತಾಲೂಕು ಮತ್ತು ಹೋಬಳಿಗಳಲ್ಲಿ ಪೊಲೀಸ್ ಠಾಣೆಗಳು ಆರಂಭಗೊಂಡಿದ್ದವು. ಮೊದಲು ಬಳ್ಳಾರಿ ನಗರದಲ್ಲಿ ಪ್ರಧಾನ ಪೊಲೀಸ್ ಆಡಳಿತ ಕಛೇರಿಯನ್ನು ಸ್ಥಾಪಿಸಿದ್ದರು. ಆರಂಭದಲ್ಲಿ ಯಾವುದೇ ಕಟ್ಟಡ ಇರಲಿಲ್ಲ. ಹಾಗಾಗಿ 'ಡಿ.ಡಬ್ಲ್ಯೂ ಕೋವಿ. ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಇವರ ಅನುಮತಿಯ ಮೇರೆಗೆ ಕಟ್ಟಡವನ್ನು ಲೀಸ್‌ಗೆ ಪಡೆದಿದ್ದು, ಪ್ರತಿ ತಿಂಗಳು ೮೦ ರೂಪಾಯಿ ಬಾಡಿಗೆ ನೀಡಲಾಗುತ್ತಿತ್ತು'.[೬೦] ಈ ಭೂಮಿಯ ಮಾಲೀಕನು ಈ ಜಮೀನನ್ನು ೨೦,೦೦೦ ರೂಪಾಯಿಗಳಿಗೆ ಮಾರಲು ಸಿದ್ಧನಿದ್ದ. ಈ ಕಟ್ಟಡದ ಮೌಲ್ಯ ೧೭,೭೩೭ ರೂಪಾಯಿಗಳೆಂದು ಅಂದಾಜಿಸಿ, ಸಮಂಜಸವೆಂದು

ಹೇಳಿದ್ದರು. 'ಬಾಡಿಗೆ ಇದ್ದ ಕಟ್ಟಡವನ್ನು ಭೂ ಸ್ವಾಧೀನ ಕಾಯ್ದೆ ೧೮೯೪ರ ಅಡಿಯಲ್ಲಿ ಖರೀದಿಸಲು ಸೂಚಿಸಲಾಗಿದೆ. ಇದರನ್ವಯ ಭೂಮಿಯನ್ನು ರೂ. ೧೭,೭೩೬/-ಕ್ಕೆ ಖರೀದಿಸ ಲಾಗಿತ್ತು'.[೮] ಇದರಿಂದ ವಿಶಾಲವಾದ ಆವರಣದಲ್ಲಿ ಕಟ್ಟಡಗಳನ್ನು ನಿರ್ಮಿಸತೊಡಗಿದ್ದರು. ಪೊಲೀಸ್ ಆಡಳಿತ ಕೇಂದ್ರ ಕಛೇರಿಯು ೮೬೧ರಲ್ಲಿ ಆರಂಭಗೊಂಡಿತು. ನಂತರ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿಯೂ ಆರಂಭಗೊಂಡವು. ಅವುಗಳೆಂದರೆ,

**ಹೊಸಪೇಟೆ ಪೋಲೀಸ್ ಠಾಣೆ** : ಹೊಸಪೇಟೆ ಪಟ್ಟಣದಲ್ಲಿ ಪೊಲೀಸ್ ಠಾಣೆಯು ಬಸ್‌ಸ್ಟ್ಯಾಂಡ್ ಪಕ್ಕದಲ್ಲಿ ಉತ್ತರಾಭಿಮುಖವಾಗಿದೆ. ಇದು ೧೮೬೫ರಲ್ಲಿ ನಿರ್ಮಾಣಗೊಂಡಿದೆ.

**ಹೂವಿನಹಡಗಲಿ ಪೊಲೀಸ್ ಠಾಣೆ** : ಹೂವಿನಹಡಗಲಿ ಪಟ್ಟಣದಲ್ಲಿ ಪೊಲೀಸ್ ಠಾಣೆಯು ೧೮೬೫ರಲ್ಲಿ ಹಳೆಯ ತಾಲೂಕು ಕಛೇರಿಯಲ್ಲಿ ಸ್ಥಾಪನೆಯಾಗಿತ್ತು. ತಾಲೂಕು ಕಛೇರಿಯು ಪಾಳುಬಿದ್ದಿದ್ದರಿಂದ ಪೊಲೀಸ್ ಠಾಣೆಯು ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದೆ.

**ಹರಪನಹಳ್ಳಿ ಪೊಲೀಸ್ ಠಾಣೆ** : ಹರಪನಹಳ್ಳಿ ಪಟ್ಟಣದಲ್ಲಿ ಪೊಲೀಸ್ ಠಾಣೆಯು ಪಟ್ಟಣದ ಮಧ್ಯಭಾಗದಲ್ಲಿ ಅಥವಾ ಸರ್ಕಾರಿ ಪದವಿ ಪೂರ್ವ ಕಾಲೇಜ್ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ಕಂಡುಬರುತ್ತದೆ. ಇದು ೧೮೬೫ರಲ್ಲಿ ನಿರ್ಮಾಣಗೊಂಡಿದೆ.

**ಆದೋನಿ ಪೊಲೀಸ್ ಠಾಣೆ** : ಆದೋನಿ ಪಟ್ಟಣದಲ್ಲಿ ಪೊಲೀಸ್ ಠಾಣೆಯು ಹಳೆಯ ತಾಲೂಕು ಕಛೇರಿಯ ಪಕ್ಕದಲ್ಲಿ ೧೮೬೫ರಲ್ಲಿ ಆರಂಭಗೊಂಡಿದೆ.

**ಆಲೂರು ಪೊಲೀಸ್ ಠಾಣೆ** : ಆಲೂರು ಪಟ್ಟಣದಲ್ಲಿ ಪೊಲೀಸ್ ಠಾಣೆಯು ಹಳೆಯ ಬಸ್‌ಸ್ಟ್ಯಾಂಡ್ ಎದುರುಗಡೆ ಕಂಡುಬರುತ್ತದೆ. ಹಳೆಯ ಕಟ್ಟಡವು ೧೮೬೫ರಲ್ಲಿ ನಿರ್ಮಾಣಗೊಂಡಿತ್ತು. ಕಾಲನಂತರದಲ್ಲಿ ಅದರ ಮುಂಭಾಗದಲ್ಲಿ ಹೊಸ ಕಟ್ಟಡ ನಿರ್ಮಾಣಗೊಂಡಿದೆ. ಪ್ರಸ್ತುತ ಇದರಲ್ಲಿ ಪೊಲೀಸ್ ಠಾಣೆಯು ಕಾರ್ಯ ನಿರ್ವಹಿಸುತ್ತಿದೆ.

**ರಾಯದುರ್ಗ ಪೊಲೀಸ್ ಠಾಣೆ** : ರಾಯದುರ್ಗ ಪಟ್ಟಣದಲ್ಲಿ ಪೊಲೀಸ್ ಠಾಣೆಯು ರಾಯದುರ್ಗದಿಂದ ಅನಂತಪುರಕ್ಕೆ ಹೋಗುವ ಮಾರ್ಗದ ಎಡಭಾಗದಲ್ಲಿ ಹಾಗೂ ಹಳೆಯ ತಾಲೂಕು ಕಛೇರಿಯ ಎದುರುಗಡೆ ಕಂಡುಬರುತ್ತದೆ. ಹಳೆಯ ಪೊಲೀಸ್ ಠಾಣೆಯು ೧೮೬೫ರಲ್ಲಿ ನಿರ್ಮಾಣಗೊಂಡಿತು. ನಂತರ ದಿನಗಳಲ್ಲಿ ಅದು ಪಾಳುಬಿದ್ದ ಕಾರಣ ಅದರ ಮುಂಭಾಗದಲ್ಲಿ ಹೊಸ ಕಟ್ಟಡದ ನಿರ್ಮಾಣಗೊಂಡಿದೆ. ಪ್ರಸ್ತುತ ಈ ಕಟ್ಟಡದಲ್ಲಿ ಪೊಲೀಸ್ ಠಾಮೆಯು ಕಾರ್ಯ ನಿರ್ವಹಿಸುತ್ತಿದೆ.

**ಹಿರೇಹಡಗಲಿ ಪೊಲೀಸ್ ಠಾಣೆ** : ಹೂವಿಹಡಗಲಿಯಿಂದ ೧೬ ಕಿಲೋಮೀಟರ್ ದೂರದಲ್ಲಿರುವ ಹಿರೇಹಡಗಲಿಯು ತಾಲೂಕಿನ ಪ್ರಮುಖ ಹೋಬಳಿ ಕೇಂದ್ರವಾಗಿದೆ. ಇಲ್ಲಿ ಪೊಲೀಸ್ ಠಾಣೆಯು ಹಳೆಯ ಬಸ್‌ಸ್ಟ್ಯಾಂಡ್ ಎದುರುಗಡೆ ಕಂಡುಬರುತ್ತದೆ. ಇದು ಸರ್ವೇ

ನಂ. ೩೯/ಎರಲ್ಲಿ ಒಂದು ಎಕರೆ ೨೮ ಸೆಂಟ್ಸ್ ಭೂ ವಿಸ್ತೀರ್ಣದ ಆವರಣದ ಮಧ್ಯಭಾಗದಲ್ಲಿ ಹಳೆಯ ಪೊಲೀಸ್ ಕಟ್ಟಡವು ೧೮೬೫ರಲ್ಲಿ ನಿರ್ಮಾಣಗೊಂಡಿದೆ. ಇದರ ಪಕ್ಕದಲ್ಲಿ ಹೊಸ ಕಟ್ಟಡವು ನಿರ್ಮಾಣಗೊಂಡಿದ್ದ ಕಾರಣದಿಂದ ಹಳೆಯ ಕಟ್ಟಡವು ಪಾಳುಬಿದ್ದಿದೆ.

**ಕೂಡ್ಲಿಗಿ ಪೊಲೀಸ್ ಠಾಣೆ** : ಕೂಡ್ಲಿಗಿ ಪಟ್ಟಣದಲ್ಲಿ ಪೊಲೀಸ್ ಠಾಣೆಯು ಹಳೆಯ ತಾಲೂಕು ಕಛೇರಿಯ ಪಕ್ಕದಲ್ಲಿದೆ. ಇದು ಸರ್ವೆ ನಂ. ೫೬೩ಎನಲ್ಲಿ, ೨.೧೧ ಚದರ ಅಡಿಗಳ ಭೂ ವಿಸ್ತೀರ್ಣದಲ್ಲಿ ಪೊಲೀಸ್ ಠಾಣೆಯು ಪಶ್ಚಿಮಾಭಿಮುಖವಾಗಿ, ೧೮೯೧ರಲ್ಲಿ ಆರಂಭಗೊಂಡಿದೆ.

**ಮರಿಯಮ್ಮನಹಳ್ಳಿ ಪೊಲೀಸ್ ಠಾಣೆ** : ಹೊಸಪೇಟೆಯಿಂದ ೧೮ ಕಿ.ಮೀ. ದೂರದಲ್ಲಿರುವ ಮರಿಯಮ್ಮನಹಳ್ಳಿಯು ಸೊಲ್ಲಾಪುರ ಚಿತ್ರದುರ್ಗ ರಸ್ತೆಯ ಮಾರ್ಗದ ರಾಷ್ಟ್ರೀಯ ಹೆದ್ದಾರಿ-೧೩ರಲ್ಲಿ ಹಾಗೂ ಹರಿಹರ-ಹೊಸಪೇಟೆ ಮಾರ್ಗದ ರಾಜ್ಯ ಹೆದ್ದಾರಿ-೨೫ರಲ್ಲಿ ಕಂಡುಬರುತ್ತದೆ. ಪ್ರಸ್ತುತ ಇದು ಹೊಸಪೇಟೆ ತಾಲೂಕಿನ ಪ್ರಮುಖ ಹೋಬಳಿ ಪಟ್ಟಣವಾಗಿದೆ. ಇಲ್ಲಿ ಬ್ರಿಟಿಷ್‌ರು ೧೮೯೬ರಲ್ಲಿ ಪೊಲೀಸ್ ಠಾಣೆಯನ್ನು ಸ್ಥಾಪಿಸಿದರು. ಈ ಪೊಲೀಸ್ ಠಾಣೆಯು ಮರಿಯಮ್ಮನಹಳ್ಳಿಯಿಂದ ಚಿತ್ರದುರ್ಗದ ಕಡೆ ಹೋಗಿರುವ ಮಾರ್ಗದ ಬಲಭಾಗದಲ್ಲಿ ಕಂಡುಬರುತ್ತದೆ. ಸರ್ವೆ ನಂ. ೯೦ರಲ್ಲಿ, ೭.೬೦ ಚದರ ಅಡಿ ಭೂ ವಿಸ್ತೀರ್ಣದಲ್ಲಿ ಪೊಲೀಸ್ ಠಾಣೆಯ ಕಟ್ಟಡವು ಉತ್ತರಾಭಿಮುಖವಾಗಿ ನಿರ್ಮಾಣಗೊಂಡಿದೆ. ಇದರ ಪಶ್ಚಿಮ ದಿಕ್ಕಿನ ಪೊಲೀಸ್ ವಸತಿಗಾಗಿ ೧೧ ವಸತಿಗೃಹಗಳು ಕಂಡುಬರುತ್ತವೆ.

**ಕೌಲ್ ಬಜಾರ್ ಪೊಲೀಸ್ ಠಾಣೆ** : ಕೌಲ್ ಬಜಾರ್ ಪೊಲೀಸ್ ಠಾಣೆಯು ೧೯೦೭ರಲ್ಲಿ ಆರಂಭಗೊಂಡಿದೆ.

**ಕೊಟ್ಟೂರು ಪೊಲೀಸ್ ಠಾಣೆ** : ಪೊಲೀಸ್ ಠಾಣೆಯು ಕೊಟ್ಟೂರು ಪಟ್ಟಣದ ಗಚ್ಚಿನ ಮಠದ ಹಿಂಭಾಗದಲ್ಲಿದೆ. ಇದು ಸರ್ವೆ ನಂ. ೩೮೪ರಲ್ಲಿ, ೭೬.೪೭ ಚದರ ಅಡಿಗಳ ಭೂ ವಿಸ್ತೀರ್ಣದಲ್ಲಿ ಪಶ್ಚಿಮಾಭಿಮುಖವಾಗಿ ೧೯೧೧ರಲ್ಲಿ ನಿರ್ಮಾಗೊಂಡಿದೆ. ಈ ಪೊಲೀಸ್ ಠಾಣೆಯು ೨೪ ಗ್ರಾಮಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಪೊಲೀಸ್ ಠಾಣೆಯ ಪಕ್ಕದಲ್ಲಿ ಪೊಲೀಸ್ ಕಾನ್‌ಸ್ಟೇಬಲ್‌ಗಳಿಗಾಗಿ ವಸತಿಗೃಹಗಳಿವೆ. ಇವು ಬ್ರಿಟಿಷ್‌ರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಕಟ್ಟಡಗಳಾಗಿವೆ.

**ಗುಡೇಕೋಟೆ ಪೊಲೀಸ್ ಠಾಣೆ** : ಗುಡೇಕೋಟೆ ಕೂಡ್ಲಿಗಿಯಿಂದ ಪೂರ್ವದಿಕ್ಕಿಗೆ ೨೮ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಮಧ್ಯಭಾಗದಲ್ಲಿ ಅಥವಾ ಪಾಳೆಯಗಾರರ ಮನೆಯ ಹಿಂಭಾಗದಲ್ಲಿ ಸ್ವಲ್ಪ ಅಂತರದಲ್ಲಿ ಪೊಲೀಸ್ ಠಾಣೆಯು ೧೯೧೩ರಲ್ಲಿ ಆರಂಭಗೊಂಡಿತ್ತು. ಆದರೆ, ಪ್ರಸ್ತುತ ಅದು ಹಳೆಯ ಪೊಲೀಸ್ ಠಾಣೆ ಪಾಳುಬಿದ್ದಿದ್ದರಿಂದ ಅಲ್ಲಿದ್ದ ಕಡತಗಳನ್ನು ಹಾಗೂ ಕಛೇರಿಯನ್ನು ಹೊಸ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ.

**ಉಜ್ಜಿನಿ ಪೊಲೀಸ್ ಠಾಣೆ** : ಉಜ್ಜಿನಿ ಕೂಡ್ಲಿಗಿಯಿಂದ ೧೮ ಕಿಲೋಮೀಟರ್ ದೂರದಲ್ಲಿದೆ. ಇಲ್ಲಿ ಪೊಲೀಸ್ ಠಾಣೆಯು ಉಜ್ಜಿನಿ ಗ್ರಾಮದ ಮಧ್ಯಭಾಗದಲ್ಲಿದ್ದು, ದಕ್ಷಿಣಾಭಿಮುಖವಾಗಿ, ೧೯೧೩ರಲ್ಲಿ ಆರಂಭಗೊಂಡಿದೆ. ಈ ಠಾಣೆಯಲ್ಲಿ ಆರಂಭದಿಂದಲೂ ಒಬ್ಬ ಹೆಡ್ ಕಾನ್‌ಸ್ಟೇಬಲ್ ಹಾಗೂ ನಾಲ್ಕು ಜನ ಕಾನ್‌ಸ್ಟೇಬಲ್‌ಗಳು ಕಾರ್ಯನಿರ್ವಹಿಸುತ್ತಾ ಬಂದಿದ್ದಾರೆ.

**ಬಳ್ಳಾರಿ ಗಾಂಧಿನಗರ ಪೊಲೀಸ್ ಠಾಣೆ** : ಗಾಂಧಿನಗರ ಪೊಲೀಸ್ ಠಾಣೆಯು ಮುನ್ಸಿಪಲ್ ಹೈಸ್ಕೂಲ್ ಪಕ್ಕದಲ್ಲಿದೆ. ಈ ಪೊಲೀಸ್ ಠಾಣೆಯ ಕಟ್ಟಡವು ದಕ್ಷಿಣಾಭಿಮುಖವಾಗಿದ್ದು, ೧೯೧೪ರಲ್ಲಿ ನಿರ್ಮಾಣಗೊಂಡಿದೆ.

**ಗಾದಿಗನೂರು ಪೊಲೀಸ್ ಠಾಣೆ** : ಗಾದಿಗನೂರು ಪೊಲೀಸ್ ಠಾಣೆಯು ಉತ್ತರಾಭಿಮುಖ ವಾಗಿದ್ದು, ೧೯೧೭ರಲ್ಲಿ ನಿರ್ಮಾಣಗೊಂಡಿದೆ.

**ಸಿರುಗುಪ್ಪ ಪೊಲೀಸ್ ಠಾಣೆ** : ಈ ಪೊಲೀಸ್ ಠಾಣೆಯು ಸಿರುಗುಪ್ಪದಿಂದ ಆದೋನಿಗೆ ಹೋಗುವ ಮಾರ್ಗದ ಎಡಭಾಗದಲ್ಲಿ ತಾಲೂಕು ಕಛೇರಿಯ ಪಕ್ಕದಲ್ಲಿದೆ. ಇದು ಸರ್ವೇ ನಂ. ೧೮೧೬ರಲ್ಲಿ ಒಂದು ಎಕರೆ, ಭೂ ವಿಸ್ತೀರ್ಣ ಆವರಣದ ಮಧ್ಯಭಾಗದಲ್ಲಿ, ದಕ್ಷಿಣಾಭಿಮುಖವಾಗಿ, ೧೯೧೭ರಲ್ಲಿ ನಿರ್ಮಾಣಗೊಂಡಿದೆ.

**ಕಂಪ್ಲಿ ಪೊಲೀಸ್ ಠಾಣೆ** : ಕಂಪ್ಲಿ ಪೊಲೀಸ್ ಠಾಣೆಯು ೧೯೧೮ರಲ್ಲಿ ಆರಂಭಗೊಂಡಿದೆ.

**ಹಲುವಾಗಲು ಪೊಲೀಸ್ ಠಾಣೆ** : ಹರಪನಹಳ್ಳಿಯಿಂದ ೨೪ ಕಿಲೋಮೀಟರ್ ದೂರದಲ್ಲಿದ್ದು ಪ್ರಮುಖ ಹೋಬಳಿ ಕೇಂದ್ರವಾಗಿದೆ. ಹಲುವಾಗಲು ಗ್ರಾಮದ ಮಧ್ಯಭಾಗದಲ್ಲಿ ಹಳೆಯ ಪೊಲೀಸ್ ಠಾಣೆಯು ಪೂರ್ವಾಭಿಮುಖವಾಗಿದ್ದು, ೧೯೨೫ರಲ್ಲಿ ನಿರ್ಮಾಣಗೊಂಡಿದೆ. ಇದು ಪ್ರಸ್ತುತ ಪಾಳುಬಿದ್ದಿದೆ. ಹಾಗಾಗಿ ಇಲ್ಲಿದ್ದ ಕಛೇರಿಯು ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿದೆ.

**ಅರಸೀಕೆರೆ ಪೊಲೀಸ್ ಠಾಣೆ** : ಹರಪನಹಳ್ಳಿಯಿಂದ ಅರಸೀಕೆರೆಯು ೧೮ ಕಿ.ಮೀ. ದೂರದಲ್ಲಿದೆ. ಅರಸೀಕೆರೆ ಗ್ರಾಮದ ಆಂಜನೇಯ ಗುಡಿಯ ಪಕ್ಕದಲ್ಲಿ, ಪೂರ್ವಾಭಿಮುಖವಾಗಿ, ಸರ್ವೇ ನಂ. ೧೨೨ರಲ್ಲಿ ೦.೫೮ ಸೆಂಟ್ಸ್ ಭೂ ವಿಸ್ತೀರ್ಣದಲ್ಲಿ ೧೯೨೮ರಲ್ಲಿ ನಿರ್ಮಾಣಗೊಂಡಿದೆ. ಇದು ಪ್ರಸ್ತುತ ೭೪ ಗ್ರಾಮಗಳ ವ್ಯಾಪ್ತಿಯನ್ನು ಒಳಗೊಂಡಿದೆ.

**ಬ್ರೂಸ್ ಪೇಟೆ ಪೊಲೀಸ್ ಠಾಣೆ** : ಬಳ್ಳಾರಿ ಪಟ್ಟಣದಲ್ಲಿರುವ ಬ್ರೂಸ್‌ಪೇಟೆಯ ಪೊಲೀಸ್ ಠಾಣೆಯು ದಕ್ಷಿಣಾಭಿಮುಖವಾಗಿದ್ದು, ೧೯೩೬ರಲ್ಲಿ ನಿರ್ಮಾಣಗೊಂಡಿದೆ.

**ಪೊಲೀಸ್ ಠಾಣೆಯ ನಿರ್ಮಾಣ** : ಪೊಲೀಸ್ ಎಂಬ ಶಬ್ದ ಬಗ್ಗೆ ಕುತೂಹಲವಿದೆ. ಗ್ರೀಕ್ ಭಾಷೆಯ Polis ಎಂಬ ಶಬ್ದವು ಉತ್ಪತ್ತಿಯಾಗಿದೆ. ಇದರ ಅರ್ಥ ಗ್ರೀಕ್ ಭಾಷೆಯಲ್ಲಿ ಗ್ರಾಮ ರಾಜ್ಯದ ಅಧಿಕಾರ ಕೇಂದ್ರ ಎಂದರ್ಥ. ಸಮಾಜದಲ್ಲಿ ಶಾಂತಿ ಮತ್ತು ಸುವ್ಯವಸ್ಥೆಯನ್ನು ಕಾಪಾಡುವ, ಅಪರಾಧಗಳ ತಡೆ ಮತ್ತು ಪತ್ತೆ, ಯಾವುದೇ ಕಾನೂನುಬಾಹಿರ ಚಟುವಟಿಕೆಗಳನ್ನು ಪಡೆಯಲು ಇರುವ ಒಂದು ಸರ್ಕಾರದ ಅಂಗ ಎಂದು ಕರೆಯಲಾಗುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ

ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಪೊಲೀಸ್ ಠಾಣೆಯ ಕಟ್ಟಡಗಳು ಯೂರೋಪಿಯನ್ ಮಾದರಿಯಲ್ಲಿ ನಿರ್ಮಿಸಲಾಗಿದೆ. ಅವು ಭಾರತೀಯ ಗೃಹವಾಸ್ತುಕಲೆಗೆ ಸಾಮ್ಯತೆಯನ್ನು ಹೊಂದಿದ್ದರೂ ಕೂಡ ಕೆಲವು ಲಕ್ಷಣಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ.

ಕಟ್ಟಡಗಳ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಇಲ್ಲವೆ ಮೂರು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿವೆ. ಪ್ರತಿಯೊಂದು ಪೊಲೀಸ್ ಠಾಣೆಯು ಪಿ.ಎಸ್.ಐ.ಗೆ ಒಂದು ಕೊಠಡಿ, ಸಿಬ್ಬಂದಿಗೊಂದು ಕೊಠಡಿ, ಮುದ್ದೆಮಾಲು ಕೊಠಡಿ, ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಬಂಧೀಖಾನೆಯ ಕೊಠಡಿಗಳನ್ನು ಒಳಗೊಂಡಿರುತ್ತವೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್, ಗಾರೆ ಇತ್ಯಾದಿ ಸಲಕರಣೆಗಳನ್ನು ಬಳಸಿ ನಿರ್ಮಿಸಿದ್ದಾರೆ. ಕಟ್ಟಡಗಳ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿರುತ್ತವೆ. ಕಟ್ಟಡಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ಕಾಂಪೌಂಡ್‌ನ್ನು ನಿರ್ಮಿಸಿರುವುದು ಕಂಡುಬರುತ್ತದೆ.

**ವಸತಿ ಗೃಹಗಳು** : ಕೆಳಹಂತದ ಮುಖ್ಯಪೇದೆ ಮತ್ತು ಸಿಬ್ಬಂದಿಯವರಿಗೆ ಪೊಲೀಸ್ ಠಾಣೆಗಳ ಸಮೀಪದಲ್ಲೇ ಇವರು ಪೊಲೀಸ್ ಲೇನ್ ಅಥವಾ ಗುಡಿಸಲುಗಳು(HUTS)ಗಳಲ್ಲಿ ವಾಸವಿರಬೇಕಿತ್ತು. ಅಗತ್ಯ ಬಿದ್ದಾಗ ತುರ್ತು ಕೆಲಸಗಳಿಗೆ ಮತ್ತು ದೈನಂದಿನ ಕೆಲಸಗಳಿಗೆ ಒದಗುವಂತೆ ಇರಬೇಕಾಗಿತ್ತು. ಇದು ಇಲಾಖೆಯಲ್ಲಿ ಅಗತ್ಯವಾದ, ಶಿಸ್ತುಪಾಲನೆ ಮತ್ತು ಸಿಬ್ಬಂದಿಯವರ ಮೇಲ್ವಿಚಾರಣೆಯ ದೃಷ್ಟಿಯಿಂದ ಅಗತ್ಯವಾದ ವ್ಯವಸ್ಥೆಯಾಗಿತ್ತು. ಈಗಲೂ ಸಹ ಅಸ್ತಿತ್ವದಲ್ಲಿರುವ ಸ್ವಾತಂತ್ರ್ಯಪೂರ್ವ ಕಾಲದ ಪೊಲೀಸ್ ಠಾಣಾ ಕಟ್ಟಡಗಳನ್ನು ಗಮನಿಸಿದಲ್ಲಿ ಆ ಕಟ್ಟಡದ ಸುತ್ತಮುತ್ತಲೇ ಪೊಲೀಸ್ ವಸತಿಗೃಹ ಇರುವುದನ್ನು ಗಮನಿಸಬಹುದಾಗಿದೆ. ಹಿಂದಿನ ಕಾಲದ ಪೊಲೀಸರಿಗೆ ವಾಹನ ಸೌಕರ್ಯಗಳು ಇರಲಿಲ್ಲ. ಆಗ ತುರ್ತ ಕೆಲಸಗಳಿಗೆ ಅಂದರೆ, ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಬರುವ ಸಂದರ್ಭದಲ್ಲಿ ತಕ್ಷಣ ಪೊಲೀಸ್ ಸಿಬ್ಬಂದಿಗಳು ಕೆಲಸಕ್ಕೆ ಲಭ್ಯವಾಗಬೇಕೆಂಬ ಉದ್ದೇಶದಿಂದ ಪೊಲೀಸ್ ಠಾಣೆಗಳ ಪಕ್ಕದಲ್ಲಿಯೇ ಪೊಲೀಸ್ ವಸತಿಗೃಹಗಳು ಇರುತ್ತಿದ್ದವು. ಪ್ರಸ್ತುತವೂ ಇದೇ ಮಾದರಿಯ ವ್ಯವಸ್ಥೆಯು ಮುಂದುವರಿದಿದೆ.

### ೩.೫. ಧಾರ್ಮಿಕ ವಾಸ್ತುಶಿಲ್ಪ ಹಾಗೂ ಕಟ್ಟಡಗಳು

ಭಾರತ ಪರಧರ್ಮ ಸಹಿಷ್ಣುತೆಗೆ ಹೆಸರುವಾಸಿಯಾದ ದೇಶ. ಭಾರತದಲ್ಲಿರುವಷ್ಟು ಮತಗಳು ಬೇರೆ ಯಾವ ದೇಶದಲ್ಲೂ ಪ್ರಚಾರದಲ್ಲಿಲ್ಲ. ಭಾರತದಲ್ಲೇ ಹುಟ್ಟಿದ್ದ ವಿಧವಿಧವಾದ ಅನೇಕ ಧರ್ಮಗಳಲ್ಲದೆ ಹೊರದೇಶ ಹಿರಿಯ ಧರ್ಮಗಳೂ ಬಹಳ ಹಿಂದಿನ ಕಾಲದಲ್ಲೇ ಇಲ್ಲಿ ನೆಲಸಿ ಬೆಳೆದುಕೊಂಡು ಬಂದಿವೆ. ಹೊರದೇಶಗಳಿಂದ ಬಂದ ಪರಧರ್ಮಾನುಯಾಯಿಗಳಿಗೆ ಭಾರತವು ತನ್ನ ಮಡಿಲಲ್ಲಿ ಆಶ್ರಯಕೊಟ್ಟು ಕಾಪಾಡಿದೆ. ಕ್ರೈಸ್ತಧರ್ಮ ಹುಟ್ಟಿದ್ದು ಮಧ್ಯಪ್ರಾಚ್ಯದಲ್ಲಿ. ಇಲ್ಲಿಂದ

ಭಾರತಕ್ಕೆ ಬಂದದ್ದ ಕ್ರಿಸ್ತನ ಅನುಯಾಯಿಗಳು. ಕ್ರೈಸ್ತ ಧರ್ಮದ ಮೂಲ ಪುರುಷ ಅಥವಾ ಪ್ರವರ್ತಕ ಯೇಸುಕ್ರಿಸ್ತ. ಈತ ಕ್ರಿ.ಪೂ. ೦೪ರಲ್ಲಿ ಜೆರುಸಲೇಂ ಬಳಿಯ ಬೆತಲ್ ಹ್ಯಾಮ್‌ನಲ್ಲಿ ತಂದೆ ಜೋಸೆಪ್ ತಾಯಿ ಮೇರಿಯವರ ಮಗನಾಗಿ ಜನಿಸಿದನು. ಯೇಸು ತನ್ನ ಬಾಲ್ಯವನ್ನು ಹೆಚ್ಚಾಗಿ ಗ್ಯಾಲಿಲೆಯ ನಜರತ್ ಎಂಬ ಹಳ್ಳಿಯಲ್ಲಿ ಕಳೆದದ್ದರಿಂದ ಆತನಿಗೆ ನಜರತ್ ಜೀಸಸ್ ಎಂಬ ಹೆಸರು ಬಂತು. ಜೀಸಸ್ ಹುಟ್ಟಿದಾಗ ಆಗಸ್ಟಸ್ ಸೀಸರನು ರೋಮನ್ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದನು. ಅವನ ತರುವಾಯ ಚಕ್ರವರ್ತಿಯಾದ ಟೈಬೀರಿಯಸ್‌ನ ಕಾಲಾವಧಿಯಲ್ಲಿ ಜೀಸಸ್‌ನು ತನ್ನ ಮೂವತ್ತನೆಯ ವರ್ಷದಲ್ಲಿ ಧರ್ಮ ಬೋಧನೆಯನ್ನು ಕೈಗೊಂಡನು. ಈತನು ತನ್ನ ಲೋಕಸೇವೆಯನ್ನು ಆರಂಭಿಸುವಾಗ ಹನ್ನೆರಡು ಮಂದಿ ಶಿಷ್ಯರನ್ನು ನೇಮಿಸಿಕೊಂಡು, ಅವರಿಗೆ ಧಾರ್ಮಿಕ ಬೋಧನೆಯನ್ನು ನೀಡುತ್ತಿದ್ದನು. ಕ್ರೈಸ್ತ ಧರ್ಮದ ಚಾರಿತ್ರಿಕವಾದ ನೈತಿಕ ಆಧಾರವನ್ನು ಪುನಃ ಸ್ಥಾಪಿಸುವುದು ಮತ್ತು ದೈವ ಪಾರಮ್ಯವಾದ ಆಣತಿಯನ್ನು(ಆಜ್ಞೆ) ಸಾಮಾಜಿಕ ಸುವ್ಯವಸ್ಥೆಗೆ ಒಗಿಸಿಕೊಳ್ಳುವುದು. ರೂಕ್ಷ(ಒರಟಾದ) ನಡವಳಿಕೆಯ ಜನಸ್ತೋಮಕ್ಕೆ ಮೃದು ನಡತೆಯನ್ನು ಬೋಧಿಸುವುದು; ಇದಿಷ್ಟನ್ನೂ ಪುರಾಣ ಹಾಗೂ ಪವಾಡ, ಭಯ, ಭರವಸೆ ಮತ್ತು ಪ್ರೀತಿಯ ಮಾರ್ಗವಾಗಿ ಸಾಧಿಸುವ ಹೊಣೆಗಾರಿಕೆ ಶಿಷ್ಯರದ್ದಾಗಿತ್ತು. ಯೇಸುವಿನ ಜೀವನ, ಬೋಧನೆ, ಶಿಲುಬೆಯ ಆರೋಹಣ, ಪುನರುತ್ಥಾನ ಮತ್ತು ಅಧಿರೋಹಣಗಳು(ಮೇಲೆ ಏರುವುದು) ಆದ ಮೇಲೆ ಆತನ ಶಿಷ್ಯರು ಯೇಸುವಿನ ಮೂಲಕವಾಗಿ ದೇವರು ಮಾನವನಿಗೆ ತೋರಿದ ಮೋಕ್ಷಕಾರಕ ಪ್ರೀತಿಯ ಶುಭವಾರ್ತೆಗಳಾದ 'ಸುವಾರ್ತೆ'ಯಲ್ಲಿರುವ ತಮ್ಮ ಅನುಭವನ್ನು ಪಾಲುಗೊಳ್ಳಲು ಭಿನ್ನ ಭಿನ್ನ ಪ್ರದೇಶಗಳಿಗೆ ಮತ್ತು ದಿಕ್ಕುಗಳಿಗೆ ಆತನ ಅಪ್ಪಣೆಯಂತೆ ಹೋದರು. ಪ್ರಾಚೀನ ಕಾಲದಿಂದಲೂ ಪ್ಯಾಲೆಸ್ಟೈನ್ ಮತ್ತು ಭಾರತಗಳ ಮಧ್ಯೆ ವಾಣಿಜ್ಯ ವ್ಯಾಪಾರದ ಸಂಬಂಧಗಳಿದ್ದ ಕಾರಣಕ್ಕಾಗಿ ಕ್ರೈಸ್ತರ ಒಂದು ಸಂಪ್ರದಾಯದಂತೆ ಯೇಸುವಿನ ಹನ್ನೆರಡು ಜನ ಶಿಷ್ಯರಲ್ಲಿ ಓರ್ವನಾದಸಂತ ಥಾಮಸನು "ಕ್ರಿ.ಶ. ೫೨ರಲ್ಲಿ ಮಲಬಾರಿನ ತೀರಪ್ರದೇಶಕ್ಕೆ ಬಂದು ಇಲ್ಲಿ ಕ್ರೈಸ್ತ ಮತವನ್ನು ಪ್ರಚಾರ ಮಾಡಿ, ಆತನು ಅಲ್ಲಿ ಕಟ್ಟಿಸಿದ ಏಳು ಚರ್ಚ್‌ಗಳನ್ನು ಇತಿಹಾಸಕಾರರು ಇಂದಿಗೂ ಗುರುತಿಸುತ್ತಾರೆ".[೨] ಇಲ್ಲಿ ಸಂತ ಥಾಮಸನನು ಕ್ರೈಸ್ತ ಧರ್ಮವನ್ನು ಪ್ರಚಾರ ಮಾಡಿದ ನಂತರ ಕ್ರಿ.ಶ. ೭೨ರಲ್ಲಿ ಮದರಾಸಿನ ಮೈಲಾಪುರದಲ್ಲಿ ಥಾಮಸ್ ತೀರಿಕೊಂಡನೆಂದು ಹೇಳಲಾಗಿದೆ. ಕ್ರೈಸ್ತಧರ್ಮ ಭಾರತಕ್ಕೆ ಇಂಥದ್ದೇ ಇಸವಿಯಲ್ಲಿ ಬಂತಿತೆಂದು ನಿಖರವಾಗಿ ಹೇಳಲು ಬರುವುದಿಲ್ಲ. ಆದರೆ, ಕ್ರಿ.ಪೂ. ೫ನೆಯ ಶತಮಾನದಿಂದಲೇ ಸಮುದ್ರ ಮಾರ್ಗನಿಂದ ವಿದೇಶ ಪ್ರವಾಸಿಗಳು ಭಾರತದ ಕಡಲ ತೀರಕ್ಕೂ, ಒಳನಾಡಿಗೂ ಬಂದು ಹೋಗಲಾರಂಭಿಸಿದ್ದರಿಂದ ಕ್ರಿಸ್ತನ ಶಿಷ್ಯ ಥಾಮಸ್‌ನು ಹಾಗೂ ಆತನ ಅನುಯಾಯಿಗಳು ಇಲ್ಲಿಗೆ ಬಂದು ಧರ್ಮ ಪ್ರಚಾರ ಮಾಡಿದರು ಎಂಬುದರಲ್ಲಿ ಅಚ್ಚರಿ ಏನಿಲ್ಲ.

ಎರಡನೆಯ ಹಾಗೂ ನಾಲ್ಕನೆಯ ಶತಮಾನಗಳಲ್ಲಿ ಕೊಂಕಣಿ ಪ್ರದೇಶದಲ್ಲಿ ಕ್ರೈಸ್ತಧರ್ಮ ಪ್ರಚಾರದಲ್ಲಿತ್ತೆಂದು ಪ್ರವಾಸಿಗಳಾದ ಪಾಂತೈನೋಸ್ ಹಾಗೂ ಸಾಜೆರೋಮ ಬರೆದಿದ್ದಾರೆ.

ಕ್ರಿ.ಶ. ೩೪೫ರಲ್ಲಿ ಓರ್ವ ಶ್ರೀಮಂತ ಕ್ರೈಸ್ತ ವರ್ತಕ ನಾಲ್ಕು ನೂರು ಜನರ ತನ್ನ ಪರಿವಾರದೊಡನೆ ಮಲಬಾರಿಗೆ ಬಂದದ್ದು, ಕ್ರಿ.ಶ. ೫೨೦-೫೨೫ರಲ್ಲಿ ಈಜಿಪ್ಟಿನ ಓರ್ವ ಪ್ರವಾಸಿ ಕೊಂಕಣ ಪ್ರದೇಶದಲ್ಲಿ ಇಲ್ಲಿಯ ಚರ್ಚ್‌ಗಳ ವಿಷಯ ಹೇಳಿರುವುದು ಗಮನಾರ್ಹ.

ಹದಿನೈದನೆಯ ಶತಮಾನದಲ್ಲಿ ಯೂರೋಪಿಯನ್ನರ ಆಗಮನದಿಂದ ಕ್ರೈಸ್ತ ಮಿಷನರಿಗಳ ಕಾರ್ಯಚಟುವಟಿಕೆಗಳು ಭಾರತದಲ್ಲಿ ಅಧಿಕವಾಗಿರುವುದು ಕಾಣಿಸುತ್ತದೆ. ಇದಕ್ಕೆ ಕಾರಣ ಕ್ರಿ.ಶ. ೧೫೧೦ರಲ್ಲಿ ಪೋರ್ಚುಗೀಸರು ಬಿಜಾಪುರದ ಸುಲ್ತಾನರಿಂದ ಗೋವೆಯನ್ನು ವಶಪಡಿಸಿ ಕೊಂಡಿದ್ದರಿಂದ ಅವರಿಗೊಂದು ಶಾಶ್ವತ ನೆಲೆಸಿಕ್ಕಂತಾಗಿ, ವಿಜಯನಗರ ಮತ್ತು ಇಕ್ಕೇರಿ ಮೊದಲಾದ ಅರಸು ಮನೆತನಗಳೊಂದಿಗೆ ಸಾಮರಸ್ಯವನ್ನು ಸಂಪಾದಿಸಲು ಸಾಧ್ಯವಾಯಿತು. ಆ ಮೂಲಕ ಪೋರ್ಚುಗಲ್‌ನ ಪಾದ್ರಿಗಳು ಕರ್ನಾಟಕದ ರೋಮ್ ಎಂದೇ ಕರೆಯಲ್ಪಡುವ ಮಂಗಳೂರಿನಲ್ಲಿ ಧರ್ಮ ಪ್ರಚಾರ ಮಾಡಿ ಗಂಗೋಳ್ಳಿ, ಕುಂದಾಪುರ, ಬಸ್ರೂರು, ಮುಲ್ಕಿ, ಬಂಟ್ವಾಳ ದಕ್ಷಿಣ - ಉತ್ತರ ಕನ್ನಡವರೆಗೂ ವಿಸ್ತರಿಸಿಕೊಂಡರು. ಇಲ್ಲಿಂದಲೇ ಕರ್ನಾಟಕದಾದ್ಯಂತ ಮಿಷನರಿಗಳ ಮತಪ್ರಸಾರ ಹಾಗೂ ಮತಾಂತರದಂತಹ ಚಟುವಟಿಕೆಗಳಲ್ಲಿ ತೊಡಗಲು ನಾಂದಿಯಾಯಿತು. ಇದರಿಂದ ಕನ್ನಡ ನಾಡಿನಾದ್ಯಂತ ಕ್ರೈಸ್ತಧರ್ಮ ವಿಶಾಲವಾಗಿ ವ್ಯಾಪಿಸಿಕೊಳ್ಳಲಾರಂಭಿಸಿತು. ಕ್ರಿ.ಶ. ೧೮೧೦ ಮೇ ೦೫ರಂದು ಬಳ್ಳಾರಿ ಜಿಲ್ಲೆಗೆ ಆಗಮಿಸಿದ ಕರ್ನಾಟಕದ ಮೊದಲ ಪ್ರಾಟೆಸ್ಟೆಂಟ್ ಮಿಷನರಿಯಾದ ಜಾನ್ ಹ್ಯಾಂಡ್ಸ್ ಅವರ ಪ್ರಭಾವದಿಂದ ಜಿಲ್ಲೆಯಲ್ಲಿ ಧಾರ್ಮಿಕ ಕಾರ್ಯಚಟುವಟಿಕೆಗಳು ಅಧಿಕವಾಯಿತು. ಬಳ್ಳಾರಿ ಜಿಲ್ಲೆಯಲ್ಲಿ ಜಾನ್ ಹ್ಯಾಂಡ್ಸ್ ಬರುವುದಕ್ಕಿಂತ ಪೂರ್ವದಲ್ಲಿ ಕ್ರೈಸ್ತ ಮಿಷನರಿಗಳ ಪ್ರಭಾವ ಇರಲಿಲ್ಲವೆ? ಇತ್ತು. ಅದು ವಿಜಯನಗರ ಕಾಲಾವಧಿಯಲ್ಲಿ ಕ್ರೈಸ್ತ ಮಿಷನರಿಗಳು ಪ್ರವಾಸಿಗರಾಗಿ, ಕಲಾವಿದರಾಗಿ, ಸೈನಿಕರಾಗಿ ಇದ್ದರು. ಆದರೆ, ಅವರಿಗೆ ಸ್ವತಂತ್ರವಾಗಿ ಧಾರ್ಮಿಕ ಮತ ಪ್ರಸಾರ ಮಾಡಲು ಶಾಶ್ವತ ನೆಲೆ ಸಿಕ್ಕಿರಲಿಲ್ಲ. ಜಿಲ್ಲೆಯಲ್ಲಿ ಮಿಷನರಿಗಳು ಮುಕ್ತವಾಗಿ ಕಾರ್ಯನಿರ್ವಹಿಸಿದ್ದು, ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಯು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ನೇರ ಆಳ್ವಿಕೆಗೆ ಒಳಪಟ್ಟಾಗ, ಭ್ರಷ್ಟಾಚಾರ, ಹೇಡಿತನ ಹಾಗೂ ಅಸಡ್ಡೆಯಿಂದಾಗಿ ಹಳೆಯ ಪರಂಪರೆ ನಂದಿ ಹೋದ ಸಂದರ್ಭದಲ್ಲಿ ಹೊಸ ಹುರುಪಿನ ಧಾರ್ಮಿಕ ಕ್ರಿಶ್ಚಿಯನ್ನ ಪಾದ್ರಿಗಳು ಮತ್ತು ಸೈನಿಕರು ಉದಯಿಸಿ ನವಚೈತನ್ಯ ಹಾಗೂ ನೈಪುಣ್ಯದಿಂದ ಸದೃಢತೆ ಹಾಗೂ ಬದುಕಿನ ಘನತೆಗಾಗಿ ಮುಂದಾದರು. ಈ ಸಂದರ್ಭದಲ್ಲಿ ಮಿಷನರಿಗಳು ಪ್ರಮುಖವಾಗಿ ಬಳ್ಳಾರಿ ನಗರ, ಹೊಸಪೇಟೆ ಮತ್ತು ಆದೋನಿ ಪಟ್ಟಣಗಳಲ್ಲಿ ನಡೆಸಿದ ಕಾರ್ಯ ಚಟುವಟಿಕೆಗಳ ಪ್ರಭಾವಕ್ಕೆ ಹೆಚ್ಚು ಆಕರ್ಷಿತರಾದರು. ಆದರೆ ಜಿಲ್ಲೆಯ ಉಳಿದ ಪಟ್ಟಣ - ಗ್ರಾಮೀಣ ಕೃಷಿ ಕಾರ್ಮಿಕರು ಮಿಷನರಿಗಳ ಯಾವುದೇ ಆಸೆ - ಆಮಿಷುಗಳಿಗೆ ಒಳಗಾಗದೇ ಇರುವುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಮಿಷನರಿಗಳ ಮುಖ್ಯ ಉದ್ದೇಶ ಕ್ರೈಸ್ತಮತ ಬೋಧನೆ, ಮತ ಪ್ರಸಾರ ಹಾಗೂ ಮತಾಂತರಗೊಳಿಸುವುದಾಗಿತ್ತು. ಇಲ್ಲಿ ಸಾರ್ವತ್ರಿಕವಾಗಿ ಎರಡು ರೀತಿಯ ಕಾರ್ಯಗಳು

ನಡೆಯುತ್ತಿದ್ದವು. ಒಂದು: ಕ್ರಿಶ್ಚಿಯನ್ನ ಪಾದ್ರಿಗಳು ಕೆಲವೊಮ್ಮೆ ಕಂಪನಿ ಸರಕಾರದ ಏಜೆಂಟರ್ ಆಗಿ ಕಾರ್ಯನಿರ್ವಹಿಸಿದ್ದ ಕಾರಣಕ್ಕಾಗಿ ಅವರ ನಿಷ್ಠೆ ತಮ್ಮ ತಾಯ್ನಾಡಿಗಿತ್ತೇ ಹೊರತು ಭಾರತದ ಕಡೆಗಲ್ಲ. ಬಹುಪಾಲು ಕ್ರಿಶ್ಚಿಯನ್ ಪಾದ್ರಿಗಳು ಕಂಪನಿ ಸರಕಾರದ Paid Religious Worker's ಆಗಿ ಕಾರ್ಯನಿರ್ವಹಿಸಿದ್ದೆ ಹೆಚ್ಚು. ಎರಡು: ಕ್ರಿಶ್ಚಿಯನ್ ಪಾದ್ರಿಗಳು ವಿದೇಶದಿಂದ ಕಳುಹಿಸಿಕೊಟ್ಟ ಮಿಷನ್ ಸಂಸ್ಥೆಗೆ ನಿಷ್ಠೆಯಾಗಿ, ಕ್ರೈಸ್ತ ಧರ್ಮದ ಸಂದೇಶವನ್ನು ಸಮಾನತೆಯಿಂದ ವಿಸ್ತಾರಗೊಳಿಸುವುದಾಗಿತ್ತು.

ಬೌದ್ಧ ಧರ್ಮವು ಕೂಡ ಇದೇ ಮಾದರಿಯನ್ನು ಅನುಸರಿಸಿ, ಅಷ್ಟೇ ಬೇಗನೆ ಅವನತಿಯಾಯಿತು. ಅದೇ ರೀತಿ ಬ್ರಿಟಿಷರು ಕೂಡ ಭಾರತದಲ್ಲಿ ಆಳ್ವಿಕೆ ಮಾಡಿ ದೇಶವನ್ನು ಬಿಟ್ಟು ಮರಳಿದರು. ಆದರೆ ಅವರ ಸಂಸ್ಕೃತಿ ಮಾತ್ರ ಬದಲಾಗಲಿಲ್ಲ. ಪ್ರಸ್ತುತವು ಕೂಡ ಸ್ಥಳೀಯರು ಹೆಚ್ಚು ಹೆಚ್ಚು ಮತಾಂತರಗೊಳ್ಳುವ ಪ್ರಕ್ರಿಯೆ ನಿರಂತರವಾಗಿದೆ. ಕ್ರೈಸ್ತ ಧರ್ಮದ ಪ್ರಭಾವದಿಂದ ಭಾರತೀಯರು ಈ ಧರ್ಮವನ್ನು ಸ್ವೀಕರಿಸಿ, ಮುಂದುವರಿಸಿದ್ದಾರೆ. ಇದಕ್ಕೆ ಕಾರಣ ಹಿಂದೂ ಧರ್ಮದಲ್ಲಿದ್ದ ಆಂತರಿಕ ಬಿಕ್ಕಟ್ಟಿನಿಂದ. ಪ್ರಸ್ತುತ ಹಿಂದುತ್ವ ಪ್ರಶ್ನೆ ಬಂದಾಗ ಮಸೀದಿ, ಚರ್ಚ್‌ಗಳನ್ನು ಹಾಳು ಮಾಡುತ್ತಿದ್ದಾರೆ.

ಕ್ರೈಸ್ತ ಧರ್ಮ ಯೇಸು ಕ್ರಿಸ್ತನ ಉಪದೇಶದ ಆಧಾರದ ಮೇಲೆ ಹುಟ್ಟಿ ಬೆಳೆದು ಬಂದಿರುವ ಒಂದು ಸೈದ್ಧಾಂತಿಕ ಮತ ವ್ಯವಸ್ಥೆ. ಆತನು ಸ್ಥಾಪಿಸಿದ್ದು, ಒಂದೇ ಧರ್ಮವಾದರೂ ಅದು ಕಾಲಕ್ರಮೇಣ ಹಲವು ಪಂಥಗಳಾಗಿ ಒಡೆದುಕೊಂಡಿದೆ. ಅದರ ಒಳಗಿನ ಭಿನ್ನಾಭಿಪ್ರಾಯ ಗಳಿಂದಾಗಿ, ಹೊರಗಿನ ಆಚರಣೆಗಳಿಂದಾಗಿ ಕ್ರೈಸ್ತ ಧರ್ಮ ಭಿನ್ನ ಭಿನ್ನ ಪಂಥಗಳಿಗೆ ಎಡೆಮಾಡಿಕೊಟ್ಟಿದೆ. ಕರ್ನಾಟಕದಲ್ಲಿ ಪ್ರಮುಖವಾಗಿ ಎರಡು ಪಂಥಗಳು ಬೆಳೆದು ಬಂದಿವೆ. ಒಂದು ರೋಮನ್ ಕ್ಯಾಥೋಲಿಕ್ ಮತ್ತೊಂದು ಪ್ರಾಟೆಸ್ಟೆಂಟರು. ಕರ್ನಾಟಕದಲ್ಲಿ ರೋಮನ್ ಕ್ಯಾಥೋಲಿಕ್‌ರಿಗೆ ಸಂಬಂಧಪಟ್ಟಂತೆ ಆರು ಆಡಳಿತ ವಿಭಾಗಗಳಿವೆ. ಅವುಗಳೆಂದರೆ ಬೆಂಗಳೂರು, ಮೈಸೂರು, ಬೆಳಗಾವಿ, ಬಳ್ಳಾರಿ, ಚಿಕ್ಕಮಗಳೂರು ಮತ್ತು ಮಂಗಳೂರು. ಈ ಆರು ವಿಭಾಗಗಳಲ್ಲಿ ಆರು ಜನ ಧರ್ಮಾಧ್ಯಕ್ಷರು ಅಥವಾ ಬಿಷಪರು ಕಾರ್ಯನಿರ್ವಹಿಸುತ್ತಿದ್ದಾರೆ. ಬಿಷಪರು ತಮ್ಮ ಧಾರ್ಮಿಕ ವಿಭಾಗಗಳ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿನ ಜನರ ಕಷ್ಟ ನಿವಾರಣೆ, ಹೊಸ ಚರ್ಚ್‌ಗಳ ನಿರ್ಮಾಣ, ಹಳೆಯ ಚರ್ಚ್‌ಗಳ ದುರಸ್ತಿ, ಬಡ ಕ್ರಿಶ್ಚಿಯನ್ನರಿಗೆ ಮನೆಕಟ್ಟಲು ನೆರವು ನೀಡುವುದು ಮುಂತಾದ ಕಾರ್ಯಗಳಲ್ಲಿ ತೊಡಗುತ್ತಾರೆ.

ಪ್ರಾಟೆಸ್ಟೆಂಟರಲ್ಲೂ ಮೂವರು ಧರ್ಮಾಧ್ಯಕ್ಷರಿದ್ದಾರೆ. ಅವರು ಕರ್ನಾಟವನ್ನು ಕೇಂದ್ರ ಪ್ರಾಂತ: ಬೆಂಗಳೂರು, ತುಮಕೂರು, ಕೋಲಾರ, ಉತ್ತರ ಪ್ರಾಂತ: ಹುಬ್ಬಳ್ಳಿ, ಧಾರವಾಡ, ಶಿವಮೊಗ್ಗ, ಬಳ್ಳಾರಿ, ಗುಲ್ಬರ್ಗಾ. ದಕ್ಷಿಣ ಪ್ರಾಂತ: ಮಂಗಳೂರು, ಮಡಿಕೇರಿ, ಹಾಸನ, ಮೈಸೂರು, ಮಂಡ್ಯ. ಈ ಮೂರು ಪ್ರಾಂತಗಳೆಂದು ವಿಭಾಗಿಸಿ, ಕ್ರಿ.ಶ. ೧೯೪೭ರಲ್ಲಿ ಅಸ್ತಿತ್ವಕ್ಕೆ

ಬಂದ ದಕ್ಷಿಣ ಭಾರತ ಸಭೆ(ಸಿ.ಎಸ್.ಐ.)ಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಕರ್ನಾಟಕ್ಕೆ ಬಂದದ್ದು, ಕರ್ನಾಟಕದಲ್ಲಿ ಬೆಳೆದದ್ದು, ಬೇರೆ ಬೇರೆಯಾಗಿಯೇ ಬಾಸೆಲ್‌ಮಿಷನ್, ವೆಸ್ಲಿಯನ್, ಆಂಗ್ಲಿಕನ್, ಮಾರ್ಥೋಮಾ ಸೀರಿಯನ್, ಎಪಿಸ್ಕೋಪಲ್, ಮೆಥಾಡಿಷ್ಟ, ಪೆಂಟಿಕೋಸ್ಟ ಎಂದೆಲ್ಲ ಪ್ರತ್ಯೇಕ ಹೆಸರುಗಳೊಡನೆ ಮತಪ್ರಸಾರ, ಶಿಕ್ಷಣ, ವೈದ್ಯ ಮೊದಲಾದ ಸೇವಾರಂಗಗಳಲ್ಲಿ ಈ ಸಭೆಗಳು ದುಡಿದು ಕರ್ನಾಟಕದ ಅಭಿವೃದ್ಧಿಗೆ ಕಾರಣವಾದವು. ಪ್ರಸ್ತುತ ಬಳ್ಳಾರಿ ಮತ್ತು ಹೊಸಪೇಟೆ ತಾಲೂಕಿನಲ್ಲಿ ಈ ಮತ ಪಂಥಗಳು ಕಾರ್ಯನಿರ್ವಹಿಸುತ್ತಿವೆ.

ರೋಮನ್ ಕ್ಯಾಥೋಲಿಕ್‌ರಲ್ಲಿ ಪಾದ್ರಿಗಳು ಮದುವೆಯಾಗಕೂಡದೆಂಬ ನಿಯಮವಿದೆ. ಹಾಗಾಗಿ ಪಾದ್ರಿಗಳು ಯೇಸುವಿನ ಸೇವೆಗೆ ತಮ್ಮನ್ನು ತಾವು ಅರ್ಪಿಸಿಕೊಳ್ಳಬೇಕಾಗುತ್ತದೆ. ಆದರೆ, ಪ್ರಾಟೆಸ್ಟೆಂಟ್‌ರಲ್ಲಿ ಈ ನಿಯಮವಿಲ್ಲ. ಯೇಸುಕ್ರಿಸ್ತನನ್ನು ಕ್ಯಾಥೋಲಿಕರು ರಕ್ಷಕನೆಂದು ನಂಬಿ, ಯೇಸುವಿನ ತಂದೆ ಜೋಸೆಫ್, ತಾಯಿ ಮೇರಿ ಮತ್ತು ಸಂತರನ್ನು ಅಪಾರ ಗೌರವದಿಂದ ಕಾಣುತ್ತಾರೆ. ನಂತರ ಹೆಸರಿನಲ್ಲಿ ಚರ್ಚ್‌ಗಳನ್ನು ಕಟ್ಟಿಸುತ್ತಾರೆ. ಅವರ ಹುಟ್ಟು ಹಬ್ಬಗಳನ್ನು ಸಂಭ್ರಮದಿಂದ ಆಚರಿಸಿ, ಜಾತ್ರೆಗಳನ್ನು ನಡೆಸುತ್ತಾರೆ. ಉದಾ: ಬೆಂಗಳೂರಿನ ಸೆಂಟ್‌ಮೇರಿ, ಸೆಂಟ್ ಜೋಸೆಫ್ ಚರ್ಚ್, ಮಂಗಳೂರಿನ ಮಿಲಾಗ್ರೀಸ್ ಚರ್ಚ್, ಹೊನ್ನಾವರದ ಸಲ್ಯಾದೋರ್ ಚರ್ಚ್, ಹರಿಹರದ ಆರೋಗ್ಯ ಮಾತೆ, ಬಳ್ಳಾರಿ ಸಂತ್‌ಮೇರಿ ಚರ್ಚ್. ಈ ಚರ್ಚ್‌ಗಳು ಕರ್ನಾಟಕದಲ್ಲಿ ಅತಿ ಪ್ರಾಚೀನ ಹಾಗೂ ಜನಪ್ರಿಯವಾದ ಚರ್ಚ್‌ಗಳು. ಪ್ರಾಟೆಸ್ಟೆಂಟ್‌ರು ಯೇಸುವಿನ ತಂದೆ-ತಾಯಿ ಮತ್ತು ಸಂತರನ್ನು ನಂಬುವುದಿಲ್ಲ, ಸಂತರ ಹುಟ್ಟು ಹಬ್ಬವನ್ನು ಆಚರಿಸುವುದಿಲ್ಲ. ಇದರ ಬದಲು ಚರ್ಚಿ ವಾರ್ಷಿಕೋತ್ಸವನ್ನು ಆಚರಿಸುತ್ತಾರೆ.

ಮತಾಂತರದ ಬಗ್ಗೆ ಕರ್ನಾಟಕದ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಹೀಗಾಗಿ ಮಿಷನರಿಗಳು ಇತರೆ ಜನಾಂಗವನ್ನು ಮತಾಂತರಗೊಳಿಸುತ್ತಿದ್ದರು ಎನ್ನುವುದಕ್ಕಿಂತಲೂ ಮತಾಂತರಕ್ಕೆ ಪೂರಕವಾದ ಅವಕಾಶವನ್ನು ಹಾಗೂ ಸನ್ನಿವೇಶವನ್ನು ಸ್ಥಳೀಯರೇ ಸೃಷ್ಟಿಸಿಕೊಟ್ಟಿರುವರು ಎಂಬುದನ್ನು ಒಪ್ಪುವುದು ಸೂಕ್ತವೆನಿಸುತ್ತದೆ. ಜನ ತಮ್ಮ ಬದುಕಿನ ಬವಣೆಗಳಿಂದ ಪಾರಾಗಲು, ಜ್ಞಾನಕ್ಕಾಗಿ, ಸಾಧನೆಗಾಗಿ, ತತ್ವದ ಸೆಳೆತಕ್ಕಾಗಿ ತಮಗೆ ಇಷ್ಟ ಬಂದ ಧರ್ಮ ಇಲ್ಲವೆ, ಪಂಥಗಳಿಗೆ ಹೋಗುವುದು ಒಂದು ಕ್ರಮವಾದರೆ, ಬಲಿಷ್ಠರು ದುರ್ಬಲರನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಮಾಡುವ ಹುನ್ನಾರದ ಭಾಗವಾಗಿರುವ ಮತಾಂತರವು ಇನ್ನೊಂದು ಕ್ರಮ. ಕ್ರಿ.ಶ. ೧೯ನೇ ಹಾಗೂ ೨೦ನೆಯ ಶತಮಾನದಲ್ಲಿ ಬಾಸೆಲ್‌ಮಿಷನರಿಗಳು ಕರಾವಳಿ ಪ್ರದೇಶದಲ್ಲಿದ್ದ ಬಿಲ್ಲವರು ಹಾಗೂ ಸಮಾಜದ ಅಂಚಿನಲ್ಲಿರುವ ಇತರೆ ಸಮುದಾಯಗಳನ್ನು ಗುರಿಯಾಗಿಟ್ಟುಕೊಂಡು, ಅವರಿಗೆ ಆಸೆ, ಆಕಾಂಕ್ಷೆಗಳನ್ನು ಒಡ್ಡಿ ಕ್ರೈಸ್ತ ಧರ್ಮಕ್ಕೆ ಆಕರ್ಷಿಸಿದರು ಎನ್ನುವ ಆರೋಪವನ್ನು ದಾಖಲೆಗಳ ಆಧಾರದಲ್ಲಿ ರುಜುಪಡಿಸುವುದು ಕಷ್ಟ ಆದರೆ, ಮತಾಂತರಗೊಂಡವರಲ್ಲಿ ಹೆಚ್ಚಿನವರು

ಜೀವನೋಪಾಯಕ್ಕೆ ಬೇಕಾದ ಮೂಲಭೂತ ಸೌಲಭ್ಯಗಳ ಕೊರತೆ, ಸಾಮಾಜಿಕ ಹಾಗೂ ಆರ್ಥಿಕ ಶೋಷಣೆ, ಅಸ್ಪೃಶ್ಯತೆ, ದೇವಸ್ಥಾನಗಳಿಗೆ ಪ್ರವೇಶ ನಿರ್ಬಂಧ ಈ ಮೊದಲಾದವುಗಳಿಂದ ವಿಮೋಚನೆಗೊಳ್ಳು ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರು ಎಂಬುದಕ್ಕೆ ಸಾಕಷ್ಟು ಸಾಕ್ಷಾಧಾರಗಳು ದೊರೆಯುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿ ಅತಿ ಹೆಚ್ಚು ಮತಾಂತರ ಗೊಂಡವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಎಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

**ಧಾರ್ಮಿಕ ವಾಸ್ತುಶಿಲ್ಪ**

ಭಾರತೀಯ ವಾಸ್ತುಕಲೆ ಧಾರ್ಮಿಕ ತಳಹದಿಯ ಮೇಲೆ ಬೆಳೆದು ಬಂದದ್ದು. ಏಕೆಂದರೆ, ಭಾರತವು ಎಲ್ಲಾ ಜಾತಿ-ಧರ್ಮಗಳಿಗೆ ಆಶ್ರಯ ನೀಡಿ, ಸಮಾನ ಗೌರವ ನೀಡುತ್ತಾ ಬಂದಿದೆ. ಹಾಗಾಗಿ ಹಿಂದೂ, ಜೈನ, ಬೌದ್ಧ, ಇಸ್ಲಾಂ, ಕ್ರೈಸ್ತ ಧರ್ಮಗಳ ಪ್ರಾರ್ಥನಾ ಮಂದಿರಗಳು ಧಾರ್ಮಿಕ ಹಾಗೂ ವೈಜ್ಞಾನಿಕ ತಳಹದಿಯ ಮೇಲೆ ನಿರ್ಮಾಣಗೊಂಡವು. ಇದು ಕರ್ನಾಟಕ ವಾಸ್ತುಶಿಲ್ಪಕ್ಕೂ ಅನ್ವಯಿಸುತ್ತದೆ. ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಹಲವಾರು ರಾಜಮನೆತನಗಳು ಆಳ್ವಿಕೆ ನಡೆಸಿ ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸಿ, ಕಲೆಯ ಬೆಳವಣಿಗೆಗೆ ಕಾರಣೀಭೂತರಾಗಿರುವುದು ಪ್ರಶಂಸನೀಯ. ಹೀಗೆ ಕರ್ನಾಟಕದಾದ್ಯಂತ ನಿರ್ಮಾಣಗೊಂಡ ಚೈತ್ಯ, ವಿಹಾರಗಳು, ಬಸದಿ, ಮಸೀದಿಗಳು ಜನತೆಯ ಮತ್ತು ರಾಜ-ರಾಣಿಯರ ಧಾರ್ಮಿಕ ಶ್ರದ್ಧೆಯಿಂದ ನೂರಾರು ಪ್ರತಿಭಾವಂತ ಹಾಗೂ ನುರಿತ ಶಿಲ್ಪಗಳಿಗೆ ರಾಜಾಶ್ರಯ ನೀಡಿದ್ದ ಫಲವಾಗಿ ದೇಗುಲಗಳು ನಿರ್ಮಾಣಗೊಂಡವು. ಆದರೆ, ಹದಿನೇಳನೆಯ ಮತ್ತು ಹದಿನೆಂಟನೆಯ ಶತಮಾನದಲ್ಲಿ ಕ್ರೈಸ್ತಧರ್ಮಕ್ಕೆ ಯಾವುದೇ ರಾಜ ಅಥವಾ ರಾಜಕೀಯ ಪ್ರಭುತ್ವದ ಪ್ರೋತ್ಸಾಹವಿಲ್ಲದೆ ಬೆಳೆದುಬಂದ ಧರ್ಮವಾಗಿರುವುದರಿಂದ ಕ್ರೈಸ್ತ ಧರ್ಮವನ್ನುವಲಂಬಿಸಿದ ಜನ ಮುಕ್ತವಾಗಿ ತಾವು ನೆಲೆಸಿರುವ ಮನೆಗಳಲ್ಲಿಯೇ ಪ್ರಾರ್ಥನೆಯನ್ನು ಮಾಡಬೇಕಿತ್ತು. ಚರ್ಚ್ ಕ್ರೈಸ್ತ ಧರ್ಮದ ಆಧ್ಯಾತ್ಮಿಕ ಧಾರ್ಮಿಕ ಸಂಸ್ಥೆ. ಇದರ ವಾಸ್ತುಕಲೆ ಆರಂಭದಲ್ಲಿ ಹೇಗಾಯಿತೆಂದು ಖಚಿತವಾಗಿ ಹೇಳುವುದು ಕಷ್ಟ. ಏಕೆಂದರೆ, ಆರಂಭದಲ್ಲಿ ಬಂದ ಧರ್ಮ ಪ್ರಚಾರಕರು ಕಟ್ಟಡದ ವಾಸ್ತುಶಿಲ್ಪಕ್ಕಿಂತ ಧರ್ಮ ಪ್ರಚಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿರುವ ಕಾರಣದಿಂದ ಕಟ್ಟಡಗಳ ನಿರ್ಮಾಣಕ್ಕೆ ಮೊದಲ ಆದ್ಯತೆ ನೀಡಿಲ್ಲದೆ ಇರುವುದು ಕಂಡುಬಂದಿದೆ. ಇದಕ್ಕೆ ಕಾರಣ, ಕರ್ನಾಟಕದಲ್ಲಿ ಮಿಷನರಿಗಳು ಕೈಗೊಳ್ಳುವ ಮತ ಪ್ರಸಾರದ ಕಾರ್ಯಚಟುವಟಿಕೆಗಳು ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಮೇಲೆ ದುಷ್ಪರಿಣಾಮಗಳು ಬೀರಬಹುದು ಎಂಬ ಕಲ್ಪನೆಯಿಂದ ಕ್ರೈಸ್ತಪಾದ್ರಿಗಳ ಮತ ಪ್ರಸಾರದ ಕಾರ್ಯಗಳಿಗೆ ನಿರ್ಬಂಧಿಸಲಾಗಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮಿಷನಗಳು ಬಹಳ ಎಚ್ಚರಿಕೆಯಿಂದ ಮುಕ್ತವಾಗಿ ಮತ ಪ್ರಸಾರ ಮಾಡಬೇಕಾಗಿತ್ತು. "೧೮೧೩ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಸನ್ನದನ್ನು ನವೀಕರಿಸಲಾಯಿತು. ಈ ಸನ್ನದ್ದಿನನ್ವಯ ಆಕ್ಷೇಪಣೀಯ ಕಲಮಿನ ರದ್ಧತಿ ಹಾಗೂ ಕಂಪನಿಯ ಆಡಳಿತದಲ್ಲಿದ್ದ ಪ್ರದೇಶಗಳಲ್ಲಿ ತಮಗಿಷ್ಟ ಬಂದ ಯಾವುದೇ ಸ್ಥಳದಲ್ಲಿ ಬೋಧನೆ ಮಾಡಲು ಎಲ್ಲ ವರ್ಗಗಳ ಕ್ರೈಸ್ತಮತ ಪ್ರಚಾರಕರಿಗೂ

ಸಂಪೂರ್ಣ ಅನುಮತಿಯನ್ನು ನೀಡಿತು".[೬೩] ಇದರಿಂದ ಇಂಗ್ಲೆಂಡ್, ಜರ್ಮನಿ, ಸ್ವಿಜ್ಜರ್‌ಲ್ಯಾಂಡ್, ಅಮೇರಿಕ ಇತ್ಯಾದಿ ವಿದೇಶಗಳಿಂದ ಭಾರತಕ್ಕೆ ತಂಡ ತಂಡಗಳಾಗಿ ಮತ ಪ್ರಚಾರಕರು ಅಧಿಕವಾಗಿ ಬರತೊಡಗಿದರು. ಇದರ ಪರಿಣಾಮವಾಗಿ ಭಾರತದ ವಿವಿಧ ಭಾಗಗಳಲ್ಲಿ ಅನೇಕ ಚರ್ಚುಗಳು ಸ್ಥಾಪನೆಗೊಂಡವು. "ಚರ್ಚುಗಳನ್ನು ಸ್ಥಾಪಿಸಲು ಹಾಗೂ ಧಾರ್ಮಿಕ ಸಭೆಯ ಸಮ್ಮೇಳನಗಳನ್ನು ನಡೆಸಲು ಯೂರೋಪಿನಿಂದಲೇ ಹಣಕಾಸಿನ ನೆರವು ದೊರೆಯುತ್ತಿತ್ತು".[೬೪] ಭಾರತದಲ್ಲಿ ಕ್ರೈಸ್ತ ವಾಸ್ತುಶಿಲ್ಪದ ಪ್ರಧಾನ ನೆಲೆ ಪೋರ್ಚುಗೀಸರ ಕಾಲದ ಹಳೆ ಗೋವ. ಇಲ್ಲಿಯ ಇಗರ್ಜಿ, ಬೆಸಲಿಕ್, ಚಾಪೆಲಗಳ ವಾಸ್ತುಶಿಲ್ಪ, ಮೂರ್ತಿಶಿಲ್ಪ, ವರ್ಣಚಿತ್ರಗಳ ಪ್ರಕಾರ, ಲಕ್ಷಣಗಳು, ಇವುಗಳ ಬೆಳವಣಿಗೆಯನ್ನು ಇಲ್ಲಿಯ ಧಾರ್ಮಿಕ ನಿರ್ಮಿತಿಗಳಿಂದ ಸರಿಯಾಗಿ ತಿಳಿದುಕೊಳ್ಳಲು ಸಾಧ್ಯ. "ಪೋರ್ಚುಗೀಸರು ೧೫೧೦ರಲ್ಲಿ ಕೇರಳದ ಕೊಚ್ಚಿಯಲ್ಲಿ ಕಟ್ಟಿದ ಸೈಂಟ್ ಫ್ರಾನ್ಸಿಸ್ ಚರ್ಚ್. ಯೂರೋಪಿಯನ್ನರು ಭಾರತದಲ್ಲಿ ಕಟ್ಟಿದ ಮೊದಲ ಚರ್ಚ್ ಎನ್ನಲಾಗಿದೆ".[೬೫] ಕರ್ನಾಟಕ ಚರ್ಚ್ ವಾಸ್ತುಶಿಲ್ಪವನ್ನು ೧೬ನೆಯ ಶತಮಾನದಷ್ಟು ಹಿಂದಕ್ಕೆ ಒಯ್ಯಬಹುದಾದರೂ ಹಲವು ಪ್ರಮುಖ ವಾಸ್ತು ಕೃತಿಗಳು ತಲೆಯೆತ್ತಿದ್ದು ೧೯ ಮತ್ತು ೨೦ನೆಯ ಶತಮಾನಗಳಲ್ಲಿ. ಸುಮಾರು ೧೫೨೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶಿಸಿದರೆಂದು ಹೇಳಲಾದ ಫ್ರಾನ್ಸಿಸ್ಕನ ಮಿಷನರಿಗಳು ಉಳ್ಳಾಲ, ಪರಂಗಿಪೇಟೆ, ಮಂಗಳೂರು ಮುಂತಾದೆಡೆಗಳಲ್ಲಿ ಕ್ರೈಸ್ತ ದೇಗುಲಗಳನ್ನು ನಿರ್ಮಿಸಿದರು. ಕ್ರಿ.ಶ. ೧೫೨೬ರಲ್ಲಿ ಕ್ಯಾಥೋಲಿಕ್‌ರು ಮಂಗಳೂರಿನಲ್ಲಿ ಬೋಳಾರಿನ ರೊಜಾರಿಯೋ ಚರ್ಚ್‌ನ್ನು ನಿರ್ಮಿಸಲಾಗಿದೆ. ಇದು ಕರ್ನಾಟಕದಲ್ಲಿ ಯೂರೋಪಿಯನ್ನರು ನಿರ್ಮಿಸಿದ ಮೊದಲ ಚರ್ಚ್ ಆಗಿದೆ. ಕ್ರಿ.ಶ. ೧೫೭೦ರಲ್ಲಿ ಜೆಸುಯಿಟ್ ಸನ್ಯಾಸಿಗಳು ಬಸರೂರಿನಲ್ಲಿ ಕ್ರೈಸ್ತ ದೇವಾಲಯ ನಿರ್ಮಿಸಿದರು. ೧೬೦೬ರಲ್ಲಿ ಬೆಳಗಾವಿ ಬಳಿ ಖಾನಾಪುರದಲ್ಲೂ, ೧೭೦೯ರಲ್ಲಿ ಕಾರವಾರದ ಬಳಿ ಸುಂಕೇರಿಯಲ್ಲೂ, ಕ್ರೈಸ್ತಧರ್ಮ ಪ್ರಚಾರಕ ಸಂಸ್ಥೆಗಳು ತಲೆಯೆತ್ತಿದವು. "೧೭೮೪ರ ಹೊತ್ತಿಗೆ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸುಮಾರು ೨೭ ಕ್ರೈಸ್ತ ದೇಗುಲಗಳಿದ್ದುವಂತೆ".[೬೬] ಆನಂತರ ಕರ್ನಾಟಕಾದ್ಯಂತ ಕ್ರೈಸ್ತ ದೇವಾಲಯಗಳು ನಿರ್ಮಾಣಗೊಂಡವು. ಬಳ್ಳಾರಿ ನಗರದ ಕೋಟೆ ಪ್ರದೇಶದಲ್ಲಿ ೧೮೧೧ರಲ್ಲಿ ಟ್ರಿನಿಟಿ ಚರ್ಚ್, ೧೮೨೪ರಲ್ಲಿ ಬ್ರೂಸ್‌ಪೇಟೆಯಲ್ಲಿ ಜಾನ್ ಹ್ಯಾಂಡ್ಸ್ ಸ್ಮಾರಕ ದೇವಾಲಯ, ೧೮೪೧ರಲ್ಲಿ ತಮಿಳು ಚರ್ಚ್, ೧೮೭೯ರಲ್ಲಿ ಹೊಸಪೇಟೆಯಲ್ಲಿ ಕ್ರಿಸ್ತರಾಜ ಸಭೆ, ೧೮೮೪ರಲ್ಲಿ ತೆಲುಗು ಚರ್ಚ್-ಬಳ್ಳಾರಿ. ಇವುಗಳಿಂದ ಜಿಲ್ಲೆಯಲ್ಲಿ ಕ್ರೈಸ್ತ ಮಿಷನರಿಗಳು ಇಂಗ್ಲೀಷ್, ಕನ್ನಡ, ತಮಿಳು, ತೆಲುಗು ಈ ನಾಲ್ಕು ಭಾಷೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿರುವುದು ಸ್ಮಾರಕಗಳಿಂದ ದೃಢಪಟ್ಟಿದೆ. ಇನ್ನೂ ಕೆಲವು ಸುಂದರವಾದ ಚರ್ಚುಗಳು ಇವಲ್ಲದೆ ಹೊನ್ನಾವರ, ಉಡುಪಿ, ಹುಬ್ಬಳ್ಳಿ, ಬೆಂಗಳೂರು, ಮೈಸೂರು ಇತ್ಯಾದಿ ಸ್ಥಳಗಳಲ್ಲಿ ಕ್ರೈಸ್ತರ ಚೆಲುವಿನ ಚರ್ಚುಗಳಿವೆ. ಇವುಗಳಲ್ಲಿ ಮೈಸೂರಿನ ಸೆಂಟ್ ಫಿಲೋಮಿನ ಚರ್ಚ್ ಮಹತ್ವದ ವಾಸ್ತು ಕಟ್ಟಡ. ಪ್ರತಿಯೊಂದು ಚರ್ಚ್ ಕಟ್ಟಡದ ತಳವಿನ್ಯಾಸವು ಶಿಲುಬೆಯಾಕಾರದಲ್ಲಿರುತ್ತವೆ. ಕ್ರೈಸ್ತರು

ಶಿಲುಬೆಗೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ ಯಾಕೆ? ಶಿಲುಬೆಯ ಮೇಲೆ ಯೇಸು ಕ್ರಿಸ್ತ ತೂಗಾಡಿ ಪ್ರಾಣತ್ಯಾಗ ಮಾಡಿದ್ದರಿಂದ ಶಿಲುಬೆ ಕ್ರೈಸ್ತರಿಗೆ ಒಂದು ಪವಿತ್ರವಾದ ವಸ್ತುವಾಗಿದೆ. ಆದ್ದರಿಂದಲೇ ಪ್ರತಿಯೊಂದು ಚರ್ಚಿನ ಕಟ್ಟಡದ ಮೇಲೆ ಶಿಲುಬೆ ಇರುತ್ತದೆ. ಇದು ಕ್ರಮೇಣ ಚರ್ಚಿನ ಗುರುತಾಗಿಯೇ ಕಾಣಿಸಿಕೊಂಡು, ಅನಿವಾರ್ಯವೆನಿಸುವಷ್ಟು ವ್ಯಾಪಿಸಿತು. ಇದು ಕ್ರೈಸ್ತ ಸಂಸ್ಕೃತಿಯ ಅಂಗವೇ ಆಯಿತು. ಚರ್ಚ್ ಕಟ್ಟಡಗಳು ಶಿಲುಬೆಯಾಕಾರದಲ್ಲೇ ನಿರ್ಮಾಣವಾಗಿವೆ. ಚರ್ಚ್ ಕಟ್ಟಡದ ರಚನೆಯು ಗಾತಿಕ್ ಶೈಲಿಯಲ್ಲಿ ನಿರ್ಮಾಣಗೊಂಡು, ಅವುಗಳ ಮುಮ್ಮುಖವು ಮನೋಹರಕವಾಗಿರುತ್ತವೆ. ಇದು ಕಟ್ಟಡಗಳ ಮೇಲ್ಗಡೆಯ ತ್ರಿಕೋನಾಕೃತಿಯ ರಚನೆ(ಪೆಡಿಮೆಂಡ್)ಗೆ ಆಧಾರವಾಗಿದೆ. ಇವುಗಳ ಗೋಪುರಗಳು ಆಕಾಶವನ್ನು ಚುಂಬಿಸುತ್ತಿರುವಂತೆ ಕಾಣುತ್ತವೆ. ಕಟ್ಟಡದ ಒಳಗೆ ಹಾಗೂ ಹೊರಗಡೆ ಇರುವ ಸುಂದರ ಕಮಾನುಗಳು, ದಪ್ಪನಾದ ಸ್ತಂಭಗಳು, ಬಣ್ಣ ಬಣ್ಣದ ಗಾಜಿನ ಕಿಟಕಿಗಳು, ವಿಶಿಷ್ಟವಾದ ಪೂಜಾವೇದಿಕೆ, ಕ್ರಿಸ್ತ, ತಂದೆ ಜೋಸೆಫ್, ತಾಯಿ ಮೇರಿಯ ವಿಗ್ರಹಗಳು ಇವು ಚರ್ಚುಗಳ ಮಹತ್ವ ಅಂಶಗಳಾಗಿವೆ.

ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿರುವ ಕ್ರೈಸ್ತ ದೇವಾಲಯಗಳಲ್ಲಿ ಐರೋಪ್ಯ ಶೈಲಿಯ ಶುದ್ಧ ರೂಪವಾಗಲಿ, ವೈಭವವಾಗಲಿ ಕಂಡುಬರುವುದಿಲ್ಲ. ಅವು ಸರಳವಾದ ಪ್ರಾದೇಶಿಕ ಶೈಲಿಯ ಕಟ್ಟಡಗಳು. ವಾಸ್ತುಶಿಲ್ಪದ ದೃಷ್ಟಿಯಿಂದ ಹೇಳಿಕೊಳ್ಳುವಷ್ಟು ಒಳ್ಳೆಯ ವಾಸ್ತುಕೃತಿಗಳಲ್ಲ. ಪ್ರಸ್ತುತ ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಇಂತಹ ಕ್ರೈಸ್ತ ದೇವಾಲಯಗಳಿವೆ. ಇವು ಶಿಕ್ಷಣ ಸಂಸ್ಥೆಗಳಾಗಿ, ಬ್ಯಾಂಕಿಂಗ್ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿವೆ. ಹೀಗೆ ವೈವಿಧ್ಯಮಯ ಚಟುವಟಿಕೆಗಳ ಕೇಂದ್ರವಾಗಿದ್ದ ದೇವಾಲಯಗಳು ಕ್ರೈಸ್ತ ಸಮುದಾಯದ ಸಾಂಸ್ಕೃತಿಕ, ಧಾರ್ಮಿಕ ಸಂಕೇತವಾಗಿಯೂ ಮೆರೆದವು. ಈ ದೇವಾಲಯಗಳು ತಮಗೆ ತಾವೇ ಸಂಘಟನಾ ಸಂಸ್ಥೆಗಳಾಗಿ ನಿಂತಿರುವುದಲ್ಲದೆ, ಯೂರೋಪಿಯನ್ ವಾಸ್ತುಶೈಲಿಯ ಲಕ್ಷಣಗಳನ್ನು ಒಳಗೊಂಡಿವೆ.

**ಚರ್ಚ್**

ಕ್ರೈಸ್ತ ಧರ್ಮದ ಒಂದು ಧಾರ್ಮಿಕ ಸಂಸ್ಥೆಯನ್ನು ಚರ್ಚ್ ಅಥವಾ ಧರ್ಮಸಭೆ ಎಂದು ಕರೆಯಲಾಗುವುದು. ಧರ್ಮ ಸಭೆಯೆಂದರೆ ಕ್ರಿಸ್ತನ ಮೂಲಕವಾಗಿ ದೇವರ ದಿವ್ಯ ಜೀವನದಲ್ಲಿ ಪಾಲ್ಗೊಳ್ಳುವವರ ಒಂದು ಸಂಘಟಿತ ಸಮೂಹ. ಚರ್ಚ್ ಪದದ ವ್ಯುತ್ಪತ್ತಿ ಸ್ವಾರಸ್ಯವಾಗಿದೆ. 'ಕಾಹಾಲ್' ಎಂಬ ಹೀಬ್ರುಪದ ಗ್ರೀಕ್ ಭಾಷೆಯಲ್ಲಿ ಎಕ್ಲೇಸಿಯಾ ಎಂದಾಗಿ ಇಂಗ್ಲಿಷಿನಲ್ಲಿ 'ಚರ್ಚ್' (Church)[೬೭] ಎಂದಾಗಿದೆ. ಕಾಹಾಲ್ ಎಂದರೆ ದೇವರ ಜನತೆಯ ಒಂದು ಸಭೆ; ದೇವರು ಕರೆ ನೀಡಿದುದರಿಂದ ಕ್ರೈಸ್ತ ಜನತೆ ಒಂದಾಗಿ ಸೇರಿರುವುದು, ಈ ಜನತೆಯ ಐಕ್ಯ, ಉದ್ದೇಶ, ದೇವರ ಉಪಾಸನೆ, ಇವೆಲ್ಲ ಅರ್ಥಗಳು ಮುಖ್ಯವಾಗಿ ಕಾಹಾಲ್ ಪದದಲ್ಲಿ ಅಡಕವಾಗಿವೆ. ಎಕ್ಲೇಸಿಯಾ ಎಂದರೆ ಗ್ರೀಕ್ ಅರಸು ರಾಜಕೀಯ ಸಂದರ್ಭದಲ್ಲಿ ಸೇರುತ್ತಿದ್ದ ಸಭೆ ಎಂಬ ಅರ್ಥದಲ್ಲಿ ಉಪಯೋಗವಾಗುತ್ತಿತ್ತು. ಕ್ರಿಸ್ತನ ನಂತರ ಅದು ದೇವರ ಸಭೆ ಎಂಬ ಅರ್ಥವನ್ನು ಪಡೆದುಕೊಂಡಿದೆ. ಚರ್ಚ್(Church) ಎಂಬ ಇಂಗ್ಲಿಷ್ ಪದಕ್ಕೆ

ಎರಡು ಅರ್ಥಗಳಿವೆ. ಒಂದು 'ಧರ್ಮಸಭೆ', ಎರಡು ಕ್ರೈಸ್ತರ ಆರಾಧನೆಯ ಸ್ಥಳವನ್ನು ಅಥವಾ ದೇಗುಲವನ್ನು ಚರ್ಚ್ ಎಂದು ಕರೆಯುತ್ತಾರೆ. ತಮಿಳು ಭಾಷೆಯಲ್ಲಿ 'ಧರ್ಮಸಭೆ'ಯ ಬದಲಾಗಿ "ತಿರುಸಭೆ' ಎಂಬ ಪದ ಪ್ರಯೋಗವಾಗಿದೆ. 'ತಿರು' ಎಂಬ ತಮಿಳು ಪದಕ್ಕೆ ಶ್ರೀ, ಪವಿತ್ರ, ಶ್ರೇಷ್ಠವಾದ, ಎಂದೆಲ್ಲಾ ಅರ್ಥಗಳಿವೆ. 'ತಿರುಸಭೆ' ಎಂದರೆ 'ಪವಿತ್ರ ಸಭೆ' ಎಂದರ್ಥ.[೬೮] ಆದಿಕಾಲದ ಬಹಳಷ್ಟು ಕ್ರೈಸ್ತ್ತ ಸಾಹಿತ್ಯ ತಮಿಳುನಿಂದಲೇ ಅನುವಾದವಾಗಿ ಬಂದವಾಗಿದ್ದವು. ಈ ಕಾರಣದಿಂದ ಬಹಳಷ್ಟು ತಮಿಳು ಪದಗಳು ಕನ್ನಡ ಕ್ರೈಸ್ತ ಸಾಹಿತ್ಯದಲ್ಲೂ ಸೇರಿ ಹೋಗಿವೆ ಎಂಬುದು ಗಮನಾರ್ಹ ಅಂಶ. ಚರ್ಚ್‌ನ್ನು ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರಿನಿಂದ ಕರೆಯಲಾಗುತ್ತಿದೆ. ಕರ್ನಾಟಕ-ಆಂಧ್ರಗಡಿನಾಡು ಪ್ರದೇಶದಲ್ಲಿ ತೆಲುಗು ಮಾತೃಭಾಷೆಯುಳ್ಳ ಕನ್ನಡ ಕ್ರೈಸ್ತರು ಚರ್ಚ್‌ನ್ನು 'ಗುಡಿ' ಎಂದು ಕರೆಯುತ್ತಾರೆ. ಕನ್ನಡ ಮಾತೃಭಾಷೆಯುಳ್ಳ ಕ್ರೈಸ್ತರು ಗುಡಿ, ಮಠ, ದೇವಾಲಯ, ದೇವಸ್ಥಾನವೆಂದು ಕರೆಯುವುದುಂಟು. ಬೆಂಗಳೂರು ಮತ್ತು ಕೋಲಾರ ಜಿಲ್ಲೆಯಲ್ಲಿರುವ ಕ್ರೈಸ್ತರು ಚರ್ಚ್‌ನ್ನು 'ಗುಡಿ' ಎಂದೇ ಇಂದಿಗೂ ಕರೆಯುವುದು ರೂಢಿಯಲ್ಲಿದೆ. ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಕ್ರೈಸ್ತರು 'ಮಠ' ಎಂದು ಕರೆಯುವರು. ಕೊಂಕಣಿ ಭಾಷೆಯ ಕ್ರೈಸ್ತರು ಚರ್ಚ್‌ನ್ನು 'ಇಗರ್ಜಿ' ಎಂದು ಕರೆಯುತ್ತಾರೆ. 'ಇಗರ್ಜಿ' ಪೋರ್ಚುಗೀಸ್ ಪದ. ಇದೇ ಪದ ಬಹುತೇಕ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಕ್ರೈಸ್ತರಲ್ಲಿ ಬಳಕೆಯಲ್ಲಿದೆ. ಒಟ್ಟಾರೆಯಾಗಿ ಚರ್ಚ್‌ನ್ನು ಗುಡಿ, ಮಠ, ದೇವಾಲಯ, ಇಗರ್ಜಿ, ಕತೀಡ್ರಲ್ ಎಂಬ ಇತ್ಯಾದಿ ಪದಗಳಿಂದ ಕರೆಯಲಾಗುತ್ತಿದೆ.

**ಜಾನ್ ಹ್ಯಾಂಡ್ಸ್ ಸ್ಮಾರಕ ದೇವಾಲಯ : ಬಳ್ಳಾರಿ**

ಕನ್ನಡದ ಹಲವು ಪ್ರಥಮಗಳಿಗೆ ಕಾರಣಕರ್ತರದ ರೆವರೆಂಡ್ ಜಾನ್ ಹ್ಯಾಂಡ್ ಯಾರು? ಈತನು ಎಲ್ಲಿಂದ ಬಂದ? ಬಳ್ಳಾರಿ ಜಿಲ್ಲೆಯಲ್ಲಿ ಹ್ಯಾಂಡ್ಸ್‌ರವರು ಮಾಡಿರುವ ಸೇವಾಭಿವೃದ್ಧಿಗಳು ಯಾವುವು? ಎಂಬುದರ ಬಗ್ಗೆ ನನ್ನನ್ನು ಕುತೂಹಲ ಉಂಟುಮಾಡಿತು. ಏಕೆಂದರೆ, ನಾನು ಬಳ್ಳಾರಿ ನಗರದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ನನಗೆ ಮೊದಲು ಕಂಡುಬಂದದ್ದು, ಬ್ರೂಸ್‌ಪೇಟೆಯಲ್ಲಿರುವ ಜಾನ್ ಹ್ಯಾಂಡ್ಸ್ ಸ್ಮಾರಕ ದೇವಾಲಯ. ಇದರ ಬಗ್ಗೆ ಈವರೆಗೆ ಆಗಿರುವ ಅಧ್ಯಯನಗಳನ್ನು ಸಮೀಕ್ಷೆ ಮಾಡಿದಾಗ ಕೆಲವು ಗ್ರಂಥಗಳಲ್ಲಿ ಸಂಕ್ಷಿಪ್ತ ಟಿಪ್ಪಣಿ ರೂಪದಲ್ಲಿ ದಾಖಲಿಸಿರುವುದು ಗಮನಾರ್ಹ.

ಜಾನ್. ಕೆಲ್‌ಶಲ್ ಅವರು 'Manual of the Bellary District' ಗೆಝೆಟಿಯರ್‌ನಲ್ಲಿ ಲಂಡನ್ ಧರ್ಮ ಪ್ರಚಾರಕ ಮಂಡಳಿಯು ಕರ್ನಾಟಕದ ಶ್ರೀರಂಗಪಟ್ಟಣದಲ್ಲಿ ಒಂದು ಮಿಷನ್ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಿರ್ಧರಿಸಿ, ಇಲ್ಲಿಗೆ ಜಾನ್ ಹ್ಯಾಂಡ್ಸ್‌ರವರನ್ನು ಪ್ರಚಾರಕನೆಂದು ನೇಮಿಸಿ ಕಳುಹಿಸಿಕೊಡಲಾಯಿತು. ಕ್ರಿ.ಶ. ೧೮೧೦ ಮೇ ೦೫ರಂದು ಬಳ್ಳಾರಿಗೆ ಆಗಮಿಸಿದರು ಎಂಬ ವಿವರಣೆಯನ್ನು ಸಂಗ್ರಹಿಸಿದ್ದಾರೆ. ರೆವೆ.ಎನ್. ಸಭಾಪತಿ ಅವರು Short History of Holy Trinity Church Bellary' ಎಂಬ ಗ್ರಂಥದಲ್ಲಿ ಜಾನ್ ಹ್ಯಾಂಡ್ಸ್‌ರವರು ಬಳ್ಳಾರಿ ನಗರದ

ನೀಲಮ್ಮನ ತೋಟದಲ್ಲಿ ಭೂಮಿಯನ್ನು ಖರೀದಿಸಿ, ಹೇಗೆ ಧರ್ಮ ಪ್ರಚಾರ ಮಾಡಿದರು ಎಂಬುದರ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಡಾ. ಶ್ರೀನಿವಾಸ ಹಾವನೂರ ಅವರು 'ಹೊಸಗನ್ನಡದ ಅರುಣೋದಯ' ಎಂಬ ಗ್ರಂಥದಲ್ಲಿ ಕರ್ನಾಟಕದಲ್ಲಿ ಪ್ರಾಟೆಸ್ಟೆಂಟ್ ಮತ ಪ್ರಸಾರದ ಭದ್ರಬುನಾದಿಯನ್ನು ಹಾಕಿದ ಜಾನ್ ಹ್ಯಾಂಡ್ಸ್‌ರವರು ಕನ್ನಡ ಸಾಹಿತ್ಯಕ್ಕೆ ನೀಡಿರುವ ಕೊಡುಗೆ ಏನು? ಕ್ರಿ.ಶ. ೧೮೨೭ರಲ್ಲಿ ಹ್ಯಾಂಡ್ಸ್‌ರವರು ಬಳ್ಳಾರಿಯಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿರುವುದರ ಬಗ್ಗೆ ವಿವರಿಸಿದ್ದಾರೆ. ರೆವೆ.ಎನ್. ಸಭಾಪತಿ ಅವರು "ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನಿನ ಪ್ರಥಮ ಕೊಡುಗೆ" ಎಂಬ ಗ್ರಂಥದಲ್ಲಿ ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಕರ್ನಾಟಕಕ್ಕೆ ಬಂದ ಜಾನ್ ಹ್ಯಾಂಡ್ಸ್, ವಿಲಿಯಂ ರೀವ್, ಜಾನ್ ರೀಡ್, ವಾರ್ಡಲಾ ಮೊದಲಾದವರು ಕನ್ನಡದಲ್ಲಿ ಆಧುನಿಕ ಹೊಸಗನ್ನಡದ ಗದ್ಯ, ಪದ್ಯ ರಚನೆಯನ್ನು ವ್ಯವಸ್ಥಿತವಾದ ವ್ಯಾಕರಣವನ್ನು, ನೂತನ ಶಬ್ದ ನಿಘಂಟುಗಳನ್ನು ರಚಿಸಿರುವುದರ ಬಗ್ಗೆ ದಾಖಲಿಸಿದ್ದಾರೆ. ಈ ನಾಲ್ಕು ಗ್ರಂಥಗಳಲ್ಲಿ ಜಾನ್ ಹ್ಯಾಂಡ್ಸ್‌ರವರ ಬಗ್ಗೆ ಸಾರಾಂಶ ರೂಪದಲ್ಲಿ ನೀಡಿದ್ದಾರೆಯೇ ಹೊರತು ಆತನ ಸಮಗ್ರ ಚಾರಿತ್ರಿಕ ಚಿತ್ರಣವನ್ನು ನೀಡಿಲ್ಲದೆ ಇರುವುದು ಕಂಡುಬಂದಿದೆ. ಈ ಹಿನ್ನೆಲೆಯಲ್ಲಿ ಜಾನ್ ಹ್ಯಾಂಡ್ಸ್ ಅವರ ಜೀವನ, ಧಾರ್ಮಿಕ ಸೇವೆ, ಕನ್ನಡ ಸಾಹಿತ್ಯಕ್ಕೆ ಕೊಟ್ಟ ಕೊಡುಗೆ, ಶಿಕ್ಷಣದ ಒಲವು, ಇವರ ಸ್ಮಾರಣಾರ್ಥ ದೇವಾಲಯದ ಸ್ಥಾಪನೆ ಇತ್ಯಾದಿ ಅಂಶಗಳ ಕುರಿತು ಅಧ್ಯಯನ ಮಾಡುವ ಪ್ರಯತ್ನವಾಗಿದೆ.

**ಜಾನ್ ಹ್ಯಾಂಡ್ಸ್ ಅವರ ಜೀವನ ಮತ್ತು ಸಾಧನೆಗಳು**

**ಜೀವನ :** ಒಬ್ಬ ಶ್ರೇಷ್ಠ ಕ್ರೈಸ್ತ ಪಾದ್ರಿಯಾಗಿದ್ದ ಶ್ರೀ ಚಾರ್ಲಸ್ ಹ್ಯಾಂಡ್ಸ್ ಅವರ ಪುತ್ರನಾಗಿ ಜಾನ್ ಹ್ಯಾಂಡ್ಸ್ ಅವರು ಕ್ರಿ.ಶ. ೧೭೮೦ ಡಿಸೆಂಬರ್ ೦೫ರಂದು ಇಂಗ್ಲೆಂಡಿನ ನಾರ್ಥ ಹ್ಯಾಂಪ್ಟನ್ ಶೈರ್ ಜಿಲ್ಲೆಯ ರೋಪ್ ಎಂಬ ಗ್ರಾಮದಲ್ಲಿ ಜನಿಸಿದರು. ಜಾನ್ ಹ್ಯಾಂಡ್ಸ್‌ರವರು ಸುಸಂಸ್ಕೃತ ಸೌಜನ್ಯವುಳ್ಳ ಕ್ರೈಸ್ತ ಕುಟುಂಬದಲ್ಲಿ ಜನಿಸಿರುವುದರಿಂದ ಚಿಕ್ಕ ವಯಸ್ಸಿನಿಂದಲೇ ವಿದೇಶಗಳಿಗೆ ತೆರಳಿ, ಮಿಷನರಿಯಾಗಿ ಯೇಸು ಕ್ರಿಸ್ತನ ಸಂದೇಶವನ್ನು ಸಾರಬೇಕೆಂಬ ದೃಢ ಸಂಕಲ್ಪವನ್ನು ಮೈಗೂಡಿಸಿಕೊಂಡಿದ್ದನು. ಇದನ್ನು ತಿಳಿದ ತಂದೆ ಚಾರ್ಲ್ಸ್ ಹ್ಯಾಂಡ್ಸ್‌ರವರು ಇವರನ್ನು ಗಾಸ್‌ಪೋರ್ಟ್ ಎಂಬ ವಿದ್ಯಾಪೀಠದಲ್ಲಿ ಆಧ್ಯಾತ್ಮಿಕ ಗುರು ಅಥವಾ ಪಾದ್ರಿಯಾಗಿದ್ದ ಡೇವಿಡ್ ಬೋಗ್ ಅವರ ಅಧೀನದಲ್ಲಿ ಗುರುಶಿಕ್ಷಣ ತರಬೇತಿ ಪಡೆಯಲು ಸೇರಿಸಿದ್ದರು. ಜಾನ್ ಹ್ಯಾಂಡ್ಸ್ ಅವರು ಗುರುಶಿಕ್ಷಣ ಪಡೆಯುತ್ತಿದ್ದ ಕಾಲಕ್ಕೆ ಲಂಡನ್ ಧರ್ಮ ಪ್ರಚಾರಕ ಮಂಡಳಿಯು ಕರ್ನಾಟಕದ ಶ್ರೀರಂಗಪಟ್ಟಣದಲ್ಲಿ ಒಂದು ಮಿಷನ್ ಕೇಂದ್ರವನ್ನು ಸ್ಥಾಪಿಸಬೇಕೆಂದು ನಿರ್ಧರಿಸಲಾಗಿತ್ತು. ಇಲ್ಲಿಗೆ ಧರ್ಮ ಪ್ರಚಾರಕ್ಕಾಗಿ ಯಾವ ಮಿಷನರಿಯನ್ನು ಕಳುಹಿಸಿಕೊಡಬೇಕೆಂದು ಸಮಸ್ಯೆ ಉಂಟಾದಾಗ, ಲಂಡನ್ ಧರ್ಮ ಪ್ರಚಾರಕ ಮಂಡಳಿಯು ಡೇವಿಡ್ ಬೋಗ್ ಅವರ ಮಾರ್ಗದರ್ಶನದಲ್ಲಿ ತರಬೇತಿ ಪಡೆಯುತ್ತಿದ್ದ ಇಪ್ಪತ್ತೊಂಬತ್ತರ ಯೌವನದಲ್ಲಿದ್ದ "ಜಾನ್ ಹ್ಯಾಂಡ್ಸ್‌ರವರಿಗೆ ಗುರುದೀಕ್ಷೆಯನ್ನು ನೀಡಿ, ಲಂಡನ್ ಮಿಷನ್

ಸಂಸ್ಥೆಯ ಧರ್ಮಪ್ರಚಾರಕನೆಂದು ನೇಮಿಸಿ, ಕಳುಹಿಸಿಕೊಟ್ಟರು".[೬] ಈಸ್ಟ್ ಇಂಡಿಯಾ ಕಂಪನಿಯ ನಾವೆಗಳಲ್ಲಿ ಕ್ರೈಸ್ತ ಮಿಷನರಿಗಳಿಗೆ ನಿರ್ಬಂಧವಿದ್ದ ಕಾರಣ ಜಾನ್ ಹ್ಯಾಂಡ್ಸ್‌ರವರು ಕ್ರಿ.ಶ. ೧೮೦೯ರ ನವೆಂಬರ್‌ನಲ್ಲಿ ಡಚ್ಚರ (ಡ್ಯಾನಿಷರ) ನೌಕೆಯಲ್ಲಿ ಲಂಡನ್ನನ್ನು ತೆರಳಿ ಕ್ರಿ.ಶ. ೧೮೧೦ ಫೆಬ್ರವರಿ ೦೫ರಂದು ರಂಗೂನ್ ಮಾರ್ಗವಾಗಿ ಮದರಾಸ್, ಬಂದರನ್ನು ತಲುಪಿದನು. ಆದರೆ, ಲಂಡನ್‌ನಲ್ಲಿದ್ದ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿಗಳ ಅನುಮತಿಯಿಲ್ಲದೆ ಭಾರತಕ್ಕೆ ಪ್ರವೇಶಿಸಿ ಬಂದಿರುವನು ಎಂಬ ಅಪಾದನೆಗೆ ಗುರಿಯಾದನು. ಕಾರಣ ೧೮೧೫ಕ್ಕಿಂತ ಪೂರ್ವದಲ್ಲಿ ಕ್ರೈಸ್ತ ಮಿಷನರಿಗಳಿಗೆ ಪ್ರವೇಶ ಇರಲಿಲ್ಲ. ಏಕೆಂದರೆ ಮಿಷನರಿಗಳು ಮಾಡುವ ಧರ್ಮ ಪ್ರಚಾರ ಕಾರ್ಯವು ತಮ್ಮ ಆಡಳಿತದ ಕಾರ್ಯಚಟುವಟಿಕೆಗಳಿಗೆ ಧಕ್ಕೆ ತರಬಹುದೆಂಬ ಕಾರಣದಿಂದ ಈಸ್ಟ್ ಇಂಡಿಯಾ ಕಂಪನಿಯು ನಿಷೇಧಿಸಲ್ಪಟ್ಟಿತು. ಹಾಗಾಗಿ "ಮದರಾಸ್‌ನ ಗವರ್ನರ್ ಆಗಿದ್ದ ಶ್ರೀ ಜಾರ್ಜ್ ಬಾರ್ಲೋರವರು ಜಾನ್ ಹ್ಯಾಂಡ್ಸ್ ಅವರನ್ನು ಕೂಡಲೇ ಮರುತೆರಳುವ ಹಡಗಿನಲ್ಲಿ ಹಿಂತಿರುಗಬೇಕೆಂದು ಆಜ್ಞಾಪಿಸಿದರು". ಜಾನ್ ಹ್ಯಾಂಡ್ಸ್ ಮರಳಿ ಹಿಂತಿರುಗದೆ, ಮದರಾಸ್‌ನಲ್ಲಿದ್ದ ಬ್ರಿಟಿಷ್ ಸೇನೆಯ ಬೋಧಕನಾದ ಘನ ವಿಲಿಯಂ ಥಾಮಸನ್‌ನ್ನು ಭೇಟಿ ಮಾಡಿ, ತಾನು ಬಂದಿರುವ ಉದ್ದೇಶವನ್ನು ಅವರ ಬಳಿ ಹೇಳಿಕೊಂಡನು. ಆಗ ವಿಲಿಯಂ ಥಾಮಸನ್ನನ ಸುದೈವದಿಂದ ಜಾನ್ ಹ್ಯಾಂಡ್ಸ್ ಅವರನ್ನು ಮದರಾಸ್ ಗವರ್ನರ್ ಬಳಿ ಸಂದರ್ಶಿಸಿ, ಬಹು ಪ್ರಯಾಸ ಪರಿಶ್ರಮದಿಂದ ಉಳಿಸಿಕೊಳ್ಳುವಲ್ಲಿ ಯಶಸ್ವಿಯಾದನು.

ಜಾರ್ಜ್ ಬಾರ್ಲೋ ಮತ್ತು ವಿಲಿಯಂ ಥಾಮಸನ್‌ನು ಕ್ರಿ.ಶ. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನ ಸೋಲು ಹಾಗೂ ಮರಣದ ರಾಜಕೀಯ ಸಂದಿಗ್ಧ ಪರಿಸ್ಥಿತಿಯನ್ನು ತಿಳಿದ ಅವರು ಜಾನ್ ಹ್ಯಾಂಡ್ಸ್‌ನನ್ನು ಶ್ರೀರಂಗಪಟ್ಟಣಕ್ಕೆ ಹೋಗುವ ಬದಲು ಬ್ರಿಟಿಷ್ ಸೇನಾಪಡೆಯಿದ್ದ ಬಳ್ಳಾರಿಗೆ ಹೋಗಬೇಕೆಂದು ಆಜ್ಞಾಪಿಸಿದರು. ಈ ಆಜ್ಞೆಯ ಮೇರೆಗೆ ಹ್ಯಾಂಡ್ಸ್ ಅವರು ಬಳ್ಳಾರಿ ಮಾರ್ಗವಾಗಿ ಪ್ರಯಾಣ ಮಾಡಿದರು. ಕ್ರಿ.ಶ. ೧೮೧೦ರ ಸಂದರ್ಭದಲ್ಲಿ ಯಾವುದೇ ಬಸ್, ರೈಲು ಸೌಲಭ್ಯಗಳಿಲ್ಲದ ಸಮಯದಲ್ಲಿ ಹ್ಯಾಂಡ್ಸ್‌ನು ಎತ್ತಿನಬಂಡಿಯ ದಾರಿಗಳನ್ನವಲಂಬಿಸಿ, ಮದರಾಸ್‌ನಿಂದ ಆಂಧ್ರದ ವೆಲ್ಲೂರು ಮಾರ್ಗವಾಗಿ ಪಲ್ಲಕ್ಕಿ ಹಾಗೂ ಎತ್ತಿನಬಂಡಿಯಲ್ಲಿ ದೀರ್ಘ ಪ್ರಯಾಣ ಮಾಡಿ ಕೊನೆಗೆ ಕ್ರಿ.ಶ. ೧೮೧೦ ಮೇ ೦೫ರಂದು ನಡುಬೇಸಿಗೆಯ ಉರಿಯಲ್ಲಿ ಬಳ್ಳಾರಿಯನ್ನು ತಲುಪಿದನು. ಆ ದಿನವು ವಿಶಾಲ ಕನ್ನಡ ನಾಡಿನ ಭೂಮಿಯ ಮೇಲೆ ಕ್ರೈಸ್ತ ಧರ್ಮದ ಪ್ರಥಮ ಪ್ರಾಟೆಸ್ಟೆಂಟ್ ಮಿಷನರಿಯಾಗಿ ಜಾನ್ ಹ್ಯಾಂಡ್ಸ್ ಪಾದಾರ್ಪಣೆ ಮಾಡಿದರು. ಇದರಿಂದ ಅಗೋಚರವಾಗಿ ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯಕ್ಕೆ ಆರತಿ ಬೆಳಗಿ ಪುಷ್ಪಗುಚ್ಛ ಸಮರ್ಪಿಸಿದಂತಾಯಿತು.

**ಜಾನ್ ಹ್ಯಾಂಡ್ಸ್‌ನ ಸಾಧನೆಗಳು**

ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ತಲುಪಿದ ಸಂದರ್ಭದಲ್ಲಿ ಅವರಿಗೆ ಇಲ್ಲಿನ ಲೋಕ ಅಪರಿಚಿತವಾಗಿತ್ತು. ಹೊಸ ಸಂಸ್ಕೃತಿ, ಹೊಸಜನ, ವಿವಿಧ ಭಾಷೆ, ಬರಗಾಲ ಮತ್ತು ಕ್ಷಾಮದಿಂದ

ಆರ್ಥಿಕತೆಯ ಕುಸಿತ ಹಾಗೂ ಸ್ಥಳೀಯ ಜನರಿಂದ ಆದ ಅಪಮಾನಗಳನ್ನು ನಿಯಂತ್ರಿಸಿಕೊಳ್ಳಲು ಅವರಿಗೆ ಬಹಳ ಕಷ್ಟದ ಕೆಲಸವಾಗಿತ್ತು. ಈ ಎಲ್ಲಾ ಸಮಸ್ಯೆಗಳನ್ನು ಜಾಣ್ಮೆಯಿಂದ, ಸಹನೆಯಿಂದ ಹಾಗೂ ಧೈರ್ಯದಿಂದ ಎದುರಿಸಬೇಕಾಗಿತ್ತು.

**ಕನ್ನಡ ಭಾಷೆ:** ಜಾನ್ ಹ್ಯಾಂಡ್ಸ್‌ನು ಬಳ್ಳಾರಿಗೆ ಕಾಲಿಟ್ಟ ಮೊದಲ ವರ್ಷದಲ್ಲಿಯೇ ಅವರು ಮಾಡಿದ ಮೊದಲ ಕೆಲಸವೆಂದರೆ ಕನ್ನಡ ಭಾಷೆಯನ್ನು ಕಲಿಯಲಾರಂಭಿಸಿದ್ದನು. ಏಕೆಂದರೆ, ಕ್ರೈಸ್ತಧರ್ಮ ಪ್ರಚಾರಕ್ಕಾಗಿ ಸ್ಥಳೀಯ ಭಾಷೆಯನ್ನು ಕಲಿಯುವುದು ಅನಿವಾರ್ಯತೆ ಅವರಿಗಿತ್ತು. ಹಾಗಾಗಿ ಅವರು ಬಳ್ಳಾರಿಯಲ್ಲಿ ಓರ್ವ ಬ್ರಾಹ್ಮಣ ಶಿಕ್ಷಕನಾಗಿದ್ದ ಮುನ್ಷಿಯನ್ನು ತಾನೇ ನೇಮಿಸಿಕೊಂಡು ಅವರ ಬಳಿ ರಾತ್ರಿ ಹಗಲೆನ್ನದೆ ಕನ್ನಡ ಭಾಷೆಯನ್ನು ಕಲಿಯುವುದರಲ್ಲಿ ನಿರತರಾಗಿದ್ದನು. ಆಗ ಕನ್ನಡದಲ್ಲಿ ಯಾವುದೇ ನಿಘಂಟಾಗಲಿ, ವ್ಯಾಕರಣ ಗ್ರಂಥವಾಗಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಅವರು ಕೆಲವೇ ದಿನಗಳಲ್ಲಿ ಸಾವಿರಕ್ಕೂ ಹೆಚ್ಚು ಕನ್ನಡ ಪದಗಳನ್ನು ಕಲೆ ಹಾಕಿ ಅವುಗಳಿಗೆ ಇಂಗ್ಲೀಷ್ ಸಮಾನಾರ್ಥ ಪದಗಳನ್ನು ಪಟ್ಟಿ ಮಾಡಿದ್ದನು. ಇವರು ಪಟ್ಟಿ ಮಾಡಿದ ಪದಗಳಿಂದ ಶಬ್ದಕೋಶ, ವ್ಯಾಕರಣ ಗ್ರಂಥ, ಪಾಶ್ಚಾಮಾತ್ಯ ವಿಚಾರಗಳನ್ನು ಅನುವಾದ ಮಾಡಿರುವುದು ಶ್ಲಾಘನೀಯ.

**ಜಾನ್ ಹ್ಯಾಂಡ್ಸ್‌ನ ಸಾಧನೆಗಳು**

ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ತಲುಪಿದ ಸಂದರ್ಭದಲ್ಲಿ ಅವರಿಗೆ ಇಲ್ಲಿನ ಲೋಕ ಅಪರಿಚಿತವಾಗಿತ್ತು. ಹೊಸ ಸಂಸ್ಕೃತಿ, ಹೊಸ ಜನ, ವಿವಿಧ ಭಾಷೆ, ಬರಗಾಲ ಮತ್ತು ಕ್ಷಮದಿಂದ ಆರ್ಥಿಕತೆಯ ಕುಸಿತ ಹಾಗೂ ಸ್ಥಳೀಯ ಜನರಿಂದ ಆದ ಅಪಮಾನಗಳನ್ನು ನಿಯಂತ್ರಿಸಿಕೊಳ್ಳಲು ಅವರಿಗೆ ಬಹಳ ಕಷ್ಟದ ಕೆಲಸವಾಗಿತ್ತು. ಈ ಎಲ್ಲಾ ಸಮಸ್ಯೆಗಳನ್ನು ಜಾಣ್ಮೆಯಿಂದ, ಸಹನೆಯಿಂದ ಹಾಗೂ ಧೈರ್ಯದಿಂದ ಎದುರಿಸಬೇಕಾಗಿತ್ತು.

**ಕನ್ನಡ ಭಾಷೆ** : ಜಾನ್ ಹ್ಯಾಂಡ್ಸ್‌ನು ಬಳ್ಳಾರಿಗೆ ಕಾಲಿಟ್ಟ ಮೊದಲ ವರ್ಷದಲ್ಲಿಯೇ ಅವರು ಮಾಡಿದ ಮೊದಲ ಕೆಲಸವೆಂದರೆ ಕನ್ನಡ ಭಾಷೆಯನ್ನು ಕಲಿಯಲಾರಂಭಿಸಿದ್ದನು. ಏಕೆಂದರೆ, ಕ್ರೈಸ್ತ ಧರ್ಮ ಪ್ರಚಾರಕ್ಕಾಗಿ ಸ್ಥಳೀಯ ಭಾಷೆಯನ್ನು ಕಲಿಯುವುದು ಅನಿವಾರ್ಯತೆ ಅವರಿಗಿತ್ತು. ಹಾಗಾಗಿ ಅವರು ಬಳ್ಳಾರಿ ಜಿಲ್ಲೆಯಲ್ಲಿ ಓರ್ವ ಬ್ರಾಹ್ಮಣ ಶಿಕ್ಷಕನಾಗಿದ್ದ ಮುನ್ಷಿಯನ್ನು ತಾನೇ ನೇಮಿಸಿಕೊಂಡು ಅವರ ಬಳಿ ರಾತ್ರಿ ಹಗಲೆನ್ನದೆ ಕನ್ನಡ ಭಾಷೆಯನ್ನು ಕಲಿಯುವುದರಲ್ಲಿ ನಿರತರಾಗಿದ್ದನು. ಆಗ ಕನ್ನಡದಲ್ಲಿ ಯಾವುದೇ ನಿಘಂಟಾಗಲಿ, ವ್ಯಾಕರಣ ಗ್ರಂಥವಾಗಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಅವರು ಕೆಲವೇ ದಿನಗಳಲ್ಲಿ ಸಾವಿರಕ್ಕೂ ಹೆಚ್ಚು ಕನ್ನಡ ಪದಗಳನ್ನು ಕಲೆ ಹಾಕಿ ಅವುಗಳಿಗೆ ಇಂಗ್ಲೀಷ್ ಸಮಾನಾರ್ಥ ಪದಗಳನ್ನು ಪಟ್ಟಿ ಮಾಡಿದ್ದನು. ಇವರು ಪಟ್ಟಿ ಮಾಡಿದ ಪದಗಳಿಂದ ಶಬ್ದಕೋಶ, ವ್ಯಾಕರಣ ಗ್ರಂಥ, ಪಾಶ್ಚಾಮಾತ್ಯ ವಿಚಾರಗಳನ್ನು ಅನುವಾದ ಮಾಡಿರುವುದು ಶ್ಲಾಘನೀಯ.

**ಮುದ್ರಣ** : ಭಾರತದಲ್ಲಿ ಮುದ್ರಣ ಕಲೆಯನ್ನು ಆಚರಣೆಗೆ ತಂದವರು ಕ್ರಿಶ್ಚಿಯನ್ ಪಾದ್ರಿಗಳು. "ಗೋವೆಯಲ್ಲಿದ್ದ ಪೋರ್ಚುಗೀಸ್ ಪಾದ್ರಿಗಳು ಸಂತ ಝೇವಿಯರ್ ವಿರಚಿತ 'ಡೌಟ್ರಿನಾ ಕ್ರಿಸ್ತಾ' ಗ್ರಂಥವನ್ನು ಕ್ರಿ.ಶ. ೧೫೫೭ರಲ್ಲಿ ಹೊರತಂದರು".[೮] ಇದುವೆ ಭಾರತದಲ್ಲಿ ಆದ್ಯ ಮುದ್ರಿತ ಕೃತಿ. ಭಾರತದಲ್ಲಿ ಕ್ರೈಸ್ತ ಧರ್ಮ ಪ್ರಸಾರವಾಗಬೇಕಾದರೆ, ದೇಶ ಭಾಷೆಗಳಲ್ಲಿಯೇ ಗ್ರಂಥಗಳನ್ನು ಬರೆದು ಮುದ್ರಿಸುವುದು ಹೆಚ್ಚು ಸೂಕ್ತ ಎನ್ನುವ ವಿಚಾರದಿಂದ ಗೋವೆಯ ಜೆಸುಯಿಟ್ ಪಾದ್ರಿಗಳು ಸ್ಥಳೀಯ ಭಾಷೆಗೆ ಹೆಚ್ಚು ಪ್ರಾಧಾನ್ಯತೆ ನೀಡಿದರು.

ಕನ್ನಡ ಭಾಷೆಯಲ್ಲಿ ಮುದ್ರಣಗೊಂಡ ಗ್ರಂಥಗಳು ಮೊದಲು ಕರ್ನಾಟಕದಲ್ಲಾಗದೆ, ಬಂಗಾಳದ ಸೆರಾಂಪುರ ಮತ್ತು ಮದರಾಸಿನ ಸೆಂಟ್ ಜಾರ್ಜ್ ಕಾಲೇಜಿನ ಮುದ್ರಣಾಲಯದಲ್ಲಿ ಪ್ರಕಟಗೊಳ್ಳುತ್ತಿದ್ದವು. "ಕನ್ನಡದ ಪ್ರಥಮ ಮುದ್ರಿತ ಗ್ರಂಥವೆಂದರೆ, ವಿಲಿಯಂ ಕೇರಿಯವರ 'A Grammar of the Kurnata Language' ಎಂಬ ಗ್ರಂಥ".[೯] (೧೮೧೭ರಲ್ಲಿ), ನಂತರ ಇಂಗ್ಲೀಷ್-ಕನ್ನಡ ಅರ್ಥಕೋಶವನ್ನು ೧೮೨೪ರಲ್ಲಿ ಮುದ್ರಿಸಿ ಪ್ರಕಟಿಸಲಾಯಿತು. ಇದನ್ನು ಮನಗಂಡ ಜಾನ್ ಹ್ಯಾಂಡ್ಸ್ ಕರ್ನಾಟಕದಲ್ಲಿ ಕನ್ನಡದ್ದೇ ಆದ ಮುದ್ರಣ ಯಂತ್ರವನ್ನು ಬಳ್ಳಾರಿಯಲ್ಲಿಯೇ ಸ್ಥಾಪಿಸಬೇಕೆಂದು ನಿರ್ಧರಿಸಿದನು. "ದಿನಾಂಕ ೧೪-೭-೧೮೨೫ರಂದು ಲಂಡನ್ನಿನಲ್ಲಿರುವ ತನ್ನ ಕೇಂದ್ರ ಕಛೇರಿಗೆ ಬರೆದ ಪತ್ರದಲ್ಲಿ ಪ್ರೆಸ್ ಹಾಗೂ ಓರ್ವ ಮುದ್ರಕನನ್ನು ಕಳಿಸಬೇಕೆಂದು ಕೇಳಿಕೊಂಡನು".[೨] ಈ ಪತ್ರವನ್ನು ಪರಿಶೀಲಿಸಿದ ಕೇಂದ್ರ ಕಛೇರಿಯು ೧೮೨೬ರಲ್ಲಿ ಮುದ್ರಣಾ ಯಂತ್ರವನ್ನು ಬಳ್ಳಾರಿಗೆ ಕಳುಹಿಸಿಕೊಟ್ಟಿತು. ಅದು ಬಳ್ಳಾರಿಗೆ ಬಂದ ಕೆಲವೆ ದಿನಗಳಲ್ಲಿ ಅಂದರೆ, ೧೮೨೭ರಲ್ಲಿ ಕಾರ್ಯಗತಗೊಂಡಿತು. ಈ ವರ್ಷವು ಐತಿಹಾಸಿಕ ಮಹತ್ವವುಳ್ಳದ್ದು. ಏಕೆಂದರೆ ಕರ್ನಾಟಕದಲ್ಲಿಯೇ ಕನ್ನಡ ಗ್ರಂಥಗಳ ನಿಯಮಿತವಾದ ಮುದ್ರಣವು ಮೊದಲಾದುದು ಆ ವರ್ಷದಿಂದಲೇ.

ಪ್ರಥಮ ಕನ್ನಡ ಪತ್ರಿಕೆಯನ್ನು ೧೮೧೨ರಲ್ಲಿ ಬಳ್ಳಾರಿಯಲ್ಲಿ 'ಕನ್ನಡ ಸಮಾಚಾರ' ಎಂಬ ಹೆಸರಿನಿಂದ ಕ್ರಿಶ್ಚಿಯನ್ ಮಿಷನರಿಗಳು ಕಲ್ಲಚ್ಚಿನ ಮುದ್ರಣ ಯಂತ್ರದಲ್ಲಿ ಅಚ್ಚು ಮಾಡಿ ಪ್ರಕಟಿಸಿದರು ಎಂಬ ಸುದ್ಧಿ ಇತ್ತೀಚೆಗೆ ಗೊತ್ತಾಗಿದ್ದರೂ ಸರಿಯಾದ ಸಾಕ್ಷ್ಯಾಧಾರಗಳು ಸಿಕ್ಕಿಲ್ಲ. ಆದರೆ, ೧೮೪೩ರಲ್ಲಿ ಮಂಗಳೂರಿನಲ್ಲಿ ಸ್ಥಾಪಿತವಾದ 'ಮಂಗಳೂರು ಸಮಾಚಾರ' ಎಂಬ ಪತ್ರಿಕೆಯು ಸಿಕ್ಕಿದ್ದು ಅದೇ ಕನ್ನಡದ ಪ್ರಥಮ ಮುದ್ರಿತವಾದ ಪತ್ರಿಕೆ ಎಂದು ತಿಳಿಯಬಹುದಾಗಿದೆ.

ಕ್ರಿ.ಶ. ೧೮೨೭ರಲ್ಲಿ ಬಳ್ಳಾರಿಯಲ್ಲಿ ಆರಂಭಗೊಂಡ ಪ್ರಥಮ ಮಿಷನ್ ಪ್ರೆಸ್ಸಿನಲ್ಲಿ ಕನ್ನಡ, ತೆಲುಗು, ಎರಡೂ ಭಾಷೆಗಳಲ್ಲಿ ಪುಸ್ತಕಗಳು ಮುದ್ರಣ ನಡೆದಿದ್ದಿತು. ಜಾನ್ ಹ್ಯಾಂಡ್ಸ್ ಅವರು ಹಿಬ್ರೂ, ಗ್ರೀಕ್ ಮೂಲ ಭಾಷೆಗಳಿಂದ ಭಾಷಾಂತರ ಮಾಡಿದ ಪವಿತ್ರ ಸತ್ಯವೇದವನ್ನು ಶುದ್ಧ ಗದ್ಯಶೈಲಿಯಲ್ಲಿ ಮುದ್ರಿಸಿ ಯೇಸು ಕ್ರಿಸ್ತನ ರಕ್ಷಣೆಯ ಶುಭ ಸಂದೇಶವನ್ನು ಸರ್ವಜನರಿಗೂ ಓದುವಂತೆ ಅವರ ಕೈಗೆ ದೊರಕಿಸಬೇಕೆಂಬ ದಿವ್ಯ ದೀರ್ಘ ಕನಸನ್ನು ಹೊಂದಿದ್ದರು. ಜಾನ್ ಹ್ಯಾಂಡ್ಸ್‌ರು ಹೊಸ ಒಡಂಬಡಿಕೆಯನ್ನು ತಾವು ಭಾಷಾಂತರಿಸಿದ ತರುವಾಯ ವಿಲಿಯಂ

ರೀವ್‌ರೊಂದಿಗೆ ಸೇರಿ ಉಭಯರು ಹಳೇ ಒಡಂಬಡಿಕೆ ಭಾಷಾಂತರ ಪೂರ್ಣಗೊಳಿಸಿದರು. ಕ್ರಿ.ಶ. ೧೮೩೨ರಲ್ಲಿ ಹ್ಯಾಂಡ್ಸ್ ಲಂಡನ್ನಿನಿಂದ ಕನ್ನಡ ಮೊಳೆಗಳನ್ನು ಹಾಗೂ ಮುದ್ರಕನನ್ನು ಕರೆ ತಂದನು. ಜಾನ್ ಹ್ಯಾಂಡ್ಸ್, ಜಾನ್ ರೀಡ್ ವಿಲಿಯಂ ಕೇರಿ, ಪೇನ್ ಇವರ ನೇತೃತ್ವದಲ್ಲಿ ಮುದ್ರಣ ಕಾರ್ಯವು ಭರದಿಂದ ಮುಂದುವರಿದಿತ್ತು. ಆದರೆ ಮುದ್ರಕನಾದ ಪೇನ್ ಕಾಲರಾದಿಂದ ಕ್ರಿ.ಶ. ೧೮೪೨ರಲ್ಲಿ ಮಡಿದ ಮೇಲೆ ಅದರ ಗತಿ ಕ್ರಮೇಣ ಕುಂಠಿತಗೊಂಡು, ೧೮೫೪ರ ಸುಮಾರಿಗೆ ನಿಂತು ಹೋಯಿತು. ಆದರೆ ಮುದ್ರಣಾ ಕಾರ್ಯ ನಡೆದ ಕೊಠಡಿಯು ಹಾಗೆಯೇ ಪುಣ್ಯ ಸ್ಥಳವಾಗಿ ಉಳಿದಿದೆ. ಅದು ಬಳ್ಳಾರಿಯ ವಾಡ್ಲಾ ಪದವಿ ಪೂರ್ವ ಕಾಲೇಜಿನ ಒಳಾಂಗಣದಲ್ಲಿ ಅರ್ಧಚಂದ್ರಾಕಾರದ ರೀತಿಯಲ್ಲಿ ರಚಿಸಿರುವ ದುಂಡು ಮಾಳಿಗೆಯ ಕೊಠಡಿಯೊಂದು ಈವರೆಗೂ ಕಾಪಾಡಲ್ಪಟ್ಟು ಉಳಿದುಕೊಂಡಿರುತ್ತದೆ. ಆಗ ಮುದ್ರಿತವಾದ ಹಾಳೆಗಳ ಮೇಲಣ ಹಸಿ ಶಾಹಿಯ ಅಕ್ಷರಗಳನ್ನು ಆರಿಸಿಕೊಳ್ಳಲು ನೀಳವಾದ ಬೊಂಬುಗಳನ್ನು ಒಳಮಾಳಿಗೆಯಲ್ಲಿ ಅಡ್ಡಲಾಗಿ ಒಳಹೊಂದಿಸಿರುವುದನ್ನು ಈಗಲೂ ಅದನ್ನು ಕಂಡು ಆಶ್ಚರ್ಯಪಡಬಹುದು. ಈ ಕೊಠಡಿಯೇ ಬಹು ಚರಿತ್ರಾರ್ಹವಾದ ಬಳ್ಳಾರಿ ಲಂಡನ್ ಮಿಷನ್ ಪ್ರಿಂಟಿಂಗ್ ಪ್ರೆಸ್ ಎನಿಸಿಕೊಂಡಿದೆ. ಪ್ರಸ್ತುತ ಈ ಕೊಠಡಿಯನ್ನು ಗ್ರಂಥಾಲಯವನ್ನಾಗಿ ಮಾಡಿಕೊಳ್ಳಲಾಗಿದೆ.

**ಶಿಕ್ಷಣ** : ಜಾನ್ ಹ್ಯಾಂಡ್ಸ್ ಅವರು ಬಳ್ಳಾರಿಯಲ್ಲಿ ಕನ್ನಡ, ತೆಲುಗು ಮತ್ತು ಇಂಗ್ಲಿಷ್ ಶಾಲೆಗಳನ್ನು ಪ್ರಾರಂಭಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. "ಸ್ಥಳೀಯ ಸ್ತ್ರೀಯರಿಗೆ ಬ್ರಿಟಿಷ್ ಸೈನಿಕರಿಂದ ಹುಟ್ಟಿದ ಅನೇಕ ಅನಾಥ ಮಕ್ಕಳು ಅನ್ನವಿಲ್ಲದೆ ಅಲ್ಲಿದ್ದ ನಗ್ನತೆಯ ದುಃಸ್ಥಿತಿಯನ್ನು ಕಂಡು ನವೆಂಬರ್ ೧೮೧೧ರಲ್ಲಿ ಅವರ ವಿದ್ಯಾಭಿವೃದ್ಧಿಗಾಗಿ ಬ್ರಿಟಿಷ್ ನಾಗರಿಕ ಸೈನಿಕರ ಉದಾರ ಸಹಾಯದಿಂದ ಸುಮಾರು ೫೨ ಅನಾಥ ಮಕ್ಕಳಿಗೆ ಕೋಟೆಯ ಪ್ರದೇಶದಲ್ಲಿ ಅನಾಥ ಧರ್ಮ ವಿದ್ಯಾಶಾಲೆಯನ್ನು ಪ್ರಾರಂಭಿಸಿದರು".[೩] ಮಿಷನ್ ತೋಟದಲ್ಲಿ ೧೮೧೫ರಲ್ಲಿ ಜಾತಿ, ವರ್ಣ, ಕುಲಭೇದವಿಲ್ಲದೆ ೫೦ ಮಕ್ಕಳಿಗಾಗಿ ಮೊದಲ ಬಾರಿಗೆ ಕನ್ನಡ ಶಾಲೆಯನ್ನು ಪ್ರಾರಂಭಿಸಿದರು. ಕ್ರಿ.ಶ. ೧೮೧೬ರಲ್ಲಿ 'ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆ'ಯನ್ನು ಸ್ಥಾಪಿಸಿದರು. ೧೮೪೬ರಲ್ಲಿ ವಾಡ್ಲಾ ಪ್ರೌಢ ಶಾಲೆ ಸ್ಥಾಪನೆ. ಈ ಎಲ್ಲಾ ವಿದ್ಯಾ ಶಾಲೆಗಳ ಮೇಲ್ವಿಚಾರಣೆಯನ್ನು ಶ್ರೀಮತಿ ಹ್ಯಾಂಡ್ಸ್, ಶ್ರೀಮತಿ ಜಾನ್ ರೀಡಿ, ಶ್ರೀಮತಿ ಪೆಯಿನ್, ಶ್ರೀಮತಿ ವಾಲ್ಪನ್ ಮೊದಲಾದ ಮಿಷನರಿಗಳ ಪತ್ನಿಯರು ಶ್ರದ್ಧಾನಿಷ್ಠೆಗಳಿಂದ ಕಾರ್ಯನಿರ್ವಹಿಸುತ್ತಿದ್ದರು.

**ಜಾನ್ ಹ್ಯಾಂಡ್ಸ್ ಸ್ಮಾರಕ ದೇವಾಲಯ** : ಜಾನ್ ಹ್ಯಾಂಡ್ಸ್ ಮತ್ತು ವಿಲಿಯಂ ರೀವ್ ಅವರು ೧೮೧೮ರಲ್ಲಿ ದೇವರ ಆರಾಧನೆಗೆಂದು ಮಿಷನ್ ತೋಟದಲ್ಲಿ ದಕ್ಷಿಣ ದಿಕ್ಕಿನಲ್ಲಿ ಅಂದರೆ, ವಾರ್ಡ್ಲಾ ಪ್ರೌಢ ಶಾಲೆಯ ಹಿಂಭಾಗದಲ್ಲಿ ದೇವಾಲಯವನ್ನು ಕಟ್ಟಲು ಪ್ರಾರಂಭಿಸಿದರು. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಮರದ ತೀರು ಹಾಗೂ ಮಂಗಳೂರು ಹೆಂಚನ್ನು ಬಳಸಿ, ವಿಶಾಲವಾದ ನೆಲಮಾಳಿಗೆಯನ್ನು "ಅಕ್ಟೋಬರ್ ೧೮೨೪ರಲ್ಲಿ ಪೂರ್ಣಗೊಳಿಸಿ, ದೇವಾಲಯವನ್ನು

ಪ್ರತಿಷ್ಠಾಪಿಸಲಾಯಿತು".[೭೪] ಇದು ಮೋತಿ ಸರ್ಕಾಲ್‌ನಿಂದ ಬ್ರೂಸ್‌ಪೇಟೆ ಪೊಲೀಸ್ ಠಾಣೆಗೆ ಹೋಗುವ ಮಾರ್ಗದ ಎಡಭಾಗದಲ್ಲಿ ದಕ್ಷಿಣಾಭಿಮುಖವಾಗಿದೆ. ಇದರ ತಳಹದಿಯು ಶಿಲುಬೆಯಾಕಾರದಲ್ಲಿದ್ದು, ಮುಖಮಂಟಪ, ಮಧ್ಯಾಂಗಣ ಮತ್ತು ಬಲಿಪೀಠವನ್ನು ಒಳಗೊಂಡಿದೆ. ಚರ್ಚ್‌ನ ಮುಂಭಾಗವು ಹಳೆಯದಾದ ಮತ್ತು ಸರಳವಾದ ಡೋರಿಕ್ ಶೈಲಿಯ ನಾಲ್ಕು ಕಂಬಗಳಿವೆ. ಇವು ದಪ್ಪ ಹಾಗೂ ಸರಳವಾಗಿ ಇದ್ದು, ದೇವಾಲಯದ ಅಸ್ತಿಭಾರ ಅವುಗಳ ಮೇಲೆ ನಿಂತಿದೆ ಎನ್ನುವ ಹಾಗೆ ಕಾಣುತ್ತದೆ. ಕಂಬಗಳು ವೃತ್ತಾಕಾರದಲ್ಲಿದ್ದು, ಮೂರು ಭಾಗಗಳನ್ನು ಒಳಗೊಂಡಿದೆ. ಪ್ರತಿಯೊಂದು ಕಂಬವು ಚೌಕಾಕಾರದ ಪೀಠ, ವೃತ್ತವಿರುವ ಮಧ್ಯಾಂಗಣ ಹಾಗೂ ಕಂಬದ ಮೇಲ್ಭಾಗ ಬೋಧಿಗೆಯಿಂದ ಕೂಡಿದೆ. ದೇವಾಲಯದ ಮಧ್ಯಾಂಗಣವು ವಿಶಾಲವಾಗಿದ್ದು, ಇಲ್ಲಿ ಕ್ರೈಸ್ತ ಭಕ್ತರು ಕುಳಿತುಕೊಂಡು ಕ್ರಿಸ್ತನ ಉಪದೇಶಗಳನ್ನು ಕೇಳಲು ಮರದಿಂದ ಮಾಡಿದ ಡೆಸ್ಕ್‌ಗಳನ್ನು ಜೋಡಿಸಲಾಗಿದೆ. ದೇವಾಲಯದ ಬಲಿಪೀಠವು ಬಹಳ ಸರಳವಾಗಿ ಎರಡು ಅಡಿ ಎತ್ತರದಲ್ಲಿದ್ದು, ಅರ್ಧವೃತ್ತಾಕಾರದಲ್ಲಿದೆ. ಇಲ್ಲಿ ಶಿಲುಬೆಯನ್ನು ಬಿಟ್ಟರೆ ಬೇರೇನು ಕಂಡುಬರುವುದಿಲ್ಲ. ಏಕೆಂದರೆ, ಪ್ರಾಟೆಸ್ಟೆಂಟ್‌ರಲ್ಲಿ ಮೂರ್ತಿ ಆರಾಧನೆಗೆ ಪ್ರಾಶಸ್ತ್ಯವಿಲ್ಲ. ಹಾಗಾಗಿ ಇವರು ಶಿಲುಬೆಗೆ ಪ್ರಾಧಾನ ಸ್ಥಾನವನ್ನು ನೀಡಿರುವುದು ಕಂಡುಬರುತ್ತದೆ. ದೇವಾಲಯದ ಮೇಲ್ಭಾವಣಿಯು ಕೋನಾಕಾರದಲ್ಲಿದ್ದು, ಅದಕ್ಕೆ ಹೆಂಚ್‌ನ್ನು ಹೊದ್ದಿಸಲಾಗಿದೆ.

ಕ್ರಿಸ್ತನ ಪ್ರಾರ್ಥನೆಗಾಗಿ ಬ್ರಿಟಿಷ್ ಅಧಿಕಾರಿಗಳು, ಸೈನಿಕರು ಹಾಗೂ ಕ್ರೈಸ್ತ ಭಕ್ತರು ಈ ದೇವಾಲಯದಲ್ಲಿ ಪಾಲ್ಗೊಳ್ಳುತ್ತಿದ್ದರು. ಇದನ್ನು ಆರಂಭದಲ್ಲಿ "ದೇವರ ಆರಾಧನಾ ಮಂದಿರ" ಎಂದು ಕರೆಯುತ್ತಿದ್ದರು. "ಕ್ರಿ.ಶ. ೧೯೭೪ರಲ್ಲಿ ದೇವಾಲಯದ ನೂರ ಐವತ್ತನೆಯ ವಾರ್ಷಿಕೋತ್ಸವ ನಡೆಯಿತು".[೭೫] ಈ ವಾರ್ಷಿಕೋತ್ಸವ ಸಮಾರಂಭದಲ್ಲಿ ಜಾನ್ ಹ್ಯಾಂಡ್ಸ್ ಅವರು ಬಳ್ಳಾರಿ ಜಿಲ್ಲೆಯಲ್ಲಿ ಮಾಡಿರುವ ಅಪಾರ ಸೇವೆಯನ್ನು ಮೆಚ್ಚಿ ಆತನ ಕ್ರೈಸ್ತ ಭಕ್ತರು ಈ ದೇವಾಲಯಕ್ಕೆ ಜಾನಂ ಹ್ಯಾಂಡ್ಸ್ ಸ್ಮಾರಕ ದೇವಾಲಯವೆಂದು ನಾಮಾಂಕಿತು ಮಾಡಿದ್ದರು.

ಕ್ರಿ.ಶ. ೧೮೨೪ರಲ್ಲಿ ದೇವಾಲಯದ ಕಟ್ಟಡವನ್ನು ಕಟ್ಟುವುದಕ್ಕೆ ವೆಚ್ಚವಾದದ್ದು, ೭೨೫೫.೦೦ ರೂಪಾಯಿಗಳು, "ಈ ಹಣವನ್ನು ಹ್ಯಾಂಡ್ಸ್ ಮತ್ತು ರೀವ್‌ರು ಬಳ್ಳಾರಿಯಲ್ಲಿದ್ದ ಬ್ರಿಟಿಷ್ ಹಾಗೂ ದೇಶೀಯ ಸ್ನೇಹಿತರಿಂದ, ಮದರಾಸ್ ಮತ್ತು ಇತರ ಕಡೆಗಳಲ್ಲಿ ಇದ್ದ ಹಿತೈಷಿಗಳಿಂದಲೂ, ಹಣವನ್ನು ಸಂಗ್ರಹಿಸಿದರು. ಈ ಮೊತ್ತದಲ್ಲಿ ೩೩೦೦.೦೦ ರೂಪಾಯಿಗಳನ್ನು ಹ್ಯಾಂಡ್ಸ್‌ರು, ೨೦೦೦.೦೦ ರೂಪಾಯಿಗಳನ್ನು ವಿಲಿಯಂ ರೀವ್‌ರು ಸಂಗ್ರಹಿಸಿ, ಉಳಿದ ೧೯೫೫ ರೂಪಾಯಿಗಳನ್ನು ಮಿಷನ್ ಸಂಸ್ಥೆಯಿಂದ ತುಂಬಿಸಿದರು".[೭೬] ಪ್ರಸ್ತುತ ಕಟ್ಟಡವು ಜೀರ್ಣೋದ್ಧಾರ ಗೊಂಡಿದೆ.

ಒಟ್ಟಾರೆಯಾಗಿ ಜಾನ್ ಹ್ಯಾಂಡ್ಸ್ ಅವರು ಏನು ಗೊತ್ತಿಲ್ಲದ ನೆಲದಲ್ಲಿ ಹಾಗೂ ಯಾವುದೇ ಪರಿಕರಗಳಿಲ್ಲದ ಸಂದರ್ಭದಲ್ಲಿ ಕರ್ನಾಟಕದ ಮೊದಲ ಪ್ರಾಟೆಸ್ಟೆಂಟ್ ಮತಪ್ರಸಾರದ ಭದ್ರ ಬುನಾದಿಯನ್ನು ಹಾಕಿ ಕನ್ನಡ ಮುದ್ರಣದ ಸಸಿಯನ್ನು ಬಳ್ಳಾರಿಯಲ್ಲಿ ನೆಟ್ಟು ಕನ್ನಡ ನಾಡಿನ

ಶ್ರೇಯೋಭಿವೃದ್ಧಿಗೆ ಅವಿರತವಾಗಿ ಶ್ರಮಿಸಿದರು. ಜಾನ್ ಹ್ಯಾಂಡ್ಸ್‌ನು ಮಾಡಿರುವ ಯಾವುದೇ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಕಾರ್ಯವನ್ನು ತೆಗೆದುಕೊಳ್ಳಲಿ, ಅದರ ಹಿಂದೆ ಕ್ರೈಸ್ತ ಧರ್ಮದ ಪ್ರಸಾರ ಮತ್ತು ಮತಾಂತರವು ಏಕಮೇವ ಪ್ರಚೋದನೆಯಾಗಿತ್ತು ಎಂಬ ಅಂಶಗಳು ಮೇಲ್ನೋಟಕ್ಕೆ ಎದ್ದು ಕಾಣುತ್ತವೆ.

**ಹೋಲಿ ಟ್ರನಿಟಿ ಚರ್ಚ್ - ಬಳ್ಳಾರಿ**

ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ನಗರದ ಕಂಟೋನ್ಮೆಂಟ್ ಪ್ರದೇಶವು ಆಯಕಟ್ಟಿನ ಸ್ಥಳವಾಗಿದ್ದರಿಂದ ಈಸ್ಟ್ ಇಂಡಿಯಾ ಕಂಪನಿಯ ಸೈನಿಕರು ಬೀಡುಬಿಟ್ಟಿದ್ದರು. ಇವರಲ್ಲಿ ಬಹುತೇಕ ಸೈನಿಕರು ಕ್ರಿಶ್ಚಿಯನ್ನರಾಗಿದ್ದರು. ಇವರು ಆರಂಭದ ದಿನಗಳಲ್ಲಿ ಕ್ರಿಸ್ತನ ಆರಾಧನೆಯನ್ನು ಕೋಟೆಯ ಪ್ರದೇಶದ ಸಮತಟ್ಟಾದ ಸ್ಥಳದಲ್ಲಿ ಕುಳಿತು ಪ್ರಾರ್ಥಿಸುತ್ತಿದ್ದರು. ಕ್ರಿ.ಶ. ೧೮೦೬ರಲ್ಲಿ ಇಂಗ್ಲೆಂಡಿನಿಂದ ಮೊದಲ ಪಾದ್ರಿಯಾಗಿ ರೆವರೆಂಡ್ ವಿಲಿಯಂ ಥಾಮಸ್‌ನು ಸೀಡೆಡ್ ಜಿಲ್ಲೆಗಳ ಕೇಂದ್ರವಾಗಿದ್ದ ಬಳ್ಳಾರಿಗೆ ಆಗಮಿಸಿದನು. ಈತನು ಸೈನಿಕ ಹಾಗೂ ಮಿಲಿಟರಿ ಅಧಿಕಾರಿಗಳಿಗೆ ಕ್ರಿಸ್ತನ ಸಂದೇಶಗಳನ್ನು ಬೋಧಿಸುತ್ತಿದ್ದನು. ವಿಲಿಯಂ ಥಾಮಸ್‌ನು ಬಳ್ಳಾರಿಯಲ್ಲಿ ಒಂದು ಪ್ರಾರ್ಥನಾ ಮಂದಿರವನ್ನು ಸ್ಥಾಪಿಸಲು ಇಂಗ್ಲೆಂಡಿನ ಮೇಲಾಧಿಕಾರಿಗಳಿಗೆ ಮನವಿ ಪತ್ರವನ್ನು ಕಳುಹಿಸುತ್ತಾನೆ. ಈ ಮಂಜೂರಾತಿಯು ಕ್ರಿ.ಶ. ೧೮೧೧ರವರೆಗೆ ಅದು ವಿಳಂಬವಾಯಿತು. "ಕ್ರಿ.ಶ. ೧೮೧೧ರಲ್ಲಿ ಮದರಾಸ್ ಸರಕಾರವು ಹೋಲಿ ಟ್ರಿನಿಟಿ ಚರ್ಚ್ ನಿರ್ಮಿಸಲು ಸಹಾಯಕ ಇಂಜಿನಿಯರಾದ ಎಲಿಷಾ ಟ್ರಾಪೌಂಡ್ ಅವರನ್ನು ಆಯ್ಕೆ ಮಾಡಿ, ಬಳ್ಳಾರಿಗೆ ಕಳುಹಿಸಿ ಕೊಡಲಾಯಿತು".[೭೭] ಕ್ರಿ.ಶ. ೧೮೧೧ರಿಂದ ೧೮೧೨ರ ಕಾಲಾವಧಿಯಲ್ಲಿ ಎಲಿಷಾ ಟ್ರಾಪೌಂಡ್ ಹಾಗೂ ಆತನ ಶ್ರಮಿಕರು ಹೋಲಿ ಟ್ರಿನಿಟಿ ದೇವಾಲಯದ ಕಟ್ಟಡವನ್ನು ಸಂಪೂರ್ಣವಾಗಿ ಪೂರ್ಣಗೊಳಿಸಿದರು. ಇದರ ವೆಚ್ಚ ೪೯೩೭.೦೦ ರೂಪಾಯಿಗಳು ಆಗಿತ್ತು. ಕ್ರಿ.ಶ. ೧೮೪೪-೪೬ರ ಕಾಲಾವಧಿಯಲ್ಲಿ ಈ ದೇವಾಲಯದ ಪಾದ್ರಿಯಾಗಿದ್ದ ರೆವರೆಂಡ್. ಡಾ. ವಿಲಿಯಂ ಪೊವೆಲ್ ಅವರು ದೇವಾಲಯವನ್ನು ೨೪,೪೩೫.೦೦ ರೂಪಾಯಿಗಳ ವೆಚ್ಚದಲ್ಲಿ ಜೀರ್ಣೋದ್ಧಾರ ಮಾಡಿಸಿದ್ದಾನೆ. ಈ ದೇವಾಲಯದಲ್ಲಿ ಕ್ರಿ.ಶ. ೧೮೦೬ರಿಂದ ೧೯೫೩ರವರೆಗೆ ಒಟ್ಟು ೪೯ ಕ್ರಿಶ್ಚಿಯನ್ ಪಾದ್ರಿಗಳು ಕಾರ್ಯನಿರ್ವಹಿಸಿದ್ದಾರೆ. ಇಲ್ಲಿ ಆರಂಭದಿಂದಲೂ ಇಂಗ್ಲೀಷ್ ಭಾಷೆಯಲ್ಲಿ ಪ್ರಾರ್ಥನೆಯನ್ನು ಮಾಡುತ್ತಾ ಬಂದಿದ್ದಾರೆ. ಪ್ರಸ್ತುತವು ಮುಂದುವರಿದಿದೆ.

ಹೋಲಿ ಟ್ರಿನಿಟಿ ಚರ್ಚ್ ನಾಲ್ಕು ಅಡಿ ಎತ್ತರದ ಅಧಿಷ್ಠಾನದ ಮೇಲೆ ಪಶ್ಚಿಮಾಭಿಮುಖವಾಗಿ ನಿರ್ಮಿಸಲ್ಪಟ್ಟಿದೆ. ದೇವಾಲಯವು ಪೂರ್ವದಿಂದ ಪಶ್ಚಿಮಕ್ಕೆ ೩೩ ಅಡಿ ಉದ್ದ, ದಕ್ಷಿಣದಿಂದ ಉತ್ತರಕ್ಕೆ ೨೦ ಅಡಿ ಅಗಲವನ್ನು ಹೊಂದಿದೆ. ಇದು ಮುಖಮಂಟಪ, ಮಧ್ಯಾಂಗಣ, ಬಲಿಪೀಠವನ್ನು ಒಳಗೊಂಡಿದೆ. ಬಲಿಪೀಠದ ವೇದಿಕೆಯು ಅರ್ಧವೃತ್ತದಲ್ಲಿದ್ದು, ಎರಡು ಅಡಿ ಎತ್ತರದಲ್ಲಿದೆ. ಮಧ್ಯಾಂಗಣವು ವಿಶಾಲವಾಗಿದ್ದು, ವಿಶಾಲವಾಗಿ ಕ್ರೈಸ್ತ ಭಕ್ತರು ಕುಳಿತುಕೊಂಡು

ಪ್ರಾರ್ಥನೆ ಮಾಡುವುದಕ್ಕೆ ಬೆಳಕು ಮತ್ತು ಗಾಳಿಯು ಒಳಸುಳಿಯಲು ಪಶ್ಚಿಮದಲ್ಲಿ ದ್ವಾರಬಾಗಿಲು, ದಕ್ಷಿಣ ಉತ್ತರದಲ್ಲಿ ಬಾಗಿಲುಗಳು ಹಾಗೂ ಕಿಟಕಿಗಳನ್ನು ಅಳವಡಿಸಲಾಗಿದೆ. ಇವು ಗಾತಿಕ್ ಶೈಲಿಯಿಂದ ಕೂಡಿವೆ. ಮಧ್ಯಾಂಗಣದಲ್ಲಿ ೧೦ ಡೋರಿಕ್ ಶೈಲಿಯ ಕಂಬಗಳಿವೆ. ಇವು ದಪ್ಪ ಹಾಗೂ ಸರಳವಾಗಿ ಇದ್ದು, ದೇವಾಲಯದ ಅಸ್ತಿಭಾರ ಅವುಗಳ ಮೇಲೆ ನಿಂತಿದೆ ಎನ್ನುವ ಹಾಗೆ ಕಾಣುತ್ತದೆ. ಈ ಕಂಬಗಳು ವೃತ್ತಾಕಾರದಲ್ಲಿದ್ದು, ಮೂರು ಭಾಗಗಳನ್ನು ಒಳಗೊಂಡಿವೆ. ಪ್ರತಿಯೊಂದು ಕಂಬವು ಚೌಕಾಕಾರದ ಪೀಠ, ವೃತ್ತವಿರುವ ಮಧ್ಯಾಂಗಣ ಹಾಗೂ ಕಂಬದ ಮೇಲ್ಭಾಗ ಬೋಧಿಗೆಯಿಂದ ಕೂಡಿವೆ. ದೇವಾಲಯದ ಮೇಲ್ಛಾವಣಿಯು ತ್ರಿಕೋನಾಕಾರದಲ್ಲಿದ್ದು, ಅದಕ್ಕೆ ಹೆಂಚ್‌ನ್ನು ಹೊದ್ದಿಸಲಾಗಿದೆ.

ದೇವಾಲಯದ ಮುಖಮಂಟಪವು ವಿಶಾಲವಾಗಿದ್ದು, ನಾಲ್ಕು ಕಂಬಗಳಿಂದ ಕೂಡಿದೆ. ಇಲ್ಲಿ ಆರಂಭದಲ್ಲಿ ನಾಲ್ಕು ಡೋರಿಕ್ ಶೈಲಿಯ ಕಂಬಗಳು ಇದ್ದವು. ಆದರೆ ಪ್ರಸ್ತುತವು ಅವು ಕಾಣುವುದಿಲ್ಲ. ಕಾರಣ ಬಹುಶಃ ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಬಿದ್ದಿರಬಹುದು. ದೇವಾಲಯದ ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಗಾರೆ, ಮರದ ತೀರು, ಸುಣ್ಣ, ಮಂಗಳೂರು ಹೆಂಚ್, ಗಾಜಿನ ಕಿಟಕಿಗಳು ಇತ್ಯಾದಿ ಸಲಕರಣೆಗಳನ್ನು ಬಳಸಿ ನಿರ್ಮಿಸಿದ್ದಾರೆ. ಪ್ರಸ್ತುತ ಈ ದೇವಾಲಯದಲ್ಲಿ ೧೦೦ ಕುಟುಂಬಗಳ ಸದಸ್ಯರನ್ನು ಒಳಗೊಂಡಿದ್ದು, ೨೦೧೧ರಲ್ಲಿ ದ್ವಿಶತಮಾನೋತ್ಸವನ್ನು ಆಚರಿಸಿಕೊಂಡಿದೆ.

**ಕ್ರೈಸ್ಟ್ ದ ಕಿಂಗ್ ಚರ್ಚ್ - ಬಳ್ಳಾರಿ**

ಸುಧಾ ಸರ್ಕಲ್ ಬಳಿ ಇರುವ ಕ್ರೈಸ್ತದ ಕಿಂಗ್ ಚರ್ಚ್ ೧೮೧೬ರಲ್ಲಿ ನಿರ್ಮಾಣಗೊಂಡಿದೆ. ನಗರದಲ್ಲಿ ಬ್ರಿಟಿಷರು ೧೮೦೧ರಲ್ಲಿ ಮಿಲಿಟರಿ ಕೇಂದ್ರವನ್ನು ಸ್ಥಾಪಿಸಿದ ಬಳಿಕ ಕ್ಯಾಥೋಲಿಕ್ ಸಮುದಾಯದ ಸೈನಿಕರಿಗಾಗಿ ಚರ್ಚ್‌ನ್ನು ಕಲ್ಲು, ಮಣ್ಣು, ಸುಣ್ಣ, ಮರದ ತೀರು, ಕಬ್ಬಿಣ, ಮಂಗಳೂರು ಹೆಂಚು ಇತ್ಯಾದಿ ಸಲಕರಣೆಗಳನ್ನು ಬಳಸಿ, ನಿರ್ಮಾಣ ಮಾಡಲಾಗಿದೆ. ಇದು ದಕ್ಷಿಣ ಭಾರತದ ಪ್ರಖ್ಯಾತ ಚರ್ಚ್‌ಗಳಲ್ಲಿ ಕ್ರೈಸ್ತ ದಿ ಕಿಂಗ್ ಕೂಡ ಒಂದಾಗಿದೆ. ಜನಸಂಖ್ಯೆ ಹೆಚ್ಚಾದ ನಂತರ ೧೮೨೭ರಲ್ಲಿ ಪುನರ್‌ನಿರ್ಮಾಣ ಮಾಡಲಾಗಿದೆ. ಅಲ್ಲಿನ ದಾಖಲೆಗಳ ಪ್ರಕಾರ ಸಂತ ಜೋಸೆಫರ ಮಿಷನರಿಗೆ ಸೇರಿದ ರೆ.ಫಾ. ದಿನಾನ್ ಅವರನ್ನು ಚರ್ಚ್‌ಗೆ ಪ್ರತಿನಿಧಿಯಾಗಿ ನಿಯೋಜಿಸಲಾಗಿತ್ತು. ಇವರ ನಂತರ ಫಾ. ಪಾಟ್ರಿಕ್ ಡಾಯ್ಲೆ ಅವರನ್ನು ಪ್ರತಿನಿಧಿಯಾಗಿ ನಿಯೋಜಿಸಲಾಗಿತ್ತು. ೧೮೩೭ರಲ್ಲಿ ಬಂದ ಫಾ. ಪಾಟ್ರಿಕ್ ಡಾಯ್ಲೆ ಅವರು ಚರ್ಚ್‌ಗೆ ಒಂದು ಘಂಟೆಯನ್ನು ಹಟ್ಟಿಯಿಂದ ತಂದು ಪ್ರತಿಷ್ಠಾಪಿಸಿದರು. ಘಂಟೆಯ ಮೇಲೆ ಅವರ ಹೆಸರಿದೆ. ಅದು ಇಂದಿಗೂ ತುಕ್ಕು ಹಿಡಿಯದ ಹಾಗೆ ಇದೆ. ಆದರೆ, ಜೂನ್-೨೦೧೭ರ ತಿಂಗಳಲ್ಲಿ ನಡೆದ ದೇವಾಲಯದ ನವೀಕರಣದ ಸಂದರ್ಭದಲ್ಲಿ ಕೆಲವು ವಸ್ತುಗಳು ಹಾಳಾಗಬಹುದು ಎಂದು ಚರ್ಚಿನ ಫಾದರ್ ವೈ.ಎಸ್. ಪೀಟರ್ ಅವರಿಂದ ಮಾಹಿತಿಯನ್ನು ಪಡೆಯಲಾಗಿದೆ.

## ಆಲ್ ಸೋಲ್ ತಮಿಳು ಚರ್ಚ್ - ಬಳ್ಳಾರಿ

ಮದರಾಸಿನ ತಮಿಳು ಧಾರ್ಮಿಕ ಸಭೆಯ ಬಿಷಿಪ್‌ರಾಗಿದ್ದ ರೆವ್. ಡಾ. ಪೊವೆಲ್ ಹಾಗೂ ಬಳ್ಳಾರಿ ಜಿಲ್ಲೆಗೆ ಮೊದಲ ತಮಿಳು ಭಾಷೆಯ ಕ್ರೈಸ್ತ ಪಾದ್ರಿಯಾಗಿ ಬಂದಿದ್ದ ರೆವ್. ಅಂತೋನಿ ಸೆಬಾಸ್ಟಿಯನ್ ಅವರು ತಮಿಳುನಾಡಿನಿಂದ ಬಳ್ಳಾರಿಗೆ ಜಿಲ್ಲೆಗೆ ಆಗಮಿಸಿದ್ದ ಕ್ರಿಶ್ಚಿಯನ್ ಆಡಳಿತ ಅಧಿಕಾರಿಗಳಿಗೆ, ಸೈನಿಕರಿಗೆ, ಕ್ರಿಶ್ಚಿಯನ್ನ ಸದಸ್ಯರಿಗಾಗಿ ಬಳ್ಳಾರಿ ಕೋಟೆ ಪ್ರದೇಶದಲ್ಲಿ ಆಲ್ ಸೋಲ್ ತಮಿಳು ಚರ್ಚ್‌ನ್ನು ಕ್ರಿ.ಶ. ೧೮೪೧ರಲ್ಲಿ ಸ್ಥಾಪಿಸಲು ಮುಂದಾರು. ಆದರೆ, ಇವರಿಗೆ ೧೯೦೧ರವರೆಗೆ ಯಾವುದೇ ಕಟ್ಟಡವಿಲ್ಲದ ಸಂದರ್ಭದಲ್ಲಿ ಧಾರ್ಮಿಕ ಸಭೆಯನ್ನು ಮುನ್ನಡಿಸಿದರು. ಮದರಾಸಿನ ತಮಿಳು ಧಾರ್ಮಿಕ ಸಭೆಯ ವತಿಯಿಂದ ೧೯೦೧ರಲ್ಲಿ, ೦.೩೧ರಲ್ಲಿ ಬಳ್ಳಾರಿ ಕೋಟೆ ಪ್ರದೇಶದಲ್ಲಿ ಸರ್ವೇ ನಂ. ೫೨೨ರಲ್ಲಿ, ೦.೩೧ ವಿಸ್ತೀರ್ಣ ಹೊಂದಿದ್ದ ಭೂಮಿಯನ್ನು ೨೦೦೦.೦೦ ರೂಪಾಯಿಗೆ ಖರೀದಿಸಿ, ೧೯೦೬ರಲ್ಲಿ ದೇವಾಲಯದ ಕಟ್ಟಡವನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಬಹಳ ಸರಳವಾಗಿ ೧೯೦೬ರಲ್ಲಿ ನಿರ್ಮಿಸಲ್ಪಟ್ಟಿದೆ. ಇದು ಬಲಿಪೀಠ, ಮಧ್ಯಾಂಗಣ, ಮುಖಮಂಟಪವನ್ನು ಒಳಗೊಂಡಿದೆ. ಬಲಿಪೀಠವು ಎರಡು ಅಡಿ ಎತ್ತರದಲ್ಲಿ ಅರ್ಧವೃತ್ತಾಕಾರದಲ್ಲಿದೆ. ಇಲ್ಲಿ ಯೇಸುವಿನ ಶಿಲುಬೆ ಇದೆ. ಇದರ ಎಡಭಾಗದಲ್ಲಿ ಫಾದರ್ ಕ್ರಿಸ್ತನ ಸಂದೇಶವನ್ನು ಹೇಳಿಕೊಡಲು ಒಂದು ಡಯಾಸ್‌ನ್ನು ಅಳವಡಿಸಲಾಗಿದೆ. ಇದರ ಮುಂಭಾಗವು ಮಧ್ಯಾಂಗಣ, ಇಲ್ಲಿ ಕ್ರೈಸ್ತ ಭಕ್ತರು ಕುಳಿತುಕೊಂಡು ಕ್ರಿಸ್ತನ ಸಂದೇಶವನ್ನು ಪ್ರಾರ್ಥಿಸಲು ಮರದಿಂದ ತಯಾರಿಸಿದ ಡೆಸ್ಕ್‌ಗಳನ್ನು ಅಳವಡಿಸಲಾಗಿದೆ. ದೇವಾಲಯದ ಒಳಕ್ಕೆ ಸಾಕಷ್ಟು ಗಾಳಿ-ಬೆಳಕು ಒಳಸುಳಿಯಲು ಪೂರ್ವದಲ್ಲಿ ಪ್ರಧಾನ ದ್ವಾರಬಾಗಿಲು ಇದ್ದು, ದಕ್ಷಿಣ-ಉತ್ತರ ದಿಕ್ಕಿನಲ್ಲಿ ತ್ರಿಕೋನಾಕಾರದ ಕಿಟಕಿ ಹಾಗೂ ಬಾಗಿಲುಗಳನ್ನು ಅಳವಡಿಸಲಾಗಿದೆ. ದೇವಾಲಯಕ್ಕೆ ಗಾಜಿನ ಬಣ್ಣದ ಕಿಟಕಿಗಳನ್ನು ಅಳವಡಿಸಲಾಗಿದೆ. ಏಕೆಂದರೆ, ಈ ಬಣ್ಣದ ಗಾಜಿನಿಂದ ಸೂರ್ಯನ ಬೆಳಕು ಒಳಸುಳಿಯುವ ದೃಷ್ಟಿಯಿಂದ ಬಳಸಲಾಗುತ್ತಿದೆ. ಮುಖಮಂಟಪವು ಕಲ್ಲಿನಿಂದ ಕಟ್ಟಿದ ಕಂಬಗಳಿಂದ ಕೂಡಿದೆ. ದೇವಾಲಯದ ಮೇಲ್ಛಾವಣಿಯು ತ್ರಿಕೋನಾಕಾರದಲ್ಲಿದ್ದು, ಹೆಂಚ್‌ನ್ನು ಆರಂಭದಲ್ಲಿ ಹೊದ್ದಿಸಲಾಗಿತ್ತು. ಪ್ರಸ್ತುತ ಅದನ್ನು ತೆಗೆದು ಶೀಟ್‌ನ್ನು ಹಾಕಲಾಗಿದೆ. ೧೯೩೯-೪೫ರ ಕಾಲಾವಧಿಯಲ್ಲಿ ಕ್ರೈಸ್ತ ಪಾದ್ರಿಯಾಗಿದ್ದ ರೆವ್.ಎ.ಎಸ್. ಲೋಕಪತಿ ಅವರು ೨,೫೦೦.೦೦ ರೂಪಾಯಿಗಳಿಂದ ದೇವಾಲಯದ ಸುತ್ತಲೂ ಕಾಂಪೌಂಡ್‌ನ್ನು ಕಟ್ಟಿಸಿದ್ದಾರೆ.

ಈ ದೇವಾಲಯವು ಆರಂಭದಲ್ಲಿ ೩೧೦ ತಮಿಳು ಕ್ರೈಸ್ತ ಸದಸ್ಯರನ್ನು ಒಳಗೊಂಡಿತ್ತು. ಅವರಲ್ಲಿ ೯೦ ಪುರುಷರು, ೧೦೪ ಮಹಿಳೆಯರು, ೧೧೬ ಮಕ್ಕಳಿದ್ದರು. ಇವರಿಗೆ ಆರಂಭದಿಂದಲೂ ತಮಿಳು ಭಾಷೆಯಲ್ಲಿ ಕ್ರಿಸ್ತನ ಪ್ರಾರ್ಥನೆಗಳು ನಡೆಯುತ್ತಿದ್ದವು. ಪ್ರಸ್ತುತವು ಆರಂಭದಿಂದಲೂ ತಮಿಳು ಭಾಷೆಯನ್ನು ಉಳಿಸಿ, ಬೆಳೆಸಿಕೊಂಡು ಬಂದಿದೆ. ಈ ದೇವಾಲಯದಲ್ಲಿ ೧೮೪೧ರಿಂದ ೧೯೫೭ರವರೆಗೆ ಒಟ್ಟು ಒಂಬತ್ತು ತಮಿಳು ಭಾಷೆಯ ಕ್ರೈಸ್ತ ಪಾದ್ರಿಗಳು ಕಾರ್ಯನಿರ್ವಹಿಸಿದ್ದಾರೆ.

ಅವರುಗಳೆಂದರೆ, ರೆವ್. ಅಂತೋನಿ ಸೆಬಾಸ್ಟ್ರಿಯನ್(೧೮೪೧-೧೯೦೬), ರೆವ್.ಎಸ್. ಆಶೀರ್ವಾದಮ್(೧೯೦೬-೧೯೧೨), ರೆವ್.ಜಿ.ಡಿ. ವಿಶ್ವಾಸಮ್(೧೯೧೨-೧೯೧೬), ರೆವ್.ಜೆ. ಕ್ರಿಶ್ಚಿಯನ್(೧೯೧೬-೧೯೨೨), ರೆವ್.ಎಸ್. ವೇದಮ್‌ತುತ್(೧೯೨೨-೧೯೨೫), ರೆವ್.ಜೆ.ಜಿ. ಕಲ್ಯಾಣ ರಾಮನ್ನ(೧೯೨೫-೧೯೩೪), ರೆವ್.ಎಸ್.ಎಸ್. ಕೃಷ್ಣ(೧೯೩೪-೧೯೩೭), ರೆವ್.ಎ.ಎಸ್. ಲೋಕಪತಿ(೧೯೩೭-೧೯೪೫), ರೆವ್.ಐ.ಎಸ್. ಮಿಲ್ಸ್(೧೯೪೫-೧೯೫೨)ರವರೆಗೆ ಪ್ರಸ್ತುತ ಪಾದ್ರಿ ರೆವ್. ಶಾಂತಕುಮಾರ್. ಅದೇ ರೀತಿ ೧೦೦ ಕುಟುಂಬಗಳ ಸದಸ್ಯರು ಮಾತ್ರ ಈ ದೇವಾಲಯಕ್ಕೆ ಭಾಗವಹಿಸುತ್ತಿದ್ದಾರೆ.

**ಕ್ರಿಸ್ತರಾಜ ಸಭೆ : ಹೊಸಪೇಟೆ**

ಹತ್ತೊಂಬತ್ತನೆಯ ಶತಮಾನದ ಭಾರತೀಯ ಇತಿಹಾಸದಲ್ಲಿ ಬಹುಪಾಲು ಜನರು ಎಷ್ಟರಮಟ್ಟಿಗೆ ದಿವಾಳಿತನ ಹಾಗೂ ದಾರಿದ್ರ್ಯದಿಂದ ನರಳುತ್ತಿದ್ದರು ಎಂಬುದನ್ನು ಊಹಿಸಿಕೊಳ್ಳಲು ಕಷ್ಟಸಾಧ್ಯ. ಏಕೆಂದರೆ, ವಸಾಹತುಶಾಹಿ ಅಧಿಕಾರಿಗಳ ಅಲಕ್ಷ್ಯ, ಅನುಕಂಪವಿಲ್ಲದೆ ಇರುವುದು, ತೆರಿಗೆಯ ಅಧಿಕ ಹೊರೆ, ಸಮಾನತೆಯಿಲ್ಲದ ಭೂಕಂದಾಯ ನೀತಿ ಮತ್ತು ಸಾರ್ವತ್ರಿಕ ಬಡತನ ಆವರಿಸಿತ್ತು. ಇದು ಒಂದು ಭಾಗವಾಗಿದ್ದದ್ದರೆ, ಇನ್ನೊಂದು ಪ್ರಮುಖ ಅಂಶವೆಂದರೆ ಕ್ಷಾಮ ಮತ್ತು ಬರಗಾಲ. ಕ್ರಿ.ಶ. ೧೮೩೭ ಹಾಗೂ ೧೮೬೧ರಲ್ಲಿ ಮುಂಗಾರು ಮಳೆಯ ವೈಫಲ್ಯದಿಂದ ಇಡೀ ದಕ್ಷಿಣ ಭಾರತದಲ್ಲಿ ತೊಂದರೆಗೊಳಗಾದ ಜನರಿಗೆ ಪರಿಹಾರ ಒದಗಿಸಲು ಅಗತ್ಯವಿದ್ದಷ್ಟು ಕ್ರಮಗಳನ್ನು ಸರಕಾರ ಕೈಗೊಳ್ಳಲಿಲ್ಲ. ಇದರಿಂದ ಅಧಿಕಸಂಖ್ಯೆಯ ಜನರು ಮರಣ ಹೊಂದಿದರು.[೭೮] "ಕ್ರಿ.ಶ. ೧೮೬೬-೬೭ರಲ್ಲಿ ತಲೆದೋರಿದ ಕ್ಷಾಮವನ್ನು 'ಒರಿಸ್ಸಾ ಕ್ಷಾಮ' ಎಂದೇ ಹೆಸರಾಯಿತು. ಇದಕ್ಕೆ ಕಾರಣ ಈ ಕ್ಷಾಮದಿಂದ ಒರಿಸ್ಸಾದಲ್ಲಿ ಅತ್ಯಂತ ಭಯಂಕರ ಪರಿಣಾಮಗಳು ಉಂಟಾಗಿದ್ದರಿಂದ ಇದರ ಪ್ರಭಾವ ಕಲ್ಕತದಿಂದ ಮದರಾಸ್‌ವರೆಗಿನ ಪೂರ್ವ ಕರಾವಳಿ ಉದ್ದಕ್ಕೂ ಹರಡಿಕೊಂಡಿತ್ತು. ಹಾಗಾಗಿ ಒರಿಸ್ಸಾ ಕ್ಷಮವನ್ನು "ಭಾರತದ ಕ್ಷಾಮಗಳ ಇತಿಹಾಸದಲ್ಲಿ ಒಂದು ಪರಿವರ್ತನಾ ಘಟ್ಟ"[೭೯] ಎಂದು ಪರಿಗಣಿಸಲಾಗಿದೆ. ಏಕೆಂದರೆ ಈ ಕ್ಷಾಮದಿಂದ ವಿಚಾರಣಾ ಆಯೋಗವೊಂದನ್ನು ನೇಮಿಸಲಾಗಿತ್ತು. ಬ್ರಿಟಿಷ್ ಇಂಡಿಯಾದಲ್ಲಿ ೧೯ನೆಯ ಶತಮಾನದ ಕೊನೆಯವರೆಗೆ ೨೦ಕ್ಕೂ ಹೆಚ್ಚು ಬಾರಿ ಕ್ಷಾಮ ಮತ್ತು ಬರಗಾಲಗಳು ಉಂಟಾದವು. ಈ ಮಾರಕ ಕ್ಷಾಮಗಳ ಪರಿಣಾಮವಾಗಿ ಕಾಲರಾ, ಸಿಡುಬು ಮತ್ತು ವಿಷಮ ಜ್ವರದಂತಹ ಸಾಂಕ್ರಾಮಿಕ ರೋಗಗಳ ಹಾವಳಿಯಿಂದ ಬ್ರಿಟಿಷ್ ಅಧಿಕಾರಿಗಳಲ್ಲದೆ, ಸಾವಿರಾರು ಸ್ಥಳೀಯ ಜನರನ್ನು ಹಾಗೂ ಕೆಲವು ಜಾನುವಾರುಗಳನ್ನು ಬಲಿ ತೆಗೆದುಕೊಂಡಿತು.

ಮದರಾಸ್ ಪ್ರಾಂತ್ಯದ ವ್ಯಾಪ್ತಿಯುದ್ದ ಬಳ್ಳಾರಿ ಜಿಲ್ಲೆಯಲ್ಲಿ ಉದ್ಭವಿಸಿದ "೧೮೭೬-೭೮ರ ಕ್ಷಾಮವು ಬಳ್ಳಾರಿ ಜಿಲ್ಲೆಯ ಎಲ್ಲಾ ಕ್ಷೇತ್ರಗಳಲ್ಲಿ ಸಾಕಷ್ಟು ಕಷ್ಟ-ನಷ್ಟ ಉಂಟಾಗಿ ನೂರಕ್ಕೆ ಐದು ಜನ ಸುಖದಿಂದ ಇದ್ದರೆ, ತೊಂಬತ್ತೈದು ಜನ ರೋಗ ಹಾಗೂ ಬಡತನದಿಂದ ನರಳುವಂತಹ ಸ್ಥಿತಿ ನಿರ್ಮಾಣವಾಗಿತ್ತು".[೮೦] ಇಂತಹ ಸಂದಿಗ್ಧ ಪರಿಸ್ಥಿತಿಯನ್ನರಿತ "ವಸಾಹತುಶಾಹಿ ಸರಕಾರವು

ಕ್ಷಾಮ ಮತ್ತು ಮರಣ ಪ್ರಮಾಣವನ್ನು ಕಡಿಮೆ ಮಾಡುವಲ್ಲಿ ಯಶಸ್ವಿಯಾಗಲಿಲ್ಲ ಎಂದು ಕ್ಯಾಂಪ್‌ಬೆಲ್ ಹೇಳಿದನು.

ಪ್ರಾಂತೀಯ ಸರಕಾರಗಳು ಕ್ಷಾಮವನ್ನು ಪರಿಣಾಮಕಾರಿಯಾಗಿ ಎದುರಿಸುವಲ್ಲಿ ವಿಫಲತೆ ಹೊಂದಿದ ಕಾರಣ ಗವರ್ನರ್ ಜನರಲ್ ಆಗಿದ್ದ ಲಿಟ್ಟನ್‌ನು ಮದರಾಸ್ ಪ್ರಾಂತದಲ್ಲಿ ೧೮೭೮ ಫೆಬ್ರವರಿ ೧೩ರ ಬರಗಾಲ ಜನಗಣತಿಯನ್ನು ತೆಗೆದುಕೊಂಡು ಒಂದು ಆಯೋಗವನ್ನು ನೇಮಿಸಿದನು. "ಸರ್. ರಿಚರ್ಡ್ ಸ್ಟ್ರ್ಯಾಚಿ ಈ ಆಯೋಗದ ಅಧ್ಯಕ್ಷನಾಗಿದ್ದನು".[೮೧] ಇವರ ಮಾರ್ಗದರ್ಶನದಲ್ಲಿ ಮದರಾಸ್ ಸರಕಾರವು "೧೮೭೮ ಮಾರ್ಚ್ ೧೩ ರಂದು 'ಬರಗಾಲ ಸಮಿತಿ"(ಫ್ಯಾಮಿನ್ ಕಮಿಷನ್ ಅಪಾಯಿಂಟ್‌ಮೆಂಟ್)ಯನ್ನು ನೇಮಕ ಮಾಡಿ ಬಳ್ಳಾರಿ ಪ್ರದೇಶಕ್ಕೆ ಕಳುಹಿಸಿಕೊಟ್ಟಿತು. ಈ ಸಮಿತಿಯ ಉದ್ದೇಶ ಮದರಾಸ್ ಪ್ರಾಂತದಲ್ಲಿಯೇ ದೊಡ್ಡ ಜಿಲ್ಲೆಯಾಗಿದ್ದ ಬಳ್ಳಾರಿ ಪರಿಸರವನ್ನು ಕ್ಷೇತ್ರಕಾರ್ಯ ಮಾಡಿ, ಕ್ಷಾಮಕ್ಕೆ ಕಾರಣಗಳೇನು? ಈ ಕೇಡನ್ನು ಎದುರಿಸುವಲ್ಲಿ ಜಿಲ್ಲಾಡಳಿತವು ಸಕಾಲಿಕ ಕ್ರಮಗಳನ್ನೇನಾದರೂ ತೆಗೆದುಕೊಳ್ಳಲಾಗಿತ್ತೆ? ಇಲ್ಲವೇ? ಮುಂದೆ ಇಂತಹ ವಿಪತ್ತುಗಳು ಸಂಭವಿಸಿದಾಗ ಜನರ ಸಂಕಷ್ಟಗಳನ್ನು ಹೇಗೆ ಪರಿಹರಿಸಬೇಕು ಎಂಬುದಾಗಿತ್ತು.

ಕ್ರಿ.ಶ. ೧೮೭೮ ಮಾರ್ಚ್ ೧೩ರಂದು ಬಳ್ಳಾರಿ ಜಿಲ್ಲೆಗೆ ಆಗಮಿಸಿದ ಫ್ಯಾಮಿನ್ ಕಮಿಷನ್‌ನ ಸದಸ್ಯರಲ್ಲೊಬ್ಬರಾದ ಡಬ್ಲ್ಯೂ.ಆರ್. ಕೂಂಬೇಸ್ ಅವರು ಬರಗಾಲ ಪೀಡಿತ ಬಳ್ಳಾರಿ ಪ್ರದೇಶದಲ್ಲಿ ಕರ್ತವ್ಯ ನಿರತರಾಗಿದ್ದಾಗ ಹೊಸಪೇಟೆಯಲ್ಲಿ ಪಕ್ಕೆ ಭಾವು ರೋಗಕ್ಕೆ ಪೀಡಿತರಾಗಿ ಮದರಾಸ್‌ನಲ್ಲಿ ೨೩ ಮೇ ೧೮೭೮ರಲ್ಲಿ ಮರಣ ಹೊಂದಿದರು. ಇವರ ಜೊತೆಗೂಡಿ ಬರಗಾಲ ಸಮಯದಲ್ಲಿ ಕಾರ್ಯನಿರ್ವಹಿಸಿದ ಅಧಿಕಾರಿಗಳು ಹೊಸಪೇಟೆಯಲ್ಲಿ "ಡಬ್ಲ್ಯು.ಆರ್. ಕೂಂಬೇಸ್ ಅವರ ಸ್ಮರಣಾರ್ಥವಾಗಿ ಒಂದು ಕ್ರಿಸ್ತರಾಜ ಸಭೆಯನ್ನು ೧೮೭೯ರಲ್ಲಿ ಸ್ಥಾಪಿಸಿದರು".

ಹೊಸಪೇಟೆ ಪಟ್ಟಣದ ಗಾಂಧೀ ಸರ್ಕಲ್‌ನ ನೈರುತ್ಯ ದಿಕ್ಕಿನಲ್ಲಿ ದಕ್ಷಿಣಾಭಿಮುಖವಾಗಿರುವ 'ಕ್ರಿಸ್ತರಾಜ ಸಭೆ' ಎಂಬ ಪ್ರಾಟೆಸ್ಟೆಂಟ್ ಚರ್ಚನ್ನು ೧೮೭೯ರಲ್ಲಿ ಸ್ಥಾಪಿಸಲಾಗಿದೆ. ಇದು ಆರಂಭದಲ್ಲಿ ಲಂಡನ್ ಮಿಷನ್ ಸಂಸ್ಥೆಯ ಅಧೀನದಲ್ಲಿತ್ತು. ನಂತರ ಕ್ರಿ.ಶ. ೧೯೪೭ರಲ್ಲಿ ಅಸ್ತಿತ್ವಕ್ಕೆ ಬಂದ ದಕ್ಷಿಣ ಭಾರತ ಸಭೆ(ಸಿ.ಎಸ್.ಐ.)ಯಲ್ಲಿ ಐಕ್ಯಗೊಂಡಿತು. ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಗಾತಿಕ್ ಶೈಲಿಯಲ್ಲಿ ನಿರ್ಮಿಸಲಾಗಿದೆ. ದೇವಾಲಯದ ತಳವಿನ್ಯಾಸವು ಶಿಲುಬೆಯಾಕಾರದಲ್ಲಿದ್ದು, ಕಟ್ಟಡವು ೨೫ ಅಡಿ ಅಗಲು, ೬೪ ಅಡಿ ಉದ್ದ, ೨೨ ಅಡಿ ಎತ್ತರ ಹೊಂದಿದೆ. ದೇವಾಲಯವು ಅರ್ಧವೃತ್ತಾಕಾರದ ಹಿಂಚಾಚು ಬಲಿಪೀಠ ಮತ್ತು ಮಧ್ಯಾಂಗಣವನ್ನು ಒಳಗೊಂಡಿದೆ. ಬಲಿಪೀಠದ ಮೇಲ್ಛಾವಣಿಯು ದೀರ್ಘವೃತ್ತಾಕಾರದ ಗುಮ್ಮಟವು ಆಕಾಶಕ್ಕೆ ಮುಗಿಲು ಮುಟ್ಟುವ ಹಾಗೆ ಇದೆ. ದೇವಾಲಯದ ಬಾಗಿಲು ಮತ್ತು ಕಿಟಕಿಗಳ ವಿನ್ಯಾಸವು ಕಮಾನು ಶೈಲಿಯಲ್ಲಿದ್ದು, ಅವುಗಳಿಗೆ ಬಣ್ಣದ ಗಾಜಿನ ಕಲೆಯನ್ನು ಅಳವಡಿಸಲಾಗಿದೆ. ದೇವಾಲಯದ ಕಟ್ಟಡಕ್ಕೆ ಗಾರೆ,

ಕಲ್ಲು, ಇಟ್ಟಿಗೆ, ಕಬ್ಬಿಣ, ಸಿಮೆಂಟ್, ಮಂಗಳೂರು ಹೆಂಚು ಮತ್ತು ಮರದ ತೀರುಗಳನ್ನು ಬಳಸಿ ಕಟ್ಟಲಾಗಿದೆ. ಕ್ರಿ.ಶ. ೧೯೫೩ರಲ್ಲಿ ಬಳ್ಳಾರಿಯು ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡ ನಂತರ ಇದು ೧೯೬೫ರಲ್ಲಿ ಮೈಸೂರಿನ ಕ್ರೈಸ್ತ ಬಿಷಪ್‌ರಾದ ರೆವರೆಂಡ್ ಡಬ್ಲ್ಯೂ.ವಿ. ಕಾರ್ಲ(ಕೆ.ಸ್.ಡಿ.) ಅವರಿಂದ ದೇವಾಲಯವು ಜೀರ್ಣೋದ್ಧಾರಗೊಂಡಿರುವುದು ಈ ದೇವಾಲಯದ ಪ್ರವೇಶ ದ್ವಾರದ ಎಡಭಾಗದ ಗೋಡೆಯಲ್ಲಿ ಅಳವಡಿಸಿರುವ ಶಿಲಾಫಲಕದಿಂದ ಸ್ಪಷ್ಟವಾಗುತ್ತದೆ.

**ಸಿ.ಎಸ್.ಐ. ತೆಲುಗು ಚರ್ಚ್ : ಬಳ್ಳಾರಿ**

ಬಳ್ಳಾರಿ ನಗರದ ಕೋಟೆಯ ಒಳಪ್ರದೇಶದಲ್ಲಿ ಕ್ರಿ.ಶ. ೧೮೮೪ರಲ್ಲಿ ತೆಲುಗು ಚರ್ಚ್ ಸ್ಥಾಪನೆಯಾಗಿದೆ ಎಂದು ಪ್ರಸ್ತುತ ದೇವಾಲಯದ ಫಾದರ್ ಆಗಿರುವ ಗೋನಾ ಇಮ್ಯಾನುಯಲ್ ಅವರ ಅಭಿಪ್ರಾಯವಾಗಿದೆ. ಈ ದೇವಾಲಯದಲ್ಲಿ ಕ್ರೈಸ್ತ ಭಕ್ತರಿಗೆ ಬೋಧನೆ ಹಾಗೂ ದೇವರ ಆರಾಧನೆಯನ್ನು ತೆಲುಗು ಭಾಷೆಯಲ್ಲಿ ನೀಡಲಾಗುತ್ತಿತ್ತು. ಏಕೆಂದರೆ, ಬಳ್ಳಾರಿ ಪರಿಸರವು ಪ್ರಾಚೀನ ಕಾಲದಿಂದಲೂ ದ್ವಿಭಾಷಿಕ ನೆಲೆಯಾಗಿದ್ದರಿಂದ ಇಲ್ಲಿ ತೆಲುಗು ಭಾಷೆಗೆ ಹೆಚ್ಚು ಪ್ರಾಧಾನ್ಯತೆ ನೀಡಿದೆ. ಹಾಗಾಗಿ ಬಳ್ಳಾರಿ ಜಿಲ್ಲೆಗೆ ಆಗಮಿಸಿದ ಕ್ರೈಸ್ತ ಮಿಷನರಿಗಳು ಮೊದಲು ಮಾಡಿದ ಕೆಲಸವೆಂದರೆ, ಜರ್ಮನ್ನ ಭಾಷೆಯಲ್ಲಿದ್ದ ಬೈಬಲ್‌ನ್ನು ಸ್ಥಳೀಯ ಭಾಷೆಗೆ ತರ್ಜುಮೆ ಮಾಡಿರುವುದು. ಆ ಮೂಲಕ ಸ್ಥಳೀಯರನ್ನು ಆಕರ್ಷಿಸಿ, ಮತಾಂತರಿಸುವುದಾಗಿತ್ತು. ಪ್ರಸ್ತುತವು ದೇವಾಲಯದಲ್ಲಿ ತೆಲುಗು ಭಾಷೆಯಲ್ಲಿಯೇ ಕ್ರಿಸ್ತನ ಆರಾಧನೆ ನಡೆಯುತ್ತಿದೆ.

ಈ ದೇವಾಲಯವು ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಉತ್ತರಾಭಿಮುಖವಾಗಿ ನಿರ್ಮಿಸಲ್ಪಟ್ಟಿದೆ. ಇದು ಮುಖಮಂಟಪ, ಮಧ್ಯಾಂಗಣ, ಬಲಿಪೀಠವನ್ನು ಒಳಗೊಂಡಿದೆ. ಬಲಿಪೀಠದ ವೇದಿಕೆಯು ಎರಡು ಅಡಿ ಎತ್ತರದಲ್ಲಿ ಚಚೌಕಾರವಾಗಿದ್ದು, ೧೯ ಅಡಿ ಅಗಲ ಹಾಗೂ ೧೨ ಅಡಿ ಉದ್ದವನ್ನು ಹೊಂದಿದೆ. ಮಧ್ಯಾಂಗಣವು ವಿಶಾಲವಾಗಿ ೫೮ ಅಡಿ ಉದ್ದ ಹಾಗೂ ೧೯ ಅಡಿ ಅಗಲವನ್ನು ಹೊಂದಿದೆ. ಇಲ್ಲಿ ಕ್ರೈಸ್ತ ಭಕ್ತರು ಕುಳಿತುಕೊಂಡು ಪ್ರಾರ್ಥನೆ ಮಾಡುತ್ತಾರೆ. ದೇವಾಲಯದ ಮಧ್ಯಾಂಗಣಕ್ಕೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸುಳಿಯಲು ಉತ್ತರ ದಿಕ್ಕಿನಲ್ಲಿ ಪ್ರಧಾನ ದ್ವಾರಬಾಗಿಲು ಇದ್ದು, ಪೂರ್ವ-ಪಶ್ಚಿಮ ದಿಕ್ಕಿನಲ್ಲಿ ತ್ರಿಕೋನಾಕಾರದ ಕಿಟಕಿ ಹಾಗೂ ಬಾಗಿಲುಗಳನ್ನು ಅಳವಡಿಸಲಾಗಿದೆ. ಪೂರ್ವ ದಿಕ್ಕಿನಲ್ಲಿ ಮೂರು ಬಾಗಿಲುಗಳು ಹಾಗೂ ಎರಡು ಕಿಟಕಿಗಳು, ಪಶ್ಚಿಮ ದಿಕ್ಕಿನಲ್ಲಿ ಮೂರು ಬಾಗಿಲುಗಳು ಹಾಗೂ ಎರಡು ಕಿಟಕಿಗಳನ್ನು ಒಳಗೊಂಡಿದೆ. ದೇವಾಲಯದ ಬಾಗಿಲುಗಳು ಹಾಗೂ ಕಿಟಕಿಗಳು ಗಾತಿಕ್ ಶೈಲಿಯಿಂದ ಕೂಡಿವೆ. ದೇವಾಲಯದ ಮುಖಮಂಟಪವು ವಿಶಾಲವಾಗಿದ್ದು, ಡೋರಿಕ್ ಶೈಲಿಯ ಹದಿನಾಲ್ಕು ಕಂಬಗಳಿಂದ ಕೂಡಿದೆ. ದೇವಾಲಯಕ್ಕೆ ಹೊಂದಿಕೊಂಡಂತೆ ಪೂರ್ವ-ಪಶ್ಚಿಮ ದಿಕ್ಕಿನಲ್ಲಿ ಕಂಬ ಸಾಲುಗಳ ಹಜಾರವಿದೆ. ಈ ಹಜಾರದಲ್ಲಿ ಒಟ್ಟು ಇಪ್ಪತ್ತಾರು ಕಂಬಗಳಿದ್ದು, ಪ್ರತಿಯೊಂದು ಕಂಬವು ಐದು ಅಡಿಗಳ ವೃತ ಹಾಗೂ ೧೩ ಅಡಿ ಎತ್ತರವನ್ನು ಹೊಂದಿವೆ. ಈ ಕಂಬಗಳು ದಪ್ಪವಾಗಿ ಮತ್ತು ಸರಳವಾಗಿ ಇದ್ದು, ದೇವಾಲಯದ ಆಸ್ತಿಭಾರದಿಂದ

ಮೇಲೆದ್ದು, ತುದಿಯಲ್ಲಿ ಚೌಕಾಕಾರದ ಬೋಧಿಗೆಯನ್ನು ಹೊಂದಿವೆ. ದೇವಾಲಯದ ಮೇಲ್ಛಾವಣಿಗೆ ಮರದ ತೊಲೆ ಹಾಗೂ ಅವುಗಳ ಮೇಲೆ ಹಾಸು ಹಲಗೆಯನ್ನು ಹಾಸಿ ಅದರ ಮೇಲೆ ಗಾರೆಯನ್ನು ಹಾಕಿರುವುದು ಕಂಡುಬರುತ್ತದೆ. ಕನ್ನಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದತೀರು, ಸುಣ್ಣ, ಗಾರೆ, ಮಂಗಳೂರು ಹೆಂಚ್ ಇತ್ಯಾದಿ ಸಲಕರಣೆಗಳನ್ನು ಬಳಸಿ ಕಟ್ಟಲಾಗಿದೆ.

**ಚರ್ಚ್ ಆಫ್ ಕೆಥ್ರಿಡಲ್ ಹಾರ್ಟ್ : ಹೊಸಪೇಟೆ**

ಹೊಸಪೇಟೆ ಕೇಂದ್ರ ಭಾಗದಲ್ಲಿರುವ ಪವಿತ್ರ ಹೃದಯ ಇಗರ್ಜಿಯು ಕ್ಯಾಥೋಲಿಕ್ ಪಂಥಕ್ಕೆ ಸೇರಿದೆ. ರೆವ್. ಕೂಪರ್ ಡ್ರಾಡ್ ಅವರು ಕ್ರಿ.ಶ. ೧೯೨೦ರ ಸುಮಾರಿನಲ್ಲಿ ಸಣ್ಣದಾದ ಪ್ರಾರ್ಥನಾ ಮಂದಿರವನ್ನು ಸ್ಥಾಪಿಸಿದರು. ಈ ದೇವಾಲಯದಲ್ಲಿ ಕ್ಯಾಥೋಲಿಕ್ ಪಂಥಕ್ಕೆ ಸೇರಿದ ಸದಸ್ಯರಿಗೆ ಧರ್ಮ ಬೋಧನೆ ಹಾಗೂ ಇತರ ಕಾರ್ಯಕ್ರಮಗಳು ನಡೆಯುತ್ತಿದ್ದವು. ಕ್ರಿ.ಶ. ೧೯೪೭ರಲ್ಲಿ ರೆ.ಫಾ. ಫಿಡೆಲಿಸ್ ಮಾಗೀ ಅವರು ಕ್ರೈಸ್ತ ಪಾದ್ರಿಯಾಗಿ ಹೊಸಪೇಟೆಗೆ ಬಂದಂತಹ ಸಂದರ್ಭದಲ್ಲಿ ಹಳೆಯ ಪ್ರಾರ್ಥನಾ ಮಂದಿರದಲ್ಲಿಯೇ ಕೆಲವು ದಿನಗಳ ಕಾಲ ಧರ್ಮ ಬೋಧನೆಯನ್ನು ಮಾಡಿದರು. ಕಾಲ ನಂತರದಲ್ಲಿ ಕ್ರೈಸ್ತ ಭಕ್ತರು ಹೆಚ್ಚಾದಂತೆ, ಚಿಕ್ಕ ಪ್ರಾರ್ಥನಾ ಮಂದಿರದಲ್ಲಿ ಸದಸ್ಯರಿಗೆ ಕಿರಿದಾಗಿರುವುದನ್ನು ಕಂಡು, ಹೊಸ ಚರ್ಚ್ ಕಟ್ಟಡವನ್ನು ೧೯೫೭ರಲ್ಲಿ ಸ್ಥಾಪಿಸಲು ಯೋಜನೆಯನ್ನು ಹಾಕಿಕೊಂಡಿದ್ದನು. ಇದರ ಫಲವಾಗಿ ಹಳೆಯ ಕಟ್ಟಡದ ಆಗ್ನೇಯ ದಿಕ್ಕಿನಲ್ಲಿ ಹೊಸ ಪ್ರಾರ್ಥನಾ ಮಂದಿರವನ್ನು ವಿಶಾಲವಾಗಿ ದಕ್ಷಿಣಾಭಿಮುಖವಾಗಿ ನಿರ್ಮಿಸಲಾಗಿದೆ. ಹಳೆಯ ಪ್ರಾರ್ಥನಾ ಮಂದಿರವು ಪ್ರಸ್ತುತ ಇದೆ. ಇದರಲ್ಲಿ ಸಭಾ ಪಾಲಕರು ವಾಸಿಸುತ್ತಿದ್ದಾರೆ. ಈ ದೇವಾಲಯದಲ್ಲಿ ಸುಮಾರು ಒಂದು ಸಾವಿರಕ್ಕೂ ಹೆಚ್ಚು ಕ್ಯಾಥೋಲಿಕ್ ಸದಸ್ಯ ಇದ್ದಾರೆ. ಅವರು ಕನ್ನಡ ಮತ್ತು ತೆಲುಗು ಎರಡು ಭಾಷಿಕರಾಗಿದ್ದಾರೆಂದು ದೇವಾಲಯದ ಫಾದರ್ ಆಗಿದ್ದ ಸುಂದರರಾಜ್ ಅವರಿಂದ ಮಾಹಿತಿ ಪಡೆಯಲಾಗಿದೆ.

**ರೆವರೆಂಡ್ ನೇವ್‌ರಾಜ್ ಸ್ಮಾರಕ ದೇವಾಲಯ : ಹಿರೇಬನ್ನಿಮಟ್ಟಿ**

ಹಡಗಲಿ ತಾಲೂಕು, ಹಿರೇಬನ್ನಿಮಟ್ಟಿಯಲ್ಲಿ ತುಂಗಾಭದ್ರ ನದಿಯ ಬಲದಂಡೆಯ ಮೇಲೆ ರೆವರೆಂಡ್ ನೇವ್‌ರಾಜ್ ಸ್ಮಾರಕ ದೇವಾಲಯವಿದೆ. ಇದು ದಕ್ಷಿಣಾಭಿಮುಖವಾಗಿದೆ. ಹಿರೇಬನ್ನಿಮಟ್ಟಿಗೆ ಕ್ರಿ.ಶ. ೧೯೩೭ರಲ್ಲಿ ಆಗಮಿಸಿದ ಮೊದಲ ಪ್ರಾಟೆಸ್ಟೆಂಟ್ ಮಿಷನರಿಯಾದ ರೆವರೆಂಡ್ ನೇವ್‌ರಾಜ್ ಅವರು ಬಂದ ಸಂದರ್ಭದಲ್ಲಿ ಹಿರೇಬನ್ನಿಹಟ್ಟಿ ಒಂದು ಚಿಕ್ಕ ಗ್ರಾಮ. ಇಲ್ಲಿ ಚೆನ್ನದಾಸ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಕುರುಬ, ಲಿಂಗಾಯಿತ, ಮುಸ್ಲಿಂ ಇತ್ಯಾದಿ ಸಮುದಾಯಗಳಿವೆ. ನೇವ್‌ರಾಜ್ ಅವರು ಇಲ್ಲಿನ ತಳಸಮುದಾಯದೊಂದಿಗೆ ಸೇವಾಕಾರ್ಯಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದನು. ಈತನಿಗೆ ಯಾವುದೇ ರೀತಿಯ ಮನೆಯಾಗಲಿ, ಚರ್ಚ್ ಆಗಲಿ ಆರಂಭದಲ್ಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಅವರು ಒಂದು ಚಿಕ್ಕ ಮಣ್ಣಿನಿಂದ ಕಟ್ಟಿದ ಕೊಠಡಿಯಲ್ಲಿ ನೆಲೆಸಿ; ಅಲ್ಲಿಯೇ ಸ್ಥಳೀಯ ಜನರಿಗೆ ಕ್ರಿಸ್ತನ

ಉಪದೇಶಗಳನ್ನು ನೀಡುತ್ತಿದ್ದವು. ಪ್ರಸ್ತುತ ಈ ಕೊಠಡಿ ಪಾಳುಬಿದ್ದಿದೆ. ನೇವ್‌ರಾಜ್ ಅವರ ಆಕರ್ಷಿತ ಸೇವೆಗೆ ಸ್ಥಳೀಯ ತಳಸಮುದಾಯವಾದ ಚೆನ್ನದಾಸ ೧೦ ಕುಟುಂಬಗಳು ಮತಾಂತರಗೊಂಡವು. ಪ್ರಸ್ತುತವು ಈ ಕುಟುಂಬಗಳಿರುವುದನ್ನು ಗಮನಿಸಲಾಗಿದೆ. ನೇವ್‌ರಾಜ್ ಮರಣದ ನಂತರ ಚೆನ್ನದಾಸ ಸಮುದಾಯವು ಆತನ ಸೇವೆಯನ್ನು ಮೆಚ್ಚಿ ಆತನ ಸ್ಮರಣಾರ್ಥವಾಗಿ ತುಂಗಾಭದ್ರ ನದಿಯ ಬಲದಂಡೆಯ ಮೇಲೆ ಹಾಗೂ ಹಿರೇಬನ್ನಿಹಟ್ಟಿ ಗ್ರಾಮದ ಪಶ್ಚಿಮ ತುದಿಯಲ್ಲಿ ಭೂಮಿಯನ್ನು ಖರೀದಿಸಿ, ಕ್ರಿ.ಶ. ೧೯೫೭ರಲ್ಲಿ ರೆವರೆಂಡ್ ನೇವ್‌ರಾಜ್ ಸ್ಮಾರಕ ದೇವಾಲಯವನ್ನು ಸ್ಥಾಪಿಸಿದರು. ಈ ದೇವಾಲಯಕ್ಕೆ ಕ್ರೈಸ್ತ ಸಂಘಗಳಿಂದಾಗಲಿ, ಸರ್ಕಾರದ ಅನುಧಾನವಾಗಲಿ ಬಂದಿರುವುದಿಲ್ಲ. ಕೇವಲ ೧೦ ಚೆನ್ನದಾಸ ಕುಟುಂಬ ವರ್ಗದವರು ಸ್ವತಃ ಹಣದಿಂದ ದೇವಾಲಯವನ್ನು ನಿರ್ಮಿಸಿಕೊಂಡಿದ್ದೇವೆ ಎಂದು ಚರ್ಚ್ ಸದಸ್ಯರಾದ ಜಾರ್ಜ್ ಅವರ ಅಭಿಮತ. ಈ ದೇವಾಲಯವನ್ನು ಸರ್ವೇ ನಂಬರ್ ೧೬೧ರಲ್ಲಿ ೫೯ ಸೆಂಟ್ಸ್ ವಿಸ್ತೀರ್ಣದಲ್ಲಿ ದಕ್ಷಿಣಾಭಿಮುಖವಾಗಿ ನಿರ್ಮಿಸಲಾಗಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಮರದ ತೀರು, ಮಂಗಳೂರು ಹೆಂಚನ್ನು ಬಳಸಿ ಕಟ್ಟಿರುವುದು ಕಂಡುಬರುತ್ತದೆ. ದೇವಾಲಯದ ಮುಂಭಾಗದಲ್ಲಿ ಕುಡಿಯುವ ನೀರಿನ ಬಾವಿ ಇದೆ. ಈ ಬಾವಿಯಲ್ಲಿರುವ ನೀರನ್ನು ಬಳಸಿ ದೇವಾಲಯದ ಸುತ್ತಲೂ ಗಿಡ-ಮರಗಳನ್ನು ಬೆಳಸಿರುವುದನ್ನು ಗಮನಿಸಲಾಗಿದೆ.

ಹಿರೇಬನ್ನಿಹಟ್ಟಿ ಗ್ರಾಮದ ಉತ್ತರ ದಿಕ್ಕಿನಲ್ಲಿ ಸೆವೆಂತ್-ಡೇ-ಅಡ್ವೆಂಟಿಸ್ಟ್ ಚರ್ಚ್ ಇದೆ. ಈ ಕ್ರೈಸ್ತ ದೇವಾಲಯವು ಇತ್ತೀಚಿನದಾಗಿದ್ದು, ಇದನ್ನು ಫಾದರ್ ಪಿ.ಬಿ. ರಾಜು ಅವರು ಕಾರ್ಯನಿರ್ವಹಿಸುತ್ತಿದ್ದಾರೆ. ಅದೇ ರೀತಿ ಕಾಂತೇಬೆನ್ನೂರು ಗ್ರಾಮದಲ್ಲಿ ಒಂದು ಕ್ರೈಸ್ತ ದೇವಾಲಯವಿದೆ. ಇದು ಕೂಡ ಪ್ರಸ್ತುತದ್ದಾಗಿದೆ. ಇಲ್ಲಿ ಕ್ರಿಸ್ತನ ಉಪದೇಶಗಳನ್ನು ಫಾದರ್ ಶ್ಯಾಮ್ಯುಯಲ್ ಅವರು ನೀಡುತ್ತಿದ್ದಾರೆ.

ಹಡಗಲಿ ಪಟ್ಟಣದ ಹೊರವಲಯದಲ್ಲಿ, ಇಟ್ಟಗಿ ಹೋಗುವ ಮಾರ್ಗದ ಬಲಭಾಗದಲ್ಲಿ ಬಾಲಯೇಸು ದೇವಾಲಯವಿದೆ. ಇದು ಕ್ಯಾಥೋಲಿಕ್ ಪಂಗಡಕ್ಕೆ ಸೇರಿದ್ದು, ಸ್ವಾತಂತ್ರ್ಯ ನಂತರ ಕಾಲಘಟ್ಟದಲ್ಲಿ ಪ್ರಾರಂಭಗೊಂಡಿದೆ. ಕರ್ನಾಟಕಕ್ಕೆ ಕ್ರೈಸ್ತ ಮಿಷನರಿಗಳು ಆರಂಭದಲ್ಲಿ ಕೈಗೊಂಡ ಸೇವೆಗಳಾದ ಧರ್ಮ ಸೇವೆ, ಶಿಕ್ಷಣ ಸೇವೆ ಹಾಗೂ ಸಮಾಜ ಸೇವೆಯನ್ನು ಮಾಡುವುದರ ಮೂಲಕ ಸ್ಥಳೀಯ ಸಂಸ್ಕೃತಿಗೆ ಸಂಮಿಲನವಾಗಿರುವ ರೀತಿ ಈಗಲೂ ಈ ಚರ್ಚ್‌ನಲ್ಲಿ ನಡೆಯುತ್ತಿರುವುದು ನಿಜಕ್ಕೂ ಶ್ಲಾಘನೀಯ. ಏಕೆಂದರೆ, ಬಾಲಯೇಸು ದೇವಾಲಯದಲ್ಲಿ ಸರ್ವಜನರಿಗಾಗಿ ಕ್ರಿಸ್ತನ ಉಪದೇಶಗಳನ್ನು ನೀಡಲಾಗುತ್ತಿದೆ. ದೇವಾಲಯದ ಪಕ್ಕದಲ್ಲಿರುವ ಬಾಲಕಾರ್ಮಿಕರ ವಸತಿಶಾಲೆ, ಡ್ರೈವಿಂಗ್ ತರಬೇತಿ ಕೇಂದ್ರ, ಗ್ರಾಮಾಂತರ ಆರೋಗ್ಯ ಶಿಬಿರಗಳು, ತರಬೇತಿ ಶಾಲೆ, ಕಾರ್ಮೆಲ್ ವೆಲ್ಡಿಂಗ್ ತರಬೇತಿ ಕೇಂದ್ರ, ಆಟೋ ಮೊಬೈಲ್ ತರಬೇತಿ ಕೇಂದ್ರ, ಕಂಪ್ಯೂಟರ್ ತರಬೇತಿ ಕೇಂದ್ರ, ಟೈಲರಿಂಗ್ ತರಬೇತಿ ಕೇಂದ್ರ, ಕಾರ್ಮೆಲ್ ನೃತ್ಯ ಮತ್ತು ಸಂಗೀತ ತರಬೇತಿ ಕೇಂದ್ರಗಳಲ್ಲಿ ಎಲ್ಲಾ ಜಾತಿ ಜನಾಂಗದ ವಿದ್ಯಾರ್ಥಿಗಳು ಶಿಕ್ಷಣವನ್ನು

ಪಡೆಯುತ್ತಿದ್ದಾರೆ ಎಂದು ಚರ್ಚ್ ಫಾದರ್ ರಾಜೇಶ್ ಡಿಸೋಜ ಅವರು ಮಾಹಿತಿಯನ್ನು ನೀಡಿದರು.

**ಸರ್ವದರ್ಶನ ಮೇರಿ ಮಾತೆಯ ಪ್ರಾರ್ಥನಾ ಮಂದಿರ**

ರಾಮಘಡ ಬೆಟ್ಟದಲ್ಲಿ ಕ್ಯಾಥೋಲಿಕ್ ಸರ್ವದರ್ಶನ ಮೇರಿ ಮಾತೆಯ ಪ್ರಾರ್ಥನಾ ಮಂದಿರವು ಬೆಟ್ಟದ ಆಗ್ನೇಯ ದಿಕ್ಕಿನಲ್ಲಿದೆ. ಚರ್ಚ್ ಕಟ್ಟಡ ತಳವಿನ್ಯಾಸವು ಯೇಸುವಿನ ಶಿಲುಬೆಯಾಕಾರದಲ್ಲಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಪಶ್ಚಿಮಾಭಿಮುಖವಾಗಿ ನಿರ್ಮಾಣಗೊಂಡಿದೆ. ಇದರ ಕಟ್ಟಡ ಯಾರಿಂದ? ಎಷ್ಟರಲ್ಲಿ? ಆರಂಭಗೊಂಡಿದೆ ಎಂಬುದರ ಬಗ್ಗೆ ಮಾಹಿತಿಯು ಅಲಭ್ಯ. ಕಾರಣ ಪ್ರಸ್ತುತ ಸಿಸ್ಟರ್ ಆಗಿರುವ ಮೇರಿ ವಿಜ್ಞೆಶೀಯಸ್ ಅವರು ಇಲ್ಲಿಗೆ ಸಿಸ್ಟರ್ ಆಗಿ ಬರುವುದಕ್ಕೆ ಪೂರ್ವದಲ್ಲಿ ಇಲ್ಲಿದ್ದ ಕೆಲವು ದಾಖಲೆಗಳನ್ನು ಬಳ್ಳಾರಿ ಬಿಷಪ್ ಕಛೇರಿಗೆ ಸ್ಥಳಾಂತರಿಸಲಾಗಿದೆ ಎಂಬ ಅಭಿಪ್ರಾಯವನ್ನು ನೀಡಿದರು. ಪ್ರಾರ್ಥನಾ ಮಂದಿರದ ಸುತ್ತಲೂ ಕಾಂಪೌಂಡ್ ಇದ್ದು, ಅದರ ಆವರಣದಲ್ಲಿ ವಿವಿಧ ಬಗ್ಗೆ ಹೂ-ಬಳ್ಳಿಯನ್ನು ಬೆಳೆಸಿರುವುದರಿಂದ ತುಂಬ ಆಕರ್ಷಕವಾಗಿ ಕಂಡುಬರುತ್ತದೆ. ಈ ಪ್ರಾರ್ಥನಾ ಮಂದಿರದ ವತಿಯಿಂದ ಬೆಟ್ಟದ ನೈರುತ್ಯ ದಿಕ್ಕಿನಲ್ಲಿರುವ ಸೈನ್ಯಾಧಿಕಾರಿಗಳ ಸಮಾಧಿಗಳನ್ನು ಸಂರಕ್ಷಿಸಿ, ಸಮಾಧಿಗಳ ಸುತ್ತಲೂ ಕಾಂಪೌಂಡನ್ನು ನಿರ್ಮಿಸಲಾಗಿದೆ.

**೩.೬. ಶಿಕ್ಷಣ ಸಂಸ್ಥೆಗಳು**

ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯ ಪರಿಣಾಮ ಮತ್ತು ಅವರ ಸಂಪರ್ಕದಿಂದಾಗಿ ನಮಗೆ ಆಧುನಿಕ ಶಿಕ್ಷಣ ಪರಿಚಯವಾಯಿತು. ಆಧುನಿಕ ಶಿಕ್ಷಣದ ಪ್ರಸಾರವೊಂದೇ ಸರ್ಕಾರದ ಏಕೈಕ ಕಾರ್ಯಕ್ರಮವಾಗಿರಲಿಲ್ಲ. ಏಕೆಂದರೆ, ಬ್ರಿಟಿಷರು ಭಾರತದಲ್ಲಿ ಹಲವು ಕ್ಷೇತ್ರಗಳಲ್ಲಿ ವಿಸ್ತರಿಸಿಕೊಂಡಿದ್ದ ಕಾರಣಕ್ಕಾಗಿ ಅವರು ಕೇವಲ ಒಂದೇ ಕ್ಷೇತ್ರಕ್ಕೆ ಸೀಮಿತವಾಗಿರಲಿಲ್ಲ. ಕ್ರೈಸ್ತ ಮಿಷನರಿಗಳು ಮತ್ತು ಪ್ರಜ್ಞಾವಂತ ಭಾರತೀಯರೂ ಸಹ ಈ ವಿಷಯದಲ್ಲಿ ಪ್ರಮುಖ ಪಾತ್ರ ವಹಿಸಿದರು. ದೇಶದಲ್ಲಿ ಹೊಸ ಶಿಕ್ಷಣ ಪದ್ಧತಿ ಜಾರಿಗೆ ಬರುವುದಕ್ಕಿಂತ ಪೂರ್ವದಲ್ಲಿ ಭಾರತದಾದ್ಯಂತ ಶಿಕ್ಷಣ ಪದ್ಧತಿ ಜಾರಿಯಲ್ಲಿತ್ತು. ಬಹುತೇಕ ಎಲ್ಲಾ ದೊಡ್ಡ ದೊಡ್ಡ ಗ್ರಾಮ-ಪಟ್ಟಣಗಳಲ್ಲಿ ಇಂಡೋಜಿನಿಯಸ್(Indogenious) ಮಾದರಿಯ ಎಲಿಮೆಂಟರಿ ಶಾಲೆಗಳು ಶಿಕ್ಷಣವನ್ನು ನೀಡುತ್ತಿದ್ದವು. ಈ ಶಾಲೆಗಳನ್ನು 'ಅಯ್ಯಗಳ ಮಠ' ಅಥವಾ 'ಪಯಾಲ್'[೮೮] ಎಂದು ಕರೆಯುತ್ತಿದ್ದರು. ಮಠ-ಮಂದಿರಗಳಲ್ಲಿ ಖಾಸಗಿ ವ್ಯಕ್ತಿಗಳು, ಆಸಕ್ತ ಊರಿನ ಹಿರಿಯ ಪ್ರಮುಖರು ಅಥವಾ ಶಿಕ್ಷಕರು ತಮ್ಮ ಅನುಭವದಿಂದ ಈ ಶಿಕ್ಷಣವನ್ನು ನೀಡುತ್ತಿದ್ದರು. ಆಗ ಮಕ್ಕಳಿಗೆ ಯಾವುದೇ ರೀತಿಯ ಮುದ್ರಿತ ಪುಸ್ತಕವಾಗಲಿ, ನಿರ್ದಿಷ್ಟ ಪಠ್ಯಕ್ರಮವಾಗಲಿ ಇರಲಿಲ್ಲ. ಮಕ್ಕಳ ಬೌದ್ಧಿಕ ಮಟ್ಟಕ್ಕೆ ತಕ್ಕಂತೆ ತರಗತಿಗಳನ್ನು ವಿಂಗಡಿಸಲಾಗುತ್ತಿತ್ತು. ಆರಂಭದಲ್ಲಿ ಅಕ್ಷರಗಳನ್ನು ಮರಳ ಮೇಲೆ ಬೆರಳಿನಿಂದ ಬರೆಸುವುದರ ಮೂಲಕ ಕಲಿಸಲಾಗುತ್ತಿತ್ತು. ಸಂಭಾವನೆಯ ರೂಪದಲ್ಲಿ ವಿದ್ಯಾರ್ಥಿಗಳು ಶಿಕ್ಷಕರಿಗೆ ದವಸ-ಧಾನ್ಯ ಅಥವಾ ವಸ್ತುವಿನಿಮಯ ರೂಪದಲ್ಲಿ

ನೀಡುತ್ತಿದ್ದರು. ಉನ್ನತ ಶಿಕ್ಷಣವನ್ನು ಧರ್ಮ ಮತ್ತು ಸಾಹಿತ್ಯ ರೂಪದಲ್ಲಿ ಮಂದಿರ ಮತ್ತು ಮಠಗಳ, ಸಂಸ್ಕೃತಿ ಪಾಠಶಾಲೆಗಳಲ್ಲಿ ಹೇಳಿಕೊಡಲಾಗುತ್ತಿತ್ತು. ಆದರೆ, ಈ ಎಲ್ಲಾ ಶಿಕ್ಷಣ ಸೌಲಭ್ಯಗಳು ಸಾರ್ವತ್ರಿಕವಾಗಿರದೇ ಕೇವಲ ಮೇಲ್ವರ್ಗದವರಿಗೆ ಮಾತ್ರ ಸೀಮಿತವಾಗಿತ್ತು. ಮಹಿಳಾ ಮತ್ತು ಇತರೆ ಹಿಂದುಳಿದ ಕೆಳವರ್ಗದವರು ಶಿಕ್ಷಣದಿಂದ ವಂಚಿತರಾಗಿದ್ದರು. ಆದರೆ, ಮುಸ್ಲಿಂರಲ್ಲಿ ಯಾವುದೇ ರೀತಿಯ ಕೆಲವೇ ಕೆಲವು ವ್ಯಕ್ತಿಗಳಿಗೆ ಏಕಸ್ವಾಮ್ಯತೆಯನ್ನು ಹೊಂದದೆ ಉನ್ನತ ಶಿಕ್ಷಣ ಸಾರ್ವತ್ರಿಕವಾಗಿತ್ತು. ಅದಕ್ಕಾಗಿಯೇ '೧೭೮೧ರಲ್ಲಿ ವಾರನ್ ಹೇಸ್ಟಿಂಗ್ಸ್ ಕಲ್ಕತ್ತಾದಲ್ಲಿ ಮುಸಲ್ಮಾನ್ ಮತ್ತು ಸಂಬಂಧಿತ ವಿಷಯಗಳ ಅಧ್ಯಯನ ಮತ್ತು ಬೋಧನೆಗೆಂದು ಒಂದು ಉಚಿತ ಮದರಾಸವನ್ನು ಸ್ಥಾಪಿಸಿದ್ದ'.[೮೩] ಇದರಿಂದ ಎಲ್ಲಾ ಮುಸ್ಲಿಂರಿಗೂ ಪ್ರಾಥಮಿಕ ಶಿಕ್ಷಣವು ಮಸೀದಿಗಳಲ್ಲಿ ನಡೆಯುತ್ತಿದ್ದ 'ಮುಕ್ತಾಜ್'ಗಳಲ್ಲಿಯೂ, ಉನ್ನತ ಶಿಕ್ಷಣವನ್ನು 'ಮದರಸಾ'ಗಳಲ್ಲಿಯೂ ನೀಡಲಾಗುತ್ತಿತ್ತು. ಇದು ಕೂಡ ಬಹುತೇಕ ಧಾರ್ಮಿಕ ಸ್ವರೂಪದ ಶಿಕ್ಷಣವಾಗಿತ್ತು.

ಭಾರತದಲ್ಲಿ ಆಧುನಿಕ ಶಿಕ್ಷಣಕ್ಕೆ ಸ್ಪಷ್ಟ ರೂಪುರೇಷೆಗಳನ್ನು ನೀಡಿ, ಪಠ್ಯಕ್ರಮ, ಪರೀಕ್ಷೆ ಮುಂತಾದ ಕ್ರಮಗಳನ್ನು ಅಳವಡಿಸಿ, ಶಾಲೆಗಳನ್ನು ಸ್ಥಾಪಿಸುವ ಮೂಲಕ ಶಿಕ್ಷಣವನ್ನು ಒದಗಿಸಿದ ಕೀರ್ತಿ ಕ್ರೈಸ್ತ ಮಿಷನರಿಗಳಿಗೆ ಸಲ್ಲುತ್ತದೆ. ಮಿಷನರಿಗಳ ಜೊತೆಗೆ ಬ್ರಿಟಿಷ ಸರ್ಕಾರ ಮತ್ತು ಪ್ರಗತಿಪರ ಭಾರತೀಯ ಚಿಂತಕರು ಪ್ರಮುಖ ಕಾರಣರಾದರು. ಬ್ರಿಟಿಷರು ಭಾರತದಲ್ಲಿ ಪ್ರಾರಂಭಿಸಿದ ಶಿಕ್ಷಣದ ಹಿಂದಿದ್ದ ಪ್ರಮುಖ ಉದ್ದೇಶಗಳೆಂದರೆ, ಭಾರತದಲ್ಲಿ ಆಡಳಿತ ನೀತಿಯ ವಿಸ್ತರಣೆ ಮತ್ತು ಸಂಘಟನೆಯನ್ನು ಆರಂಭಿಸಿ ಆ ಮೂಲಕ ಅವರು ಅದರ ಸಾಂಸ್ಕೃತಿಕ ವಿಸ್ತರಣೆಯನ್ನು ಮಾಡಬೇಕಾಗಿತ್ತು. ಇದರಿಂದ ಆಡಳಿತ ಅನುಕೂಲ ದೃಷ್ಟಿಯಿಂದ ಹೆಚ್ಚಿನ ಸಂಖ್ಯೆಯ ವಿದ್ಯಾವಂತ ನೌಕರರು ಬೇಕಾಗಿತ್ತು. ಏಕೆಂದರೆ, ಬ್ರಿಟಿಷ ಸರಕಾರ ಭಾರತದಲ್ಲಿ ಆಡಳಿತ ನಡೆಸುವಾಗ ಆಡಳಿತಕ್ಕೆ ಬೇಕಾದ ಎಲ್ಲಾ ಜನರನ್ನು ಇಂಗ್ಲೆಂಡಿನಿಂದಲೇ ಕಳಿಸುವುದು ತುಂಬಾ ಕಷ್ಟಕರವಾಗಿತ್ತು. ಜೊತೆಗೆ ದುಬಾರಿಯಾಗಿತ್ತು. ಹಾಗಾಗಿ ಇಡೀ ಭಾರತದಲ್ಲಿ ಏಕೆ ಭಾಷಾ ಸೂತ್ರತೆಯನ್ನು ತಂದಪ್ಪು ಆಡಳಿತ ನಡೆಸಲು ಅನುಕೂಲವಾಗುತ್ತದೆ ಎಂಬ ನಂಬಿಕೆಯನ್ನು ಬ್ರಿಟಿಷ್ ಅಧಿಕಾರಿಗಳು ನಂಬಿದ್ದರೆ, ಶಾಲೆಗಳ ಮೂಲಕ ಒದಗಿಸುತ್ತಿದ್ದ ಆಧುನಿಕ ಶಿಕ್ಷಣವು ಭಾರತೀಯರಿಗೆ ತಮ್ಮ ಮೂಢನಂಬಿಕೆಗಳ ಬಗ್ಗೆ ಅರಿವು ಮೂಡಿಸಿ ಅವರನ್ನು ಕ್ರೈಸ್ತ ಧರ್ಮಕ್ಕೆ ಮಂತಾಂತರಗೊಳಿಸಲು ಅತ್ಯಂತ ಫಲದಾಯಕ ಮಾರ್ಗವೆಂದು ಕ್ರಿಶ್ಚಿಯನ್ ಮಿಷನರಿಗಳು ಭಾವಿಸಿದರು. ಈ ಕಾರಣಗಳಿಂದಾಗಿ ಬ್ರಿಟಿಷ್ ಸರ್ಕಾರ ಮತ್ತು ಮಿಷನರಿ ಸಂಸ್ಥೆಗಳ ಪ್ರೋತ್ಸಾಹದಿಂದ ಭಾರತದಾದ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಶಾಲಾ ಕಾಲೇಜುಗಳನ್ನು ಸ್ಥಾಪಿಸಿ, ಪುರುಷ ಸ್ತ್ರೀ ಎನ್ನದೇ ಸಾರ್ವತ್ರಿಕ ಶಿಕ್ಷಣವನ್ನು ಜಾರಿಗೊಳಿಸಿದರು. ಈ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಶಾಲೆಗಳಲ್ಲಿ ಯಾವುದನ್ನು ಕಲಿಸಬೇಕು ಎನ್ನುವುದು ಬಹುದೊಡ್ಡ ತಾತ್ವಿಕ ಪ್ರಶ್ನೆಯಾಯಿತು. ಏಕೆಂದರೆ, ಸಂಸ್ಕೃತಿಯೊಂದು ಪಲ್ಲಟಗೊಳ್ಳುತ್ತಿರುವ ಸಂದರ್ಭದಲ್ಲಿ ಶಿಕ್ಷಣವನ್ನು ಹೇಗೆ ರೂಪಿಸಬೇಕು ಎನ್ನುವ ಕಾಳಜಿಯು

ಪ್ರಭುತ್ವಕ್ಕೆ ಬಹುಮುಖ್ಯ ಸವಾಲಾಯಿತು. ವೇಗವಾಗಿ ಬದಲಾಗುತ್ತಿರುವ ಸಮಾಜದಲ್ಲಿ ವಿದ್ಯಾರ್ಥಿಗಳಿಗೆ ಬರಿಯ ಶಿಕ್ಷಣವೊಂದೇ ಸಾಕಾಗುವುದಿಲ್ಲ. ಪ್ರಭುತ್ವದ ಸಂರಕ್ಷಣೆಗೆ ಇನ್ನಿತರ ಅನೇಕ ಅಂಶಗಳು ಮುಖ್ಯ ಎಂದು ಪ್ರತಿಪಾದಿಸಲಾಯಿತು. ಇದೇ ಕಾಲಾವಧಿಯಲ್ಲಿ ಇಂಗ್ಲೆಂಡಿನಲ್ಲಿ ಸಾಹಿತ್ಯ, ನೀತಿಶಾಸ್ತ್ರ, ಖಗೋಳಶಾಸ್ತ್ರ, ವೈಜ್ಞಾನಿಕ ಅಧ್ಯಯನಗಳು ಪ್ರಭಾವಶಾಲಿಯಾದ ವೈಚಾರಿಕ ನೆಲೆಗಳಾಗಿ ರೂಪುಗೊಂಡವೋ ಆಗ ಅಧ್ಯಯನ ಕ್ರಮಗಳಲ್ಲಿಯೂ ಅಗಾಧ ವ್ಯತ್ಯಾಸವನ್ನು ಕಾಣಲು ಸಾಧ್ಯವಾಯಿತು. ಇವುಗಳ ಪರಿಣಾಮ ವಸಾಹತುಶಾಹಿ ದೇಶಗಳ ಮೇಲೆಯೂ ಉಂಟಾಯಿತು ಎನ್ನುವುದು ಗಮನಾರ್ಹ. ಮೆಕಾಲೆ, ಬೆಂಟಿಂಕ್ ಮೊದಲಾದವರು ವಸಾಹತು ದೇಶಗಳಲ್ಲಿ ಕೊಡಬೇಕಾದ ಶಿಕ್ಷಣ ಯಾವ ರೂಪದ್ದಾಗಿರಬೇಕೆಂದು ಚರ್ಚಿಸಲು ಇದು ಮೂಲಭೂತವಾದ ಹಿನ್ನೆಲೆಯಾಗಿದೆ.

ಇಂಗ್ಲಿಷ್‌ನ್ನು ಶಿಕ್ಷಣ ಮಾಧ್ಯಮವನ್ನಾಗಿ ಮಾಡುವಲ್ಲಿ ಮೆಕಾಲೆಯ ಟಿಪ್ಪಣಿಯೇ ನಿರ್ಣಾಯಕ ಪಾತ್ರವಹಿಸಿತೆಂದು ಸಾಮಾನ್ಯವಾಗಿ ಇತಿಹಾಸಕಾರರು ಬಹುಕಾಲ ಅಭಿಪ್ರಾಯ ಹೊಂದಿದ್ದರು. ಆದರೆ, ಮೆಕಾಲೆಯು ಭಾರತಕ್ಕೆ ಬರುವ ಬಹಳ ಮೊದಲೇ ಭೂಮಿಕೆ ಸಿದ್ಧವಾಗಿತ್ತು. ಬೆಂಥವನು ಬೆಂಟಿಂಕನಿಗೆ ೧೮೨೯ರ ನವೆಂಬರ್ ೧೯ರಂದು ಈ ರೀತಿ ಬರೆದನು. “ನನ್ನ ಮುಂದೆ ಭಾರತದ ಸುವರ್ಣಯುಗವಿರುವುದನ್ನು ನಾನು ನೋಡುತ್ತಿದ್ದೇನೆಂದು ನನಗನ್ನಿಸುತ್ತಿದೆ”. ಶಿಕ್ಷಣ ಮತ್ತು ಉಪಯುಕ್ತ ಜ್ಞಾನದ ಪ್ರಸಾರವನ್ನು ಪ್ರೋತ್ಸಾಹಿಸುವಂತೆ ಬೆಂಟಿಂಕನನ್ನು ಕೇಳಿಕೊಂಡನು. ಬೆಂಟಿಂಕನು ಸರಳ ಆದರೆ (ಆಲೋಚನೆಗಳಲ್ಲಿ) ದೃಢ ಪಾಶ್ಚಿಮಾತ್ಯನಾಗಿದ್ದನು. ಅವನಲ್ಲಿ ಬೌದ್ಧಿಕ ಹಾಗೂ ನೈತಿಕ ಸ್ಪಷ್ಟತೆ ಇತ್ತು. ಮನುಷ್ಯನ ಚಾರಿತ್ರ್ಯವನ್ನು ಮೇಲೆತ್ತುವ ಸಾಧನವಾಗಿ ಶಿಕ್ಷಣದ ಪ್ರಯೋಜನವಾದದಲ್ಲಿ ಅವನಿಗೆ ನಂಬಿಕೆಯಿತ್ತು. ಬ್ರಿಟಿಷ್ ಭಾಷೆಯ ಬಗ್ಗೆ ಅದು ಎಲ್ಲ ಸುಧಾರಣೆಗಳಿಗೂ ಸಾಧನವೆಂದು ಅವನು ಬರೆದನು. ಅವನು “೧೮೩೪ರ ಜೂನ್ ೧ರಂದು ಮ್ಯಾನ್ಸಿಗೆ ಬರೆದ ಪತ್ರದಲ್ಲಿ ಪುನರುಜ್ಜೀವನಕ್ಕೆ ನಾನು ಸೂಚಿಸುವ ದಿವ್ಯೌಷಧ”.[೮] ಮೆಕಾಲೆಯು ಭಾರತವನ್ನು ತಲುಪುವ ಮೊದಲೇ ಬೆಂಟಿಂಕನು ತನ್ನ ಯೋಜನೆಗಳನ್ನು ರೂಪಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ಲಾರ್ಡ್ ವಿಲಿಯಂ ಬೆಂಟಿಂಕ್‌ನ ತೀರ್ಮಾನವು ಭಾರತದಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಬಲವಾದ ಪ್ರೋತ್ಸಾಹ ಕೊಟ್ಟಿತು. ಇದರ ಪರಿಣಾಮವು ಕೂಡಲೇ ಎಲ್ಲಾ ಪ್ರಾಂತಗಳಲ್ಲಿ ಕಂಡುಬಂದಿತು.

ಬಳ್ಳಾರಿ ಜಿಲ್ಲೆಯಲ್ಲಿ ಮೊದಲು ಆಧುನಿಕ ಶಿಕ್ಷಣವನ್ನು ಜಾರಿಗೆ ತಂದು, ಶೈಕ್ಷಣಿಕ ಕ್ರಾಂತಿಗೆ ಕಾರಣರಾದವರು ಪ್ರಾಟೆಸ್ಟೆಂಟ್ ಮಿಷನರಿಗಳು. ಇವರ ಪ್ರಭಾವದಿಂದ ಇಂದು ಶಿಕ್ಷಣ ಹಾಗೂ ವೈದ್ಯಕೀಯ ಕ್ಷೇತ್ರಗಳಲ್ಲಿ ಗಮನಾರ್ಹವಾಗಿ ಅಭಿವೃದ್ಧಿ ಹೊಂದುತ್ತಿದೆ. ಆದರೆ, ಹತ್ತೊಂಬತ್ತನೆಯ ಶತಮಾನದ ಮೊದಲು ಜಿಲ್ಲೆಯ ಶಿಕ್ಷಣದ ಪರಿಸ್ಥಿತಿ ಹೇಗಿತ್ತು? ವಸಾಹತುಶಾಹಿ ಸರಕಾರದಿಂದಾದ ಬದಲಾವಣೆಗಳಾವುವು? ಕ್ರೈಸ್ತ ಮಿಷನರಿ ಸಂಸ್ಥೆಗಳ ಪಾತ್ರವೇನು? ಎಂಬ ಇತ್ಯಾದಿ ಅಂಶಗಳ ಬಗೆಗೆ ತಿಳಿದುಕೊಳ್ಳುವುದಾಗಿದೆ. ಶಿಕ್ಷಣ ಎಂಬುವುದು ಮೇಲ್ವರ್ಗದವರಿಗೆ

ಮತ್ತು ಪುರುಷರಿಗೆ ಮಾತ್ರ ಸೀಮಿತವಾಗಿದ್ದ ಆ ಕಾಲದಲ್ಲಿ ಜಾತಿ, ಭೇದ, ಲಿಂಗಭೇದವಿಲ್ಲದೆ ಸರ್ವರಿಗೂ ಶಿಕ್ಷಣ ದೊರಕಬೇಕೆಂಬ ಉದ್ದೇಶದಿಂದ ಕ್ರೈಸ್ತ ಮಿಷನರಿಗಳು ಹಿಂದುಳಿದ ಮಕ್ಕಳಿಗಾಗಿ ಮತ್ತು ಅನಾಥ ಮಕ್ಕಳಿಗಾಗಿ ಶಾಲೆಗಳನ್ನು ಆರಂಭಿಸಿ, ಅದರ ಶ್ರೇಯೋಭಿವೃದ್ಧಿಗೆ ಶ್ರಮಿಸಿದರು. "ಕ್ರಿ.ಶ. ೧೮೨೩ರಲ್ಲಿ ಜಿಲ್ಲೆಯ ಒಟ್ಟು ಜನಸಂಖ್ಯೆ ೯.೨೭.೮೫೭ ಆಗಿದೆ. ಇಷ್ಟು ಜನಸಂಖ್ಯೆಗೆ ಕೇವಲ ೫೩೩ ಶಾಲೆಗಳಿದ್ದು, ಅದರಲ್ಲಿ ೬.೬೪೧ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು".[೮೫] ಪ್ರತಿ ಶಾಲೆಯಲ್ಲಿ ಸರಾಸರಿ ೧೨ ವಿದ್ಯಾರ್ಥಿಗಳಿದ್ದರು ಎನ್ನಬಹುದು. "ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಪ್ರತಿ ೧೦೦೦ಕ್ಕೆ ೭ ವಿದ್ಯಾರ್ಥಿಗಿಂತ ಹೆಚ್ಚಿನವರು ಶಾಲೆಗೆ ಹೋಗುತ್ತಿರಲಿಲ್ಲವೆಂದು ಎ.ಡಿ. ಕ್ಯಾಂಪ್‌ಬೆಲ್ ತನ್ನ ಮೌಲಿಕ ವರದಿಯಲ್ಲಿ ತಿಳಿಸಿದ್ದಾರೆ".[೮೬] ಇದರಿಂದ ನಮಗೆ ಜಿಲ್ಲೆಯು ಶಿಕ್ಷಣದಿಂದ ಬಹಳ ಹಿಂದುಳಿದಿತ್ತು ಎಂದು ತಿಳಿಯುತ್ತದೆ. ಇದನ್ನು ಗಮನಿಸಿದ ಮದ್ರಾಸ್ ಸರ್ಕಾರವು "೧೮೬೩ರ ಮದ್ರಾಸ್ ಪ್ರಾಥಮಿಕ ಶಿಕ್ಷಣ ಶಾಸನ, ೧೮೭೧ರ ನಗರಾಭಿವೃದ್ಧಿ ಶಾಸನ ೧೧೧, ೧೮೭೧ರ ಮದ್ರಾಸ್ ನಗರಸಭೆ ಶಾಸನ, ಅದೇ ವರ್ಷ ಸ್ಥಳೀಯ ನಿಧಿ(ಲೋಕಲ್ ಫಂಡ್) ಶಾಸನ-IV[೮೭]. ಈ ಶಾಸನಗಳನ್ನು ಜಾರಿಗೊಳಿಸಿ, ಪ್ರಾಥಮಿಕ ಶಿಕ್ಷಣಕ್ಕೆ ಹಣವನ್ನೊದಗಿಸಲು ಸಹಕರಿಸಿತು. ಇದರಿಂದ ಜಿಲ್ಲೆಯಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಒಂದು ಭದ್ರವಾದ ತಳಹದಿ ದೊರೆಯಿತು. ನಂತರ "೧೮೫೪ ರಿಂದ ೧೮೭೧ರವರೆಗಿನ ಅವಧಿಯಲ್ಲಿ ಸರ್ಕಾರದ ಗಮನವು ದೇಶೀಯ ಭಾಷೆಗಳ ಮೂಲಕ ಶಿಕ್ಷಣವನ್ನು ಒದಗಿಸುವ ಕಡೆಗಲ್ಲದೆ, 'ಮಾಧ್ಯಮಿಕ ಶಿಕ್ಷಣ ಶಾಲೆಗಳನ್ನು ಹೆಚ್ಚು ಮಾಡುವ' ಕಡೆಗೆ ಗಮನ ಸೆಳೆದ ಕಾರಣಕ್ಕಾಗಿ ಜಿಲ್ಲೆಯಲ್ಲಿ ಪ್ರೌಢ ಇಂಗ್ಲಿಷ್ ಶಾಲೆಗಳು, ಮಾಧ್ಯಮಿಕ ಇಂಗ್ಲಿಷ್ ಶಾಲೆಗಳು ಹಾಗೂ ದೇಶೀಯ ಭಾಷೆಗಳ ಶಾಲೆಗಳೆಂಬ"[೮೮] ಮೂರು ವರ್ಗದ ಶಾಲೆಗಳು ಸ್ಥಾಪಿತಗೊಂಡವು. ಈ ದಿಸೆಯಲ್ಲಿ ೧೯೪೬-೪೭ರಲ್ಲಿ ಬಳ್ಳಾರಿ ಜಿಲ್ಲೆಯಲ್ಲಿ ೧೧ ಪ್ರೌಢಶಾಲೆಗಳಿದ್ದವು.

ಬಳ್ಳಾರಿ ಜಿಲ್ಲೆಗೆ ೧೮೧೦ರಲ್ಲಿ ಮೊದಲ ಪ್ರಾಟೆಸ್ಟೆಂಟ್ ಮಿಷನರಿಯಾಗಿ ಆಗಮಿಸಿದ ಜಾನ್ ಹ್ಯಾಂಡ್ಸ್ ಅವರು ಆರಂಭದಲ್ಲಿಯೇ ಶಿಕ್ಷಣದಲ್ಲಿ ಅಪಾರ ಸೇವೆ ಸಲ್ಲಿಸಿದ್ದ ಹ್ಯಾಂಡ್ಸ್‌ರ ನಿಷ್ಠೆಯುಳ್ಳ ಸೇವೆಯನ್ನೂ ಪ್ರಶಂಶಿಸಿ, ಉತ್ತೇಜನ ಕೊಡಲು ೧೮೧೩ರಲ್ಲಿ ಕೋಟೆ ಹೊರಗಡೆ ಪೂರ್ವದಿಕ್ಕಿನಲ್ಲಿ ಬ್ರೂಸ್‌ಪೇಟೆಯಲ್ಲಿದ್ದ ನೀಲಮ್ಮನ ಬಾವಿಯನ್ನೊಳಗೊಂಡಿದೆ. ಒಂಬತ್ತು ಎಕರೆ ಭೂಮಿಯನ್ನು ಈಸ್ಟ್ ಇಂಡಿಯಾ ಕಂಪನಿಯವರು ಮಿಷನರಿ ಸೇವೆಗಾಗಿ ದಾನ ವಿಕ್ರಯವಾಗಿ ಕೊಟ್ಟರು. ಇದನ್ನು ಮಿಷನ್ 'ತೋಟ' ಎಂದು ಕರೆದರು. ಕರ್ನಾಟಕದಲ್ಲಿ ಆಧುನಿಕ ಸಾಹಿತ್ಯಾಭಿವೃದ್ಧಿಗಾಗಿ ನಡೆದ ಅನೇಕ ಚಾರಿತ್ರಿಕ ಸಂಘಟನೆಗಳ ಸಾಹಿತ್ಯ ಜ್ವಾಲೆಗಳು ಬೆಳ್ಳಿಯ ಮೋಡದಲ್ಲಿ ಹೊರ ಕಾಯುವಂತೆ ಮೊದಲು ಬೆಳಗಿ ಬಂದುದು ಇದೇ ಮಿಷನ್ ತೋಟದಲ್ಲಿ. ಇಂತಹ ಸುವರ್ಣಾವಕಾಶವನ್ನು ಪಡೆದುಕೊಂಡ ಜಾನ್ ಹ್ಯಾಂಡ್ಸ್‌ರು ಕಾಲವ್ಯಯ ಮಾಡದೆ ಮಿಷನ್ ತೋಟದಲ್ಲಿ ೧೮೧೫ರಲ್ಲಿ ಜಾತಿ, ವರ್ಣ, ಕುಲಭೇದವಿಲ್ಲದೆ ೫೦ ಮಕ್ಕಳಿಂದ ಕೂಡಿದ ಕನ್ನಡ ಶಾಲೆಯನ್ನು ಪ್ರಾರಂಭಿಸಿದರು. ಇದರ ಜೊತೆಗೆ ಬ್ರಿಟಿಷ್ ಸೇನಾ ಪಡೆಯಲ್ಲಿ

ತಮಿಳು, ತೆಲುಗು ಸೈನಿಕರಿದ್ದುದರಿಂದ ಅವರ ಮಕ್ಕಳ ವಿದ್ಯಾ ಪ್ರಗತಿಗಾಗಿ ತಮಿಳು, ತೆಲುಗು ಮತ್ತು ಕನ್ನಡ ಪಾಠಶಾಲೆಗಳನ್ನು ಪ್ರಾರಂಭಿಸಿದರು. ಸೈನ್ಯದ ಹಾಗೂ ಸರ್ಕಾರದ ವ್ಯವಹಾರಿಕ, ಔದ್ಯೋಗಿಕ ಅವಕಾಶಗಳು ಅಧಿಕವಾಗಿ ಬೆಳೆದ ಹಾಗೆಲ್ಲಾ ಇಂಗ್ಲಿಷ್ ಭಾಷೆಯ ಅಗತ್ಯತೆಯು ಸೂಹ ಅಧಿಕಾಧಿಕವಾಗಿ ಅವಶ್ಯಕವಾಗಿತ್ತು. ಹ್ಯಾಂಡ್ಸ್‌ರು ಇಂತಹ ಅಗತ್ಯತೆ ಸದಾವಕಾಶಗಳನ್ನು ಗುರುತಿಸಿ ಮಿಷನ್ ತೋಟದಲ್ಲಿ ಉನ್ನತ ಮಟ್ಟದ ಸ್ಥಳಿಕ ಮೇಧಾವಿ ವಿದ್ಯಾರ್ಥಿಗಳಿಗಾಗಿ ೧೮೧೬ರಲ್ಲಿ "ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆ"ಯನ್ನು ಪ್ರಾರಂಭಿಸಿದರು. ಕನ್ನಡ, ತೆಲುಗು, ತಮಿಳು ಪ್ರಾಥಮಿಕ ಶಾಲೆಗಳಲ್ಲಿ ಉನ್ನತ ಶ್ರೇಣಿಯಲ್ಲಿ ತೇರ್ಗಡೆಯಾದವರಿಗೆ ಈ ವಿಶೇಷ ಪ್ರವೇಶದ ಅವಕಾಶ ದೊರಕುತ್ತಿತ್ತು. ಹೀಗೆ ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆಯಲ್ಲಿ ಅಭ್ಯಾಸ ಮಾಡಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದ ದೇಶೀಯರನ್ನು ಈಸ್ಟ್ ಇಂಡಿಯಾ ಕಂಪನಿಯ ಸರ್ಕಾರದ ಕಛೇರಿಗಳಲ್ಲಿ ಗುಮಾಸ್ತರನ್ನಾಗಿಯೂ, ನಕಲು ಬರೆಯುವವರನ್ನಾಗಿಯೂ, ಸೈನಿಕರ ನ್ನಾಗಿಯೂ ವಿವಿಧ ವೃತ್ತಿಗಳಿಗೆ ಸೇರಿಸಿಕೊಳ್ಳುತ್ತಿದ್ದರು ಹಾಗೂ ಹಲವು ಅರ್ಹರಿಗೆ ಶಿಕ್ಷಣ ತರಬೇತಿಯನ್ನು ಕೊಟ್ಟು ಶಾಲಾ ಶಿಕ್ಷಕರನ್ನಾಗಿಯೂ ನೇಮಿಸುತ್ತಿದ್ದರು. ಈ ಕೇಂದ್ರ ವಿದ್ಯಾಶಾಲೆಯಲ್ಲಿ ವಿದ್ಯಾರ್ಹತೆ ಪಡೆದ ವಿಜೇತರನೇಕರು ದೇಶದ ಬೇರೆ ಕಡೆಗಳಲ್ಲಿ ಉದ್ಯೋಗಗಳನ್ನು ಪಡೆದು ಹೋಗುತ್ತಿದ್ದರು. ಕಾಲಕ್ರಮೇಣವಾಗಿ ಈ ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆಯು ಪ್ರಗತಿಯನ್ನು ಸಾಧಿಸಿ ಉತ್ತಮ ವಿದ್ಯಾರ್ಥಿಗಳನ್ನು ಸಿದ್ಧಪಡಿಸಿ ಪ್ರಖ್ಯಾತವಾಗುತ್ತ ಬಂದಿತು.

ಜಾನ್ ಹ್ಯಾಂಡ್ಸ್ ಅವರ ಗಣನೀಯವಾದ ಇನ್ನೊಂದು ವಿಶೇಷ ಪ್ರಯತ್ನವೇನೆಂದರೆ - ಇಡೀ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ೧೮೨೬ರಲ್ಲಿ ಮಿಷನ್ ತೋಟದಲ್ಲಿ ಸ್ತ್ರೀಯರು ತಮ್ಮ ಜನ್ಮ ಸ್ವಾಮ್ಯವಾಗಿ ಬಂದ ಸ್ಥಾನಮಾನ, ವಿದ್ಯಾಹಕ್ಕುಗಳ ಪರಿಜ್ಞಾನವನ್ನು ವಿಕಾಸಗೊಳಿಸಲು ಬಾಲಕಿಯರ ವಿದ್ಯಾಶಾಲೆಯನ್ನು ಪ್ರಾರಂಭಿಸಿದರು. ಜಾನ್ ಹ್ಯಾಂಡ್ಸ್ ಅವರ ಪತ್ನಿಯರೇ ಸ್ತ್ರೀ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲು ಅದರ ವ್ಯವಸ್ಥಾಪಕರಾಗಿದ್ದರು. ಸಮಾಜದಲ್ಲಿ ಸ್ತ್ರೀಯರ ವಿದ್ಯಾಸಾಧನೆಯ ಗುರಿಗೆ ಸಮಾಜದಲ್ಲಿ ಭಾರಿ ಅಡಚಣೆ ಅಭ್ಯಂತರಗಳಿದ್ದರೂ, ದೀರ್ಘ ದೃಷ್ಟಿ ಧೈರ್ಯ ಜನರ ಪರಸ್ಪರ ಸಹಕಾರದಿಂದ ಮುಂದೆ ಸಾಗಿದರು. ಇಂಗ್ಲೆಂಡಿನಲ್ಲಿದ್ದ ಸಂಡರ್‌ಲ್ಯಾಂಡ್‌ನ ಸ್ತ್ರೀ ಸಂಘದವರು ವಿಶೇಷ ಉತ್ತೇಜನ ಕೊಟ್ಟು ಆರ್ಥಿಕ, ನೈತಿಕ ಸಹಾಯ ಮಾಡಿದರು. ಹಿಂದುಳಿದ ವರ್ಗದ ಬಾಲಕಿಯರ ಕಡೆಗೆ ಸಹ ವಿಶೇಷ ಶ್ರದ್ಧೆಯನ್ನಿಟ್ಟು ಸ್ತ್ರೀ ವಿದ್ಯಾಭ್ಯಾಸದ ಪ್ರಗತಿಗಾಗಿ ಪಾಠಶಾಲೆಗಳನ್ನು ಏರ್ಪಡಿಸಿದರು. ಹ್ಯಾಂಡ್ಸ್‌ರವರು ೧೮೧೨ರಲ್ಲಿ ಯೂರೋಪಿಯನ್ ಬಡ ಅನಾಥ ಮಕ್ಕಳಿಗಾಗಿ ಪ್ರಾರಂಭಿಸಿದ ಕೋಟೆಯ ಧರ್ಮ ವಿದ್ಯಾಶಾಲೆಯನ್ನು ಸ್ಥಾಪಿಸಲಾಗಿತ್ತು. ಇದು ಈಗೀನ ಸಂತ ಜಾನ್ ಪ್ರೌಢ ಶಾಲೆಯ ಆಟದ ಆವರಣದಲ್ಲಿತ್ತು. ಆದರೆ, ಪ್ರಸ್ತುತವೂ ಹಳೆಯ ಕಟ್ಟಡವು ಇಲ್ಲ. ಈ ಎಲ್ಲಾ ವಿದ್ಯಾಶಾಲೆಗಳ ವ್ಯವಸ್ಥಾಪನೆ ಮೇಲ್ವಿಚಾರಣೆಯನ್ನು ಶ್ರೀಮತಿ ಹ್ಯಾಂಡ್ಸ್ ಶ್ರೀಮತಿ ಜಾನ್‌ರೀಡ್, ಶ್ರೀಮತಿ ಪೆಯಿನ್, ಶ್ರೀಮತಿ ವಾಲ್ಟನ್ ಮೊದಲಾದ ಮಿಷನರಿಗಳ ಪತ್ನಿಯರು ಶ್ರದ್ಧಾ ನಿಷ್ಠೆಗಳಿಂದ ನಡೆಸುತ್ತಿದ್ದರು. ಲಂಡನ್ ಮಿಷನ್ ಸಂಸ್ಥೆಯ

ನಿರ್ದೇಶಕರು ೧೮೩೦ ಆಗಸ್ಟ್ ತಿಂಗಳಲ್ಲಿ ಜಾನ್ ರೀಕ್‌ರವರ ಪ್ರಯತ್ನದ ಪರಿಣಾಮವಾಗಿ ಬಡಮಕ್ಕಳ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಸಹಾಯ ಮಾಡಿದರು. ಕೇವಲ ಒಂಬತ್ತು ಬಾಲಕ, ಆರು ಮಂದಿ ಬಾಲಕಿ ಅನಾಥ ಮಕ್ಕಳಿಗೆ ಮಿಷನ್ ತೋಟದಲ್ಲಿಯೇ ಪ್ರತ್ಯೇಕವಾದ ವಿದ್ಯಾರ್ಥಿನಿಲಯಗಳು ಏರ್ಪಾಟಾದವು. ತರುವಾಯ ಬಾಲಕರ ವಿದ್ಯಾರ್ಥಿ ನಿಲಯವು ೧೯೬೭ರಲ್ಲಿಯೂ, ಬಾಲಕಿಯರ ವಿದ್ಯಾರ್ಥಿ ನಿಲಯವು ೧೯೭೨ರಲ್ಲಿಯೂ ಪಾರ್ವತಿನಗರ ಮತ್ತು ಸತ್ಯನಾರಾಯಣ ಪೇಟೆಗೆ ಸ್ಥಳಾಂತರವಾದವು. ಅವು ಪ್ರಸ್ತುತವೂ ಇವೆ.

ಜಾನ್ ಹ್ಯಾಂಡ್ಸ್‌ರವರು ಸಾರ್ವಜನಿಕರಲ್ಲಿ ಜಾತಿ, ಮತ ಭೇದಗಳಿಲ್ಲದೆ, ಪರಸ್ಪರ ಸೌಹಾರ್ದತೆಯು ಬೆಳೆದು ಅಭಿವೃದ್ಧಿಯಾಗುವಂತೆ ವಾಚನಾಲಯವನ್ನೂ ಪುಸ್ತಕ ಭಂಡಾರವನ್ನೂ ಪ್ರಾರಂಭಿಸಿದರು. ಈ ಪ್ರಯತ್ನದಿಂದ ಅನೇಕ ವಿದ್ಯಾವಂತರು ಪರಸ್ಪರ ಕೂಡಿಕೊಂಡು ವಿಚಾರಪೂರ್ವಕವಾದ ಆಧ್ಯಾತ್ಮಿಕ, ವ್ಯವಹಾರಿಕ, ಸಾರ್ವತ್ರಿಕ ವಿಚಾರಗಳನ್ನು ಚರ್ಚಿಸಿ ತಿಳಿಯುವ ಅವಕಾಶಗಳನ್ನು ಒದಗಿಸಿಕೊಟ್ಟಿದ್ದರಿಂದ ಸಮಾಜದಲ್ಲಿ ವಿದ್ಯೆ, ಕಲೆ, ಸಂಸ್ಕೃತಿಗಳ ಮೇಲೂ ಅಭಿರುಚಿ, ಅರಿವು ಸಹ ಮೂಡಿಸಿದಂತಾಯಿತು. ಸರ್ವತೋಮುಖವಾದ ಅಭಿವೃದ್ಧಿಗಾಗಿ ಹವಣಿಸುತ್ತಿದ್ದ ಹ್ಯಾಂಡ್ಸ್‌ರ ಮತ್ತೊಂದು ಆದ ಕೊಡುಗೆಯೇನೆಂದರೆ, ಅವರು ಕೇಂದ್ರ ಕ್ಷೇತ್ರವೆನಿಸಿಕೊಂಡ ಬಳ್ಳಾರಿಯಲ್ಲಿ ೧೮೩೦ರಲ್ಲಿ ವೇದ ವಿದ್ಯಾರ್ಥಿಗಳ ಶಿಕ್ಷಣದ ವೇದ ಮಠವನ್ನು ಪ್ರಾರಂಭಿಸಿದರು. ಅವರ ಸೇವಾ ಫಲದಿಂದಲೇ ಸ್ಥಾಪಿತವಾದ ಬಳ್ಳಾರಿ, ಬೆಳಗಾವಿ, ಬೆಂಗಳೂರು, ಕಡಪ, ಧಾರವಾಡ, ಹುಬ್ಬಳ್ಳಿ ಅನಂತರದಲ್ಲಿ ಮೈಸೂರು ಈ ಮೊದಲಾದ ಕ್ಷೇತ್ರಗಳಲ್ಲಿ ತರಬೇತಿ ಶಿಕ್ಷಣವನ್ನು ನೀಡಲಾಗುತ್ತಿತ್ತು.

## ವಾರ್ಡ್ಲಾ ಪ್ರೌಢ ಶಾಲೆ

ಕ್ರಿ.ಶ. ೧೮೪೨ರಲ್ಲಿ ಲಂಡನ್ನಿನ ಕ್ರಿಶ್ಚಿಯನ್ ಮಿಷನರಿ ಸೊಸೈಟಿಯ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ರೆವ್ಹರೆಂಡ್ ಜಾನ್‌ಸ್ಮಾತ್ ವಾರ್ಡ್ಲಾರವರು ಇಂಗ್ಲಿಷ್ ಮತ್ತು ಸತ್ಯವೇದದ ಮೂಲ ಭಾಷೆಗಳ ಪಾಂಡಿತ್ಯವನ್ನು ಪಡೆದು ಬಹು ಉತ್ಸಾಹದಿಂದ ೧೮೪೨ರಲ್ಲಿ ಬಳ್ಳಾರಿಗೆ ಬಂದರು. ೧೮೧೩ರಲ್ಲಿ ಇಂಗ್ಲೆಂಡಿನ ಗ್ಲಾಸಗೋ ನಗರದಲ್ಲಿ ಜನಿಸಿದ ವಾರ್ಡ್ಲಾ ಎಡಿನ್‌ಬರೋದಲ್ಲಿ ಎಂ.ಎ. ಪದವಿಯನ್ನು ಹೀಬ್ರೂ ಮತ್ತು ಗ್ರೀಕ್ ಭಾಷಾ ಪಾಂಡಿತ್ಯವನ್ನು ಪಡೆದವರು. ನಂತರ ೧೮೪೫ರಲ್ಲಿ ಅನ್ನಬೆಲ್ ಮೆಕೆಯಾಂಡ್ ಅವರನ್ನು ಮದುವೆಯಾದ ಮೇಲೆ ವಿದ್ಯಾಪ್ರಗತಿಗಾಗಿ ಬಾಲಕ-ಬಾಲಕಿಯರ ಶಾಲೆಗಳ ಸ್ಥಾಪನೆಯಲ್ಲಿ ತೊಡಗಿದರು. ವಾರ್ಡ್ಲಾರವರು ಬಳ್ಳಾರಿ ಜಿಲ್ಲೆಗೆ ಬರುವುದಕ್ಕೂ ಪೂರ್ವದಲ್ಲಿ ಜಾನ್‌ಹ್ಯಾಂಡ್ಸ್‌ರವರು ಜಿಲ್ಲೆಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅಪಾರ ಸೇವೆಯನ್ನು ಸಲ್ಲಿಸಿದ್ದರು. ಇದನ್ನು ಗಮನಿಸಿದ ವಾರ್ಡ್ಲಾರವರು ಮಿಷನ್ ತೋಟದಲ್ಲಿ ಜಾನ್‌ಹ್ಯಾಂಡ್ಸ್‌ರ ಕಾಲಾವಧಿಯಿಂದ ಅಭಿವೃದ್ಧಿಯಾಗಿ ಬೆಳೆದು ಬಂದ ಕೇಂದ್ರ ಇಂಗ್ಲಿಷ್ ವಿದ್ಯಾಶಾಲೆಯನ್ನು ನೂತನಗೊಳಿಸಿದ ವಾರ್ಡ್ಲಾರವರು ತಮ್ಮ ಬಂಧುಮಿತ್ರಾದಿಗಳ ಉದಾರ ಹಣ ಸಹಾಯದಿಂದಲೂ,

ಸ್ಥಳೀಯ ಸ್ನೇಹಿತರ ಸಹಾಯದಿಂದಲೂ ಲಂಡನ್ ಮಿಷನ್ ಸಂಸ್ಥೆಯ ಆರ್ಥಿಕ ಸಹಾಯದಿಂದಲೂ ಪಡೆದ ಅಥವಾ ಸಂಗ್ರಹಿಸಿದ "ಒಟ್ಟು ಮೊತ್ತ ೧೫,೭೪೭ ಸಾವಿರ ರೂಪಾಯಿಗಳ ವೆಚ್ಚದಲ್ಲಿ ಇಂದಿಗೂ ಸುಂದರವಾಗಿ ಕಾಣುವ ಹಳೆಯ ಕಟ್ಟಡವನ್ನು ಆಗಸ್ಟ್ ೨೮ನೆಯ ೧೮೪೬ರಲ್ಲಿ ಪ್ರತಿಷ್ಠಾಪಿಸಿ, ಇಂಗ್ಲಿಷ್ ಮಾಧ್ಯಮದ ವಾರ್ಡ್ಲಾ ಪ್ರೌಢ ಶಾಲೆಯನ್ನು ಪ್ರಾರಂಭಿಸಿದರು".[೮೯] ಅವರು ನಿರ್ಮಿಸಿದ ಸುಂದರವಾದ ಕಲ್ಲಿನಕಟ್ಟಡವು ಇಂದಿಗೂ ಸುಭದ್ರವಾಗಿದೆ. ಈ ಶಾಲೆಯಲ್ಲಿ ದೇಶೀಯ ಭಾಷೆಯನ್ನೊಂದು ಹೊರತುಪಡಿಸಿ, ಉಳಿದ ಪಾಠಕ್ರಮಗಳೆಲ್ಲವನ್ನು ಮೆಟ್ರಿಕ್ಯೂಲೇಷನ್ ಹಂತದವರೆಗೆ ಇಂಗ್ಲಿಷ್ ಮಾಧ್ಯಮದಲ್ಲಿ ನಡೆಸುತ್ತಿದ್ದರು. ಈ ಶಿಕ್ಷಣಕ್ರಮವು ಮದ್ರಾಸ್ ಸರ್ಕಾರದ ವಿದ್ಯಾಡಳಿತಕ್ಕೊಳಪಟ್ಟ ಶಿಕ್ಷಣಕ್ರಮದ ಮೇರೆಗೆ ವಿದ್ಯಾ ವ್ಯಾಸಂಗವು ನಡೆಸಲ್ಪಡುತ್ತಿತ್ತು. ಈ ಶಾಲೆಯು ಸೀಡೆಡ್ ಜಿಲ್ಲೆಗಳಲ್ಲಿದ್ದ ಮೊದಲ ಪ್ರೌಢ ಶಾಲೆಯಾಗಿತ್ತು. ವಾರ್ಡ್ಲಾ ಪ್ರೌಢಶಾಲೆಯ ಪ್ರಿನ್ಸಿಪಾಲರಾದ ಘನ ಥಾಮಸ್ ಹೆಯಿನ್ಸ್‌ರು ೧೮೮೭ರಲ್ಲಿ ಕೊಟ್ಟ ವರದಿಯ ಪ್ರಕಾರ "ಶಾಲೆಯಲ್ಲಿ ೩೮೬ ವಿದ್ಯಾರ್ಥಿಗಳಿದ್ದರು. ಅದರಲ್ಲಿ ಶೇಕಡ ೫೬% ಬ್ರಾಹ್ಮಣರು, ಶೇಕಡ ೨೫% ಶೂದ್ರರು, ಶೇಕಡ ೭% ಕ್ರೈಸ್ತರು, ಶೇಕಡ ೧೨% ಇತರೆ ವರ್ಗದ ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದರು".[೯೦]

೧೮೯೧ರಲ್ಲಿ ವಾರ್ಡ್ಲಾ ಶಾಲೆಯ ಪ್ರಾಚಾರ್ಯರಾದ ಶ್ರೀ ಜೆ.ಪಿ. ಕೋಟಲಿಂಗಮ್ ಅವರ ಪರಿಶ್ರಮದಿಂದ ವಾರ್ಡ್ಲಾ ದ್ವಿತೀಯ ದರ್ಜೆಯ ಮಹಾವಿದ್ಯಾಲಯದ ಮಟ್ಟದವರೆಗೆ ಉನ್ನತಿ ಪಡೆಯಿತು. ಇದರಿಂದ ಈ ಸಾಲೆಯು ಸೀಡೆಡ್ ಜಿಲ್ಲೆಗಳಲ್ಲಿ ಮೊಟ್ಟಮೊದಲ ದ್ವಿತೀಯ ದರ್ಜೆಯ ಕಾಲೇಜು ಆಗಿ ಹೆಸರು ಗಳಿಸಿತು. "೧೯೧೨ರಲ್ಲಿ ಈ ಶಾಲೆಯಲ್ಲಿ ೧೬ ಶಿಕ್ಷಕರು, ೮ ಸಹ ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದರು".[೯೧] ಇದೇ ಅವಧಿಯಲ್ಲಿ ಶಾಲೆಯ ಪೀಠೋಪಕರಣಗಳಿಗಾಗಿ ಸರ್ಕಾರದಿಂದ ೧,೯೧೦ ರೂಪಾಯಿಗಳನ್ನು ಅನುದಾನ ನೀಡಲಾಗಿತ್ತು. ಇದರಿಂದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಾ ಹೋಯಿತು.

ವಾರ್ಡ್ಲಾರವರು ಬಳ್ಳಾರಿ ಜಿಲ್ಲೆಯಲ್ಲಿ ಕೆಲವೇ ವರ್ಷಗಳಿದ್ದರು. ಅನಂತರ ಅವರನ್ನು ವಿಶಾಖಪಟ್ಟಣ ಮತ್ತು ಮಚಲಿಪಟ್ಟಣಕ್ಕೆ ವರ್ಗಾಯಿಸಿದರು. ಅವರು ಬೈಬಲ್‌ನ್ನು ತೆಲುಗಿಗೆ ಅನುವಾದಿಸುವಲ್ಲಿ ನೆರವಾದರು. ವಾರ್ಡ್ಲಾರವರು ೧೭೦ ವರ್ಷಗಳ ಹಿಂದೆ ಕನಸು ಕಂಡು, ಅದನ್ನು ರೂಪಿಸಿ, ಬೆಳೆಸಿ, ವರದಾನವಾಗಿ ನೀಡಿದ ಸಂಸ್ಥೆಯು ಜಿಲ್ಲೆಯ ಪ್ರಥಮ ಶಿಕ್ಷಣ ಸಂಸ್ಥೆಯಾಗಿದೆ. ಈ ಶಾಲೆಯು ಉತ್ತಮ ವಿದ್ಯಾಭ್ಯಾಸ, ಶಿಸ್ತು ಮತ್ತು ಸಂಸ್ಕೃತಿ ವರ್ಧನೆಯ ಕೇಂದ್ರವಾಗಿದೆ. ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಮೊದಲ ವ್ಯವಸಾಯ ಮಾಡಿದ ಸಂಸ್ಥೆ ಕನ್ನಡ ಸಾಹಿತ್ಯ-ಸಂಸ್ಕೃತಿಯ ರಕ್ಷಣೆ, ಪೋಷಣೆಗೆ ನಿರಂತರ ನೆರವಾಗಿದೆ.

ಸನ್ಮಾನ್ಯ ಶ್ರೀ ಎಂ.ಪಿ. ಪ್ರಕಾಶ್, ಅಲ್ಲಂ ಮನೆತನದವರು, ಎಂ.ಜಿ. ಬ್ರದರ್ಸ್ ಮನೆತನದವರು, ಜಿಲ್ಲೆಯ ಪ್ರಮುಖ ನಾಯಕರು, ಸಾಮಾಜಿಕ ಧುರೀಣರು, ಸಾಹಿತಿಗಳು, ಕಲಾವಿದರು ಈ

ಶಾಲೆಯಲ್ಲಿ ವ್ಯಾಸಂಗ ಮಾಡಿದ ವಿದ್ಯಾ ಪರಿಣಾಮದಿಂದ ಸಮಾಜದಲ್ಲಿ ಅವರ ಆಧ್ಯಾತ್ಮಿಕ, ನೈತಿಕ, ಶಿಸ್ತಿನ ಜೀವಿತವು ಉನ್ನತ ಮಟ್ಟದಲ್ಲಿ ಬೆಳೆಯಲು ಕಾರಣವಾಗಿದೆ. ಕರ್ನಾಟಕದ ನವೋದಯ ಸಾಹಿತಿಗಳಾದ ವಿ.ಕೃ. ಗೋಕಾಕ, ದ.ರಾ. ಬೇಂದ್ರೆ, ಅನಕೃ, ತರಾಸು ಜಿ.ಪಿ. ರಾಜರತ್ನಂ, ವಿ. ಸೀತಾರಾಮಯ್ಯ ಮುಂತಾದ ಹಲವರು ಈ ಶಾಲೆಗೆ ಅತಿಥಿಗಳಾಗಿ ಆಗಮಿಸಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

ವಾರ್ಡ್ಲಾ ಪ್ರೌಢಶಾಲೆಯ ಕಟ್ಟಡವು ಬಳ್ಳಾರಿ ಜಿಲ್ಲೆಯ ಬ್ರೂಸ್‌ಪೇಟೆಯ ಬಡಾವಣೆಯಲ್ಲಿ ನೀಲಮ್ಮನ ತೋಟವೆಂದು ಅಥವಾ ಮಿಷನ್ ತೋಟವೆಂದು ಹೆಸರಾದ ೯ ಎಕರೆಯ ವಿಶಾಲವಾದ ಭೂಮಿಯ ಮಧ್ಯಭಾಗದಲ್ಲಿ ಉತ್ತಾರಭಿಮುಖವಾಗಿ ನಿರ್ಮಿಸಲ್ಪಟ್ಟಿದೆ. ಇದರ ತಳವಿನ್ಯಾಸವು ಚಚ್ಚೌಕಾರವಾಗಿದ್ದು, ಎರಡು ಅಡಿ ಎತ್ತ ಬೆಸ್‌ಮೆಂಟ್ ಮೇಲೆ ಕಲ್ಲಿನಿಂದ ಕಟ್ಟಲಾಗಿದೆ. ವಿದ್ಯಾರ್ಥಿಗಳು ಕುಳಿತು ಪಾಠ ಕೇಳುವ ಸಲುವಾಗಿ ವಿಶಾಲವಾದ ತರಗತಿಯ ಕೊಠಡಿಗಳಿವೆ. ಕೊಠಡಿಗಳಿಗೆ ಗಾಳಿ ಮತ್ತು ಬೆಳಕು ಒಳಸೂಸಿಸಲು ಕಿಡಕಿ ಮತ್ತು ಬಾಗಿಲುಗಳನ್ನು ಅಳವಡಿಸಿದ್ದಾರೆ. ಕಟ್ಟಡದ ಮೇಲ್ಛಾವಣಿಗೆ ಮಂಗಳೂರು ಹೆಂಚ್ ಮತ್ತು ಮರದತೀರನ್ನು ಬಳಸಲಾಗಿದೆ. ಕಟ್ಟಡದಲ್ಲಿ ವಿಶೇಷವೆಂದರೆ, ಕಿಡಕಿ ಮತ್ತು ಬಾಗಿಲುಗಳ ಮೇಲ್ಭಾಗದಲ್ಲಿ ಕಮಾನುಗಳನ್ನು ಬಳಸಲಾಗಿದೆ. ಈ ಶಾಲಾ ಕಟ್ಟಡದ ಹಿಂಭಾಗದಲ್ಲಿರುವ ನೆಲಮಾಳಿಗೆಯು ಜಾನ್‌ಹ್ಯಾಂಡ್ಸ್ ಸ್ಥಾಪಿಸಿದ ಮುದ್ರಣಾಲಯವಿದೆ. ಪ್ರಸ್ತುತ ಈ ಕಟ್ಟಡವನ್ನು ಗ್ರಂಥಾಲಯವನ್ನಾಗಿ ಮಾಡಲಾಗಿದೆ. ಈ ಹಳೆಯ ಶಾಲಾ ಕಟ್ಟಡದ ಎಡ ಮತ್ತು ಬಲ ಭಾಗದಲ್ಲಿ ಹೊಸ ಕಟ್ಟಡಗಳು ನಿರ್ಮಾಣಗೊಂಡಿವೆ. ಕಟ್ಟಡದ ಮುಂಭಾಗ ಮತ್ತು ಹಿಂಭಾಗದಲ್ಲಿ ಆಟದ ಮೈದಾನವಿದೆ.

**ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಮೇನ್ - ಹರಪನಹಳ್ಳಿ**

ಹರಪನಹಳ್ಳಿಯ ಹಳೆಬಸ್‌ಸ್ಟ್ಯಾಂಡ್ ಹತ್ತಿರ ಪೂರ್ವದಿಕ್ಕಿಗೆ ಸುಮಾರು ೨೦೦ ಮೀಟರ್ ದೂರದಲ್ಲಿರುವ ಅಥವಾ ಪಟ್ಟಣದ ಮಧ್ಯಭಾಗದಲ್ಲಿರುವ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಮೇನ್ ಕ್ರಿ.ಶ. ೧೯೦೩ರಲ್ಲಿ ಸ್ಥಾಪಿತಗೊಂಡಿದೆ. ಈ ಶಾಲೆಯಲ್ಲಿ ಉನ್ನತ ವರ್ಗದ ವಿದ್ಯಾರ್ಥಿಗಳು ಮಾತ್ರ ಶಿಕ್ಷಣ ಪಡೆಯುತ್ತಿದ್ದರು. ಇಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಯಲ್ಲಿ ತರಗತಿಗಳು ನಡೆಯುತ್ತಿದ್ದವು ಎಂಬುದಕ್ಕೆ ಶಾಲೆಯಲ್ಲಿರುವ ಹಳೆಯ ಕಡತಗಳಿಂದ ದೃಢಪಟ್ಟಿದೆ. ಪ್ರಸ್ತುತ ಎಲ್ಲಾ ಸಮುದಾಯದ ವಿದ್ಯಾರ್ಥಿಗಳು ಕನ್ನಡ ಭಾಷೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಶಾಲೆಯ ಮುಖ್ಯೋಪಾಧ್ಯಾಯರಾದ ಕೆ.ಟಿ. ಜಗನ್ನಾಥ ಮತ್ತು ದಯಾನಂದ ಅವರು ಶಾಲೆಯಲ್ಲಿದ್ದ ಕೆಲವು ಮೂಲ ದಾಖಲೆಗಳು ಸುಟ್ಟು ಹೋಗಿವೆ ಎಂಬ ಅಭಿಪ್ರಾಯವನ್ನು ನೀಡಿದರು. ಹಳೆಯ ಕಟ್ಟಡದ ಶಾಲೆಯು ಉತ್ತಾರಾಭಿಮುಖವಾಗಿದ್ದು, ೨೩೯೮೦ ಚದರ ಅಡಿ ವಿಸ್ತೀರ್ಣದ ವಿಶಾಲವಾದ ಆಟದ ಮೈದಾನದ ಮಧ್ಯಭಾಗದಲ್ಲಿ ಏಳು ಕೊಠಡಿಗಳನ್ನೊಳಗೊಂಡಿದೆ. ಇದರ ತಳವಿನ್ಯಾಸವು "ಯು" ಆಕಾರದಲ್ಲಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ಕಟ್ಟಲ್ಪಟ್ಟಿದೆ.

ಕಟ್ಟಡಕ್ಕೆ ಕಲ್ಲು, ಗಾರೆ, ಇಟ್ಟಿಗೆ, ಕಬ್ಬಿಣ, ಸುಣ್ಣ, ಮರದ ತೀರು ಮತ್ತು ಮಂಗಳೂರು ಹೆಂಚನ್ನು ಬಳಸಿ ಕಟ್ಟಲಾಗಿದೆ. ಹಳೆಯ ಶಾಲೆಯ ಕಟ್ಟಡದ ಮತ್ತು ಬಲ ಭಾಗದಲ್ಲಿ ಹೊಸ ಶಾಲಾ ಕೊಠಡಿಗಳು ನಿರ್ಮಾಣಗೊಂಡಿವೆ.

**ಪ್ರಾಥಮಿಕ ತೆಲುಗು ಮತ್ತು ಉರ್ದು ಪಾಠ ಶಾಲೆ - ಆಲೂರು**

ಆಲೂರು ಪಟ್ಟಣದಲ್ಲಿ ಮಂಡಲ ಪರಿಷತ್ ಪ್ರಾಥಮಿಕ ತೆಲುಗು ಪಾಠಶಾಲೆ ಮತ್ತು ಪ್ರಾಥಮಿಕ ಉರ್ದು ಪಾಠ ಶಾಲೆಯು ಬಳ್ಳಾರಿಯಿಂದ ಆಲೂರು ಬಸ್‌ಸ್ಟ್ಯಾಂಡ್‌ಗೆ ಹೋಗುವ ಮಾರ್ಗದ ಬಲಭಾಗದಲ್ಲಿವೆ. ಮೂರು ಎಕರೆ ಭೂವಿಸ್ತೀರ್ಣದ ಆವರಣದಲ್ಲಿ ಈ ಎರಡು ಶಾಲೆಗಳು ೧೯೧೩ರಲ್ಲಿ ಪ್ರಾಥಮಿಕ ತೆಲುಗು ಪಾಠಶಾಲೆ ಹಾಗೂ ೧೯೩೦ರಲ್ಲಿ ಪ್ರಾಥರ್ಮಿಕ ಉರ್ದು ಶಾಲೆ ಸ್ಥಾಪಿತಗೊಂಡಿವೆ. ಪ್ರಾಥಮಿಕ ತೆಲುಗು ಪಾಠ ಶಾಲೆಯ ದಾಖಲಾತಿ ಸಂಖ್ಯೆ: ೨೩೧೬/೧೨/೧೯೧೩/ದಿನಾಂಕ ೨೮-೦೩-೧೯೧೩ರ ಬಳ್ಳಾರಿ ಜಿಲ್ಲಾ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿರುವ ಬರುವ ಈ ಶಾಲೆಯು ಪಶ್ಚಿಮಾಭಿಮುಖವಾಗಿದ್ದು, ಎರಡು ತರಗತಿ ಕೊಠಡಿಗಳನ್ನು ಒಳಗೊಂಡಿದೆ. ಈ ಶಾಲಾ ಕಟ್ಟಡದ ತಳವಿನ್ಯಾಸವು ಅಗಲಕ್ಕಿಂತ ಉದ್ದ ಹೆಚ್ಚಾಗಿದ್ದು, ಎರಡು ಅಡಿ ಎತ್ತರದ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದೆ. ಕೊಠಡಿಗಳ ಒಳಭಾಗಕ್ಕೆ ಸಾಕಷ್ಟು ಬೆಳಕು ಮತ್ತು ಗಾಳಿ ಒಳಸೂಸಿಲು ಹೆಚ್ಚು ಬಾಗಿಲುಗಳನ್ನು ಅಳವಡಿಸಲಾಗಿದೆ. ಹಾಗಾಗಿ ಪ್ರತಿಯೊಂದು ಕೊಠಡಿಗೆ ನಾಲ್ಕು ಬಾಗಿಲುಗಳಂತೆ ಎರಡು ಕೊಠಡಿಗಳಿಗೆ ಒಟ್ಟು ಎಂಟು ಬಾಗಿಲುಗಳನ್ನು ಅಳವಡಿಸುವುದು ಕಂಡುಬರುತ್ತದೆ. ಕಟ್ಟಡದ ಮೇಲ್ಛಾವಣಿಗೆ ಮರದ ತೀರುಗಳನ್ನು ಹಾಸಿ, ಅದರ ಮೇಲೆ ಮಂಗಳೂರು ಹೆಂಚ್‌ನ್ನು ಹೊದ್ದಿಸಲಾಗಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಿಸಿರುವುದು ಕಂಡುಬರುತ್ತದೆ. ಈ ಶಾಲೆಯ ಮೊದಲನೆಯ ಕೊಠಡಿಯ ಒಳಭಾಗದಲ್ಲಿ ಪೂರ್ವದಿಕ್ಕಿನ ಗೋಡೆಯ ಮೇಲೆ ಒಂದು ಭಿತ್ತಿಚಿತ್ರವಿದೆ. ಇದನ್ನು ಸ್ಥಳೀಯರು ಮತ್ತು ಶಿಕ್ಷಕರು ಇಂಗ್ಲೆಂಡಿನ ರಾಜ-ರಾಣಿ ಎಂದು ಹೇಳುತ್ತಾರೆ. ಆದರೆ, ಆ ಭಿತ್ತಿಚಿತ್ರವು ರಾಜ-ರಾಣಿಯ ಚಿತ್ರವಲ್ಲ, ಅದು ಕ್ರೈಸ್ತ ಮಿಷನರಿ ಮತ್ತು ಆತನ ಹೆಂಡತಿಯ ಚಿತ್ರ, ಏಕೆಂದರೆ, ಅವರು ತಲೆಗೆ ಹಾಕಿಕೊಂಡಿರುವ ಟೋಪಿಯ ಮೇಲ್ಭಾಗದಲ್ಲಿ ಯೇಸುವಿನ ಶಿಲುಬೆಯ ಚಿತ್ರವಿರುವುದರಿಂದ ಅವರು ಕ್ರೈಸ್ತರೇ ವಿನಃ ರಾಜ-ರಾಣಿಯ ಚಿತ್ರವಲ್ಲ ಎಂದು ಸ್ಪಷ್ಟಪಡಿಸುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಕ್ರೈಸ್ತ್‌ಮಿಷನರಿಗಳು ಕೊಟ್ಟ ಕೊಡುಗೆ ಅಪಾರವಾದದ್ದು. ಈ ಹಿನ್ನೆಲೆಯಲ್ಲಿ ಪ್ರಾಯಶಃ ಮಿಷನರಿಗಳು ಆಲೂರಿನಲ್ಲಿ ಎಲ್ಲಾ ಮಕ್ಕಳಿಗೆ ಸಾರ್ವತ್ರಿಕ ಶಿಕ್ಷಣವನ್ನು ಪಡೆಯುವುದಕ್ಕಾಗಿ ಮೊದಲು ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿದ್ದರು ಎಂಬುದು ಈ ಚಿತ್ರದಿಂದ ದೃಢಪಡುತ್ತದೆ. ಇವರ ಕಾಲಘಟ್ಟದ ಅವಧಿಯಲ್ಲಿ ಕ್ರೈಸ್ತ ದೇವಾಲಯಗಳು ನಗರದಲ್ಲಿ ಕಂಡುಬಂದಿಲ್ಲದೆ ಇರುವುದನ್ನು ಗುರುತಿಸಲಾಗಿದೆ. ಅವರು ಪ್ರಾಯಶಃ ಈ ಶಾಲೆಯಲ್ಲಿಯೇ ತಮ್ಮ ಸೇವೆಯನ್ನು ಸಲ್ಲಿಸಿದ್ದ ಸ್ಮರಣಾರ್ಥವಾಗಿ ಈ ಚಿತ್ರವನ್ನು ಬಿಡಿಸಿರಬಹುದು. ಆದರೆ, ಅವರ ಹೆಸರುಗಳು ಎಲ್ಲಿಯೂ ಕಂಡುಬಂದಿಲ್ಲ.

ಮಂಡಲ ಪರಿಷತ್ ಪ್ರಾಥಮಿಕ ಉರ್ದು ಪಾಠಶಾಲೆಯು ತೆಲುಗು ಶಾಲೆಯ ಪಶ್ಚಿಮ ದಿಕ್ಕಿನಲ್ಲಿ ಪೂರ್ವಾಭಿಮುಖವಾಗಿದೆ. ಇದು ಬಳ್ಳಾರಿ ಜಿಲ್ಲಾ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಈ ಶಾಲೆಯ ದಾಖಲಾತಿ ಸಂಖ್ಯೆ: ೩೬೬೦D/೧೨-೧೨-೧೯೩೦ರಂದು ಸ್ಥಾಪಿತಗೊಂಡಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚು ಮತ್ತು ಗಾರೆಯನ್ನು ಬಳಸಿ ಕಟ್ಟಲಾಗಿದೆ. ಈ ಶಾಲೆಯನ್ನು ಕೇವಲ ಮುಸ್ಲಿಂ ವಿದ್ಯಾರ್ಥಿಗಳಿಗಾಗಿ ಸ್ಥಾಪಿಸಲಾಗಿತ್ತು. ಪ್ರಸ್ತುತ ಈ ಎರಡು ಶಾಲೆಗಳ ಅಕ್ಕ-ಪಕ್ಕದಲ್ಲಿ ಹೊಸ ಶಾಲಾ ಕೊಠಡಿಗಳು ನಿರ್ಮಾಣಗೊಂಡಿವೆ.

**ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ - ಬೆಣ್ಣೆಹಳ್ಳಿ**

ಹರಪನಹಳ್ಳಿಯಿಂದ ಕೊಟ್ಟೂರಿಗೆ ಹೋಗುವ ಮಾರ್ಗದ ಹದಿಮೂರು ಕಿ.ಮೀ. ದೂರದಲ್ಲಿದ್ದ ಬೆಣ್ಣೆಹಳ್ಳಿಯು ಐತಿಹಾಸಿಕವಾಗಿ ಒಂದು ಚಿಕ್ಕ ಗ್ರಾಮ. ಗ್ರಾಮದ ಹಳೆಯ ಬಸ್‌ಸ್ಟ್ಯಾಂಡ್ ಹತ್ತಿರದ ರಸ್ತೆಯ ಬಲಭಾಗದಲ್ಲಿ ಉತ್ತರಾಭಿಮುಖವಾಗಿದೆ. ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯು ಎರಡು ಚಿಕ್ಕ ಕೊಠಡಿಗಳಲ್ಲಿ ಕ್ರಿ.ಶ. ೧೯೧೬ರಲ್ಲಿ ಸ್ಥಾಪನೆಯಾಗಿದೆ. ಈ ಶಾಲೆಯಲ್ಲಿ ಎಲ್ಲಾ ಸಮುದಾಯದವರು ಶಿಕ್ಷಣ ಪಡೆಯುತ್ತಿದ್ದರು ಎಂಬುದಕ್ಕೆ ಶಾಲೆಯಲ್ಲಿ ದಾಖಲೆಗೊಂಡಿರುವ ಕಡತಗಳಿಂದ ದೃಢಪಟ್ಟಿದೆ. ಬೆಣ್ಣೆಹಳ್ಳಿಯ ಮೂಲ ನಿವಾಸಿಯಾದ ಕೊಟ್ರಮ್ಮ ಎನ್ನುವರು ಭೂದಾನ ಅಡಿಯಲ್ಲಿ ಈ ಶಾಲೆಗೆ ೨೭.೬೩೦ ಚದರ ಅಡಿ ವಿಸ್ತೀರ್ಣ ಭೂಮಿಯನ್ನು ದಿನಾಂಕ: ೦೧-೦೧-೧೯೪೨ರಲ್ಲಿ ದಾನವಾಗಿ ನೀಡಿದ್ದಾರೆ ಎಂಬ ಮಾಹಿತಿಯನ್ನು ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಮತಿ ಆರ್. ಸರೋಜಮ್ಮ ಅವರಿಂದ ಪಡೆಯಲಾಗಿದೆ. ಪ್ರಸ್ತುತ ಈ ಶಾಲೆಯ ಹಿಂಭಾಗದಲ್ಲಿ ಹೊಸ ಶಾಲಾ ಕೊಠಡಿಗಳು ನಿರ್ಮಾಣಗೊಂಡಿವೆ.

**ಅರೆಬಿಕ್ ಕಲಾ ಶಾಲೆ**

ರಾಯದುರ್ಗ ಪಟ್ಟಣದಲ್ಲಿ ಅರೆಬಿಕ್ ಭಾಷೆಯಲ್ಲಿ ಸಮಗ್ರವಾಗಿ ಅಧ್ಯಯನ ಮಾಡುವುದಕ್ಕಾಗಿ ಮುಸ್ಲಿಂ ವಿದ್ಯಾರ್ಥಿಗಳಿಗೆ ವಿಶಿಷ್ಟ ಸೌಕರ್ಯಗಳನ್ನು ಈ ಅರೆಬಿಕ್ ಕಲಾ ಶಾಲೆಯಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಪ್ರಸ್ತುತ ರಾಯದುರ್ಗದ ಮಧ್ಯಭಾಗದಲ್ಲಿರುವ ಮಸೀದಿಯಲ್ಲಿ ಈ ಶಾಲೆಯು ಸ್ಥಾಪನೆಗೊಂಡಿದೆ ಎಂದು ಸ್ಥಳೀಯರ ಅಭಿಪ್ರಾಯ. “ಕ್ರಿ.ಶ. ೧೯೨೬ರಲ್ಲಿ ಅರೆಬಿಕ್ ಕಲಾ ಶಾಲೆಯನ್ನು ಶ್ರೀ ಮೌಲಾನ್ ಸಯ್ಯದ್ ಸಾಹೇಬ್‌ಗಾರು ಸ್ಥಾಪಿಸಿದರು”.[೨] ಪ್ರಸ್ತುತ ಈ ಶಾಲೆಯಲ್ಲಿ ಉರ್ದು, ಅರೆಬಿಕ್, ಪರ್ಷಿಯನ್, ಇಂಗ್ಲಿಷ್ ಭಾಷೆಯಲ್ಲಿ ತರಗತಿಗಳು ನಡೆಯುತ್ತಿದ್ದವು. ಪ್ರಸ್ತುತವೂ ಈ ಶಾಲೆಯು ಕಾರ್ಯನಿರ್ವಹಿಸುತ್ತಿದೆ.

ಈ ಕಲಾ ಶಾಲೆಯಲ್ಲಿ ಪ್ರತ್ಯೇಕ ಗ್ರಂಥಾಲಯವಿದೆ. ಇಸ್ಲಾಮಿಕ್ ಅಧ್ಯಯನ ಸಮರ್ಪಕವಾಗಿ ನಡೆಯಲಿ ಎನ್ನುವ ಉದ್ದೇಶದಿಂದ ಇದನ್ನು ಸ್ಥಾಪಿಸಲಾಗಿದೆ ಎಂದು ಗ್ರಂಥಪಾಲಕರು ಅಭಿಪ್ರಾಯವಾಗಿದೆ. ಈ ಹಿನ್ನೆಲೆಯಲ್ಲಿ ಉರ್ದು, ಅರೆಬಿಕ್, ಪರ್ಷಿಯನ್, ಇಂಗ್ಲಿಷ್, ತೆಲುಗು ಭಾಷೆಯಲ್ಲಿರುವ ಪುಸ್ತಕಗಳನ್ನು ಸಂಗ್ರಹಿಸಿ, ಸಂರಕ್ಷಣೆ ಮಾಡಲಾಗಿದೆ. ರಾಯದುರ್ಗದಲ್ಲಿ ಒಟ್ಟು ೧೩ ಪ್ರಾಥಮಿಕ, ಒಂದು ಕನ್ನಡ ಪಾಠ ಶಾಲೆಗಳಿದ್ದವು ಎಂದು ತಿಳಿದುಬಂದಿದೆ.

**ಸರಕಾರಿ ಪ್ರೌಢ ಶಾಲೆ - ಹರಪನಹಳ್ಳಿ**

ಬಳ್ಳಾರಿ ಜಿಲ್ಲೆಯ ಮೊದಲ ಪಾಠ ಶಾಲೆಯಾದ ವಾರ್ಡ್ಲಾ ಪ್ರೌಢಶಾಲೆಯು ಕ್ರಿ.ಶ. ೧೮೪೬ರಲ್ಲಿ ಸ್ಥಾಪನೆಯಾಗಿತ್ತು. ಇದನ್ನರಿತ ಹರಪನಹಳ್ಳಿಯ ಬುದ್ಧಿಜೀವಿಗಳು ನಮಗೆ ಒಂದು ಪ್ರಾಥಮಿಕ ಶಾಲೆಯನ್ನು ಮಂಜೂರು ಮಾಡಬೇಕೆಂದು ಮನವಿ ಪತ್ರವನ್ನು ಮಾನ್ಯ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ್ದರು. ಈ ಪತ್ರವನ್ನು ಪರಿಶೀಲಿಸಿದ ಜಿಲ್ಲಾಧಿಕಾರಿಗಳಿಗೆ ಸಲ್ಲಿಸಿದ್ದರು. ಈ ಪತ್ರವನ್ನು ಪರಿಶೀಲಿಸಿದ ಜಿಲ್ಲಾಧಿಕಾರಿಗಳು ಕ್ರಿ.ಶ. ೧೮೮೧ರಲ್ಲಿ ಹರಪನಹಳ್ಳಿ ಪಟ್ಟಣಕ್ಕೆ ಒಂದು ಪ್ರಾಥಮಿಕ ಶಾಲೆಯನ್ನು ಮಂಜೂರು ಮಾಡಿದರು. ಈ ಶಾಲೆಗೆ ಆರಂಭದಲ್ಲಿ ಯಾವುದೇ ಶಾಲಾ ಕೊಠಡಿಯಾಗಲಿ, ಪ್ರತ್ಯೇಕ ಭೂಮಿಯಾಗಲಿ ಇರಲಿಲ್ಲ. ಇಂತಹ ಸಂದರ್ಭದಲ್ಲಿ ಸ್ಥಳೀಯರ ಹಾಗೂ ವಿದ್ವಾಂಸರ ಸಹಕಾರದಿಂದ ೧೮೮೧ರಿಂದ ೧೯೧೧ರವರೆಗೆ ಶಾಲೆಯ ತರಗತಿಗಳು ಗುಡಿಕೇರಿಯಲ್ಲಿದ್ದ ಮಾಗಳದವರ ಮನೆಯಲ್ಲಿ ನಡೆಯುತ್ತಿದ್ದವು. ನಂತರ ಕೆಲವು ದಿನಗಳ ಕಾಲ ವೀರಣ್ಣನ ಗುಡಿಯಲ್ಲಿ ಹಾಗೂ ಹೋಟಲ್ ಕೃಷ್ಣಪ್ಪನ ಮನೆಯಲ್ಲಿ ನಡೆಯುತ್ತಿದ್ದವು. ಶಾಲೆಗೆ ಮೊದಲ ಪ್ರಧಾನ ಗುರುಗಳಾಗಿ ಶ್ರೀ ವಿಠ್ಠಲ್ ಪಂತ ಅವರು ಆಗಮಿಸಿದ್ದರು. ಇವರ ಜೊತೆಗಿದ್ದ ಮಡದಿಯೂ ಕೂಡ ಮಕ್ಕಳಿಗೆ ಪಾಠವನ್ನು ಹೇಳಿಕೊಡುತ್ತಿದ್ದಳು. ಇದನ್ನು ಅರಿತ ಜಿಲ್ಲಾಧಿಕಾರಿಗಳು ಕಟ್ಟಡದ ನಿರ್ಮಾಣಕ್ಕಾಗಿ ಹಣ ಮಂಜೂರು ಮಾಡಿದ್ದರು. ಇದರ ಜೊತೆಗೆ ಸ್ಥಳೀಯರು ಸಂಗ್ರಹಿಸಿದ್ದ ಹಣದಿಂದ ಶಾಲಾ ಕಟ್ಟಡವನ್ನು ಹೊಸಪೇಟೆಯ ಅಸಿಸ್ಟೆಂಟ್ ಕಲೆಕ್ಟರ್ ಆಗಿದ್ದ ಡಬ್ಲ್ಯೂ.ಇ. ಜಾರ್ಡಿನ್ ಅವರು ೩೦ನೆಯ ಜೂನ್ ೧೯೧೧ರಲ್ಲಿ ಶಿಲಾನ್ಯಾಸ ನೆರವೇರಿಸಿದ್ದರು ಎಂಬುದಕ್ಕೆ ಶಾಲೆಯ ಪ್ರವೇಶದ ಬಾಗಿಲನ ಎಡಭಾಗದ ಶಿಲಾಫಲಕದಲ್ಲಿರುವ ಲಿಪಿಯಿಂದ ತಿಳಿಯಲ್ಪಟ್ಟಿದೆ. ೧೯೧೧ರ ಕ್ರಿಯಾಯೋಜನೆಯಲ್ಲಿ ಕಟ್ಟಡದ ಕಾಮಗಾರಿಕೆ ೪೦,೦೦೦ ಸಾವಿರ ರೂಪಾಯಿಗಳು[೯೩] ಅನುಮೋದನೆ ನೀಡಿ, ಟೆಂಡರ್ ಕರೆದು, ಇಂಜನಿಯರಾದ ಶ್ರೀ ಸುಲಿವಾನ್ ಎಂಬುವರಿಗೆ ಗುತ್ತಿಗೆಯನ್ನು ನೀಡಲಾಗಿತ್ತು. ಈ ಕಟ್ಟಡವನ್ನು ಬಳ್ಳಾರಿ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದು ಶ್ರೀ ಗೋಪಾಲಸ್ವಾಮಿ ಮೊದಲಿಯಾರ್ ಅವರು ದಿನಾಂಕ ೧೬-೦೬-೧೯೨೫ರಲ್ಲಿ ಶಾಲಾ ಕಟ್ಟಡದ ಪ್ರಾರಂಭೋತ್ಸವನ್ನು ನೆರವೇರಿಸಿದ್ದರು ಎಂಬುದಕ್ಕೆ ಗಾಂಧೀಜಿ ವಿಶ್ರಾಂತಿ ಪಡೆದಿದ್ದ ಕೊಠಡಿಯ ಬಾಗಿಲನ ಎಡಭಾಗದ ಶಿಲಾಫಲಕದಲ್ಲಿರುವ ಲಿಪಿಯಿಂದ ದೃಢಪಟ್ಟಿದೆ.

ಶಾಲೆಯ ಒಟ್ಟು ವಿಸ್ತೀರ್ಣ: ೨.೬೪ ಎಕರೆಯನ್ನು ಒಳಗೊಂಡಿದೆ. ಸರ್ವೇ. ನಂ. ೧೫೩ರಲ್ಲಿ ೩೬ ಸೆಂಟ್ಸ್‌ನ ವಿಸ್ತೀರ್ಣದಲ್ಲಿ ಪ್ರೆಸಿಡೆಂಟ್ ಡಿಸ್ಟ್ರಿಕ್ ಬೋರ್ಡ್ ಕಟ್ಟಡವಿದೆ. ಸರ್ವೇ ನಂ. ೧೫೪(ಎ)ರಲ್ಲಿ ಒಂದು ಎಕರೆ ಹದಿನಾಲ್ಕು ಸೆಂಟ್ಸ್‌ನ ಭೂಮಿಯನ್ನು ಒತ್ತುವರಿ ಮಾಡಿರುವರು. ಸರ್ವೇ ನಂ. ೬೫೫ರಲ್ಲಿ ಮೂರು ಎಕರೆ ಅರವತ್ತೆಂಟು ಸೆಂಟ್ಸ್‌ನಲ್ಲಿ ಹೈಸ್ಕೂಲ್ ಆಟದ ಮೈದಾನವಿದೆ. ಸರ್ವೇ ನಂ. ೬೯೯ರಲ್ಲಿ ಎರಡು ಎಕರೆ ಹತ್ತೊಂಬತ್ತು ಸೆಂಟ್ಸ್‌ನಲ್ಲಿ ಸರಕಾರಿ ಹೈಸ್ಕೂಲ್ ಕಟ್ಟಡವಿದೆ.[೯೪]

**ಶಾಲೆಯ ಕೊಠಡಿಗಳು :** ೧೮೯೧ರಿಂದ ೧೯೨೫ರವರೆಗೆ ಈ ಶಾಲೆಯಲ್ಲಿ ತರಗತಿಗಳು ಕೇವಲ ೧೮ ಕೊಠಡಿಗಳಲ್ಲಿ ಮಾತ್ರ ನಡೆಯುತ್ತಿದ್ದವು. ೧೯೨೫ರಿಂದ ೧೯೩೩ರ ಕಾಲಾವಧಿಯಲ್ಲಿ ೧೧ ಕೊಠಡಿಗಳು ನಿರ್ಮಾಣಗೊಂಡಿದ್ದವು. ಸ್ವಾತಂತ್ರ್ಯದ ಪೂರ್ವದಲ್ಲಿ ಒಟ್ಟು ೨೯ ಕೊಠಡಿಗಳಲ್ಲಿ ತರಗತಿಗಳು ನಡೆಯುತ್ತಿದ್ದವು. ಪ್ರಸ್ತುತ ಪ್ರೌಢಶಾಲಾ ವಿಭಾಗ ಮತ್ತು ಕಾಲೇಜು ವಿಭಾಗವು ಒಟ್ಟು ೫೭ ಕೊಠಡಿಗಳನ್ನು ಒಳಗೊಂಡಿವೆ. ಶಾಲೆಯ ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಕಬ್ಬಿಣ, ಸುಣ್ಣ, ಮಂಗಳೂರು ಹೆಂಚು ಹಾಗೂ ಮರದ ತೀರನ್ನು ಬಳಸಿ ನಿರ್ಮಿಸಿದ್ದಾರೆ.

ಮಹಾತ್ಮಗಾಂಧೀಜಿಯವರು ಹರಿಜನ್ನೋದ್ಧಾರಕ್ಕಾಗಿ ಹಾಗೂ ಯುವಕರಲ್ಲಿ ರಾಷ್ಟ್ರೀಯತೆಯನ್ನು ಜಾಗೃತಿ ಮೂಡಿಸುವ ಸಲುವಾಗಿ ದಾವಣಗೆರೆಯಿಂದ ಬಳ್ಳಾರಿ ಮಾರ್ಗವಾಗಿ ಸಂಚಾರವನ್ನು ಆರಂಭಿಸಿದ ಸಂದರ್ಭದಲ್ಲಿ ದಿನಾಂಕ: ೦೨-೦೩-೧೯೩೪ರಂದು ಹರಪನಹಳ್ಳಿಯ ಜಿಲ್ಲಾ ಬೋರ್ಡ್ ಪ್ರೌಢ ಶಾಲೆಯ ಒಂದು ಕೋಣೆಯಲ್ಲಿ ವಾಸ್ತವ್ಯ ಮಾಡಿದ್ದರು. ಪ್ರಸ್ತುತ ಈ ಕೊಠಡಿಯ ಒಳಗೆ ಯಾರು ಕೂಡ ಪಾದರಕ್ಷೆಯನ್ನು ಧರಿಸಿ ಒಳಪ್ರವೇಶಿಸುವುದಿಲ್ಲ. ಕಾಲೇಜಿನ ಉಪಪ್ರಾಂಶುಪಾಲರಾದ ಶ್ರೀಯುತ ಕುಬೇಂದ್ರ ನೆಕ್ಕಪ್ಪ ಅವರು ನಮ್ಮ ಶಾಲೆಯಲ್ಲಿ ಗಾಂಧೀಜಿ ವಿಶ್ರಾಂತಿ ಪಡೆದಿದ್ದ ಕೊಠಡಿಯನ್ನು ಮುಂದಿನ ದಿನಗಳಲ್ಲಿ ವಸ್ತುಸಂಗ್ರಹಾಲಯವನ್ನಾಗಿ ಮಾಡುತ್ತೇವೆ ಎಂಬ ಅಭಿಪ್ರಾಯವನ್ನು ನಾನು ಕ್ಷೇತ್ರಕಾರ್ಯದಲ್ಲಿ ಪಡೆಯಲಾಗಿದೆ.

**ಧರ್ಮಶಾಲೆ - ರಾಯದುರ್ಗ**

ರಾಯದುರ್ಗ ಹಳೆಯ ಬಸ್‌ಸ್ಟ್ಯಾಂಡ್ ಪಕ್ಕದಲ್ಲಿ ಇಂಗ್ಲೆಂಡಿನ ವಿಕ್ಟೋರಿಯಾ ರಾಣಿಯ ನೆನಪಿಗಾಗಿ ೧೮೯೧ರಲ್ಲಿ ವಿಕ್ಟೋರಿಯಾ ಜೂಬ್ಲಿಯಾ ಧರ್ಮಶಾಲೆಯು ಸ್ಥಾಪನೆಗೊಂಡಿದೆ. ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ನಾಲ್ಕು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ಕಲ್ಲು, ಗಾರೆ, ಇಟ್ಟಿಗೆ, ಮರದ ತೀರು, ಹಾಸುಬಂಡೆಗಳನ್ನು ಬಳಸಿ, ಉತ್ತರಾಭಿಮುಖವಾಗಿ ನಿರ್ಮಿಸಲಾಗಿದೆ. ಕಟ್ಟಡವು ಆರು ತರಗತಿಗಳಿಗೆ ಕೊಠಡಿಗಳು, ಒಂದು ಅಧ್ಯಾಪಕರ ಕೊಠಡಿ, ಮತ್ತೊಂದು ಶಾಲಾ ಕಡತಗಳ ಕೊಠಡಿ ಒಟ್ಟು ಎಂಟು ಕೊಠಡಿಗಳನ್ನು ಒಳಗೊಂಡಿದೆ. ಪ್ರತಿಯೊಂದು ಕೊಠಡಿಯು ವಿಶಾಲವಾಗಿದ್ದು, ವಿದ್ಯಾರ್ಥಿಗಳಿಗೆ ಅನುಕೂಲವಾಗುವ ಹಾಗೆ ನಿರ್ಮಿಸಲಾಗಿದೆ. ಕಟ್ಟಡದ ಮೇಲ್ಛಾವಣಿಯು ಕಾಂಕ್ರೀಟಿನ ಅಂದವಾದ ಇಳಿಜಾರು ತಾರಸಿ ಕಟ್ಟಡ. ಇದಕ್ಕೆ ಹೊಂದಿಕೊಂಡಂತೆ ಮುಂಭಾಗದಲ್ಲಿ ವಿಶ್ರಾಂತಿ ಪಡೆಯುವುದಕ್ಕಾಗಿ ವರಾಂಡವಿದೆ. ಪ್ರಸ್ತುತ ಈ ಶಾಲೆಯು ಪದವಿಪೂರ್ವ ಕಾಲೇಜ್ ಆಗಿ ಸಂಯೋಜನೆಗೊಂಡಿರುವುದರಿಂದ ಇಲ್ಲಿ ೮ ರಿಂದ ೧೨ನೆಯ ತರಗತಿಯವರೆಗೆ ತೆಲುಗು ಭಾಷೆಯಲ್ಲಿ ಶಿಕ್ಷಣವನ್ನು ನೀಡಲಾಗುತ್ತಿದೆ.

**ಸ್ತ್ರೀ ಶಿಕ್ಷಣ**

ಹೆಣ್ಣು ಮಕ್ಕಳಿಗೆ ಶಿಕ್ಷಣ ಒದಗಿಸುವ ಮಹತ್ತರ ಕ್ರಾಂತಿಕಾರಿ ಯೋಜನೆ ಪ್ರಾರಂಭಿಸಿ, ಯಶಸ್ಸು ಪಡೆದವರು ಮಿಷನರಿಗಳು. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ

ಭಾರತದ ಶ್ರೀಮಂತ ಕುಟುಂಬಗಳ ಕೆಲವು ಸದಸ್ಯರು, ತಮ್ಮ ಭೂಮಿ-ಕಾಣಿಕೆಯ ಉಸ್ತುವಾರಿ ನೋಡಿಕೊಳ್ಳುವ ಕಾರಣಗಳಿಂದಾಗಿ ಮತ್ತು ಕ್ರೈಸ್ತ ಮಿಷನರಿಗಳು ತಮ್ಮ ಮತ ಪ್ರಚಾರವನ್ನು ನಡೆಸುವ ಧಾರ್ಮಿಕ ಉತ್ಸಾಹದಿಂದ ಪ್ರಚೋದಿತರಾಗಿ, ಸ್ತ್ರೀ ಶಿಕ್ಷಣದಲ್ಲಿ ಆಸಕ್ತಿವಹಿಸಿದರು. ಸಮಾಜದ ಸಂಪ್ರದಾಯಬದ್ಧ ಗುಂಪಿನ ಬಹುಮಟ್ಟಿನ ಸದಸ್ಯರು ಇದನ್ನು ವಿರೋಧಿಸುತ್ತಿದ್ದರು. ಇದರ ಪರವಾಗಿದ್ದ ಪ್ರಬುದ್ಧ ಸಾರ್ವಜನಿಕ ಅಭಿಪ್ರಾಯವೂ ಬೆಳೆಯುತ್ತಿತ್ತು. ಹಾಗೆ ನೋಡಿದ್ದಲ್ಲಿ ಹತ್ತೊಂಬತ್ತನೆಯ ಶತಮಾನದ ಮಧ್ಯದವರೆಗೆ ಸ್ತ್ರೀ ಶಿಕ್ಷಣದ ಕ್ಷೇತ್ರದಲ್ಲಿ ಆದ ಸಾಧನೆ ಅತಿ ಕಡಿಮೆ. ಅನಂತರ ಸಾಮಾಜಿಕ ಸುಧಾರಣೆಗಳಿಗಾಗಿ ನಡೆದ ಆಧುನಿಕ ಚಳವಳಿಗಳಿಂದ ಸ್ತ್ರೀ ಶಿಕ್ಷಣಕ್ಕೆ ಸಾಕಷ್ಟು ಪ್ರೋತ್ಸಾಹ ದೊರೆಯಿತು. ಇದರಿಂದ ಸ್ತ್ರೀ ಶಿಕ್ಷಣ ಹೆಚ್ಚು ಪ್ರಾಶಸ್ತ್ಯ ಪಡೆದುಕೊಂಡಿದೆ.

**ಸರ್ಕಾರಿ ಹಿರಿಯ ಪ್ರಾಥಮಿಕ ಬಾಲಕಿಯರ ಪಾಠ ಶಾಲೆ - ಉಜ್ಜನಿ**

ಕ್ರಿ.ಶ. ೧೯೧೮ರಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಬಾಲಕಿಯರ ಪಾಠಶಾಲೆಯನ್ನು ಸ್ಥಾಪಿಸಿದ ಕೀರ್ತಿ ಬ್ರಿಟಿಷರಿಗೆ ಸಲ್ಲುತ್ತದೆ. ಏಕೆಂದರೆ, ಇಲ್ಲಿರುವ ಮರಳುಸಿದ್ದೇಶ್ವರ ಮಠದಲ್ಲಿ ಕೇವಲ ಉನ್ನತ ವರ್ಗದ ಮಕ್ಕಳಿಗಾಗಿ ಶಿಕ್ಷಣ ಪಡೆಯುವ ಅವಕಾಶ ಇದ್ದಿರಬಹುದು. ಇದರಿಂದ ಪ್ರಾಯಶಃ ತಳಸಮುದಾಯದ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿಲ್ಲದಿರುವುದು ಕಂಡುಬರುತ್ತದೆ. ಇದನ್ನು ಗಮನಿಸಿದ ಬ್ರಿಟಿಷರು ಇಲ್ಲಿ ಸಾರ್ವತ್ರಿಕವಾಗಿ ಎಲ್ಲಾ ವರ್ಗದ ಹೆಚ್ಚು ಹೆಚ್ಚು ಶಿಕ್ಷಣ ಪಡೆಯುವಂತಾಗಲಿ ಎಂಬ ಉದ್ದೇಶದಿಂದ ಈ ಶಾಲೆಯನ್ನು ಆರಂಭಿಸಿದರು. ಪ್ರಸ್ತುತ ಇದು ಪೊಲೀಸ್ ಠಾಣೆಯ ಪಕ್ಕದಲ್ಲಿದ್ದು, ಕಟ್ಟಡದ ಮೇಲ್ಚಾವಣಿಯು ಬಿದ್ದ ಕಾರಣಕ್ಕಾಗಿ ಈ ಶಾಲೆಯನ್ನು ಹೊಸ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ. ಅಲ್ಲಿ ಕೇವಲ ಒಂದು ಶಿಲಾಫಲಕವಿದೆ. ಅದರಲ್ಲಿ ಶಾಲೆಯು ಆರಂಭವಾದ ದಿನಾಂಕ ಮತ್ತು ಬಾಲಕಿಯರ ಹಿರಿಯ ಪ್ರಾಥಮಿಕ ಶಾಲೆ ಎಂಬ ಉಲ್ಲೇಖವಿದೆ.

**ಬಾಲಕಿಯರ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ**

ಹರಪನಹಳ್ಳಿ ತಾಲೂಕಿನಲ್ಲಿ ಮೊಟ್ಟ ಮೊದಲು ಹೆಣ್ಣು ಮಕ್ಕಳ ಶಾಲೆಯು ೧೯೨೧ರಲ್ಲಿ ಆರಂಭವಾಯಿತು. ಇದು ಹಳೆಯ ತಾಲೂಕು ಕಛೇರಿಯ ಎದುರುಗಡೆ ಪೂರ್ವಾಭಿಮುಖವಾಗಿದೆ. ಬಾಲಕಿಯರ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ಆರಂಭದ ಮುಖ್ಯೋಪಾಧ್ಯಾಯರಾಗಿದ್ದ ಶ್ರೀಮತಿ ಕೆ. ಲಕ್ಷ್ಮಮ್ಮ ಅವರ ನಾಯಕತ್ವದಲ್ಲಿ ದಿನಾಂಕ: ೦೧-೦೪-೧೯೨೧ರಲ್ಲಿ ಒಂದು ಚಿಕ್ಕ ಕೊಠಡಿಯಲ್ಲಿ ಶಾಲೆಯು ಪ್ರಾರಂಭಗೊಂಡಿತ್ತು. ದಿನಾಂಕ: ೨೯-೦೩-೧೯೩೦ರಲ್ಲಿ ಬಳ್ಳಾರಿ ಡಿಸ್ಟ್ರಿಕ್ಟ್ ಬೋರ್ಡ್ ಪ್ರೆಸಿಡೆಂಟ್ ಆಗಿದ್ದ ದಿವಾನ್ ಬಹದ್ದೂರ್ ಎಂ. ಗೋಪಾಲಸ್ವಾಮಿ ಮೊದಲಿಯರಂ ಹಾಗೂ ಹರಪನಹಳ್ಳಿ ತಾಲೂಕು ಪ್ರೆಸಿಡೆಂಟಂ ಆಗಿದ್ದ ಕೆ. ಶಾಂತಪ್ಪ ಅವರ ಹಸ್ತಾಕ್ಷರದಿಂದ ಆರು ಕೊಠಡಿಗಳನ್ನೊಳಗೊಂಡಿದ್ದ ಬಾಲಕಿಯರ ಶಾಲೆಯನ್ನು ಉದ್ಘಾಟಿಸಿದ್ದಾರೆ. ಈ ಮಾಹಿತಿಯು ಶಾಲೆಯ ಹಳೆಯ ಕೊಠಡಿಯ ಪಶ್ಚಿಮ

ದಿಕ್ಕಿನ ಬಾಗಿಲಿನ ಬಲಭಾಗದ ಗೋಡೆಯಲ್ಲಿರುವ ಶಿಲಾಫಲಕದಲ್ಲಿರುವ ಬರಹದಿಂದ ದೃಢಪಟ್ಟಿದೆ. ಅದರಲ್ಲಿ ಶಾಲೆಯ ಆರಂಭವಾದ ದಿನಾಂಕ ಮತ್ತು ಶಾಲಾ ಕಟ್ಟಡವನ್ನು ಕಟ್ಟಿಸಿದ್ದ ಎಂ. ಅಬ್ದುಲಂ ಜಬ್ಬರ್ ಎಂಬ ಗುತ್ತಿಗೆದಾರನ ಹೆಸರಿದೆ. ಅದು ಈ ಕೆಳಗಿನಂತಿದೆ.

Opened by
dewan Bahadur
M. Gopalswami Mudaliar. AVL., B.A., B.L.
President District Board
Bellary
on 29th March 1930
K. Santhappa, President Taluk Board
M. Abdual Jabbar Contractor.

ಈ ಶಾಲೆಯ ಕಟ್ಟಡ ಮತ್ತು ಶಾಲಾ ಆವರಣವು ಆರಂಭದಲ್ಲಿ ತಾಳೆನಹಳ್ಳಿ ಹಿರಿಯಮ್ಮ ಗಂಡ ಹೊನ್ನಪ್ಪ ಎಂಬುವವರ ಹೆಸರಿನಲ್ಲಿತ್ತು. ಇದನ್ನು ಹರಪನಹಳ್ಳಿಯ ವರ್ತಕರಾಗಿದ್ದ ಕೊಟ್ಟಿಗಿ ಕರಿಬಸಪ್ಪ ಅವರು ವಿದ್ಯಾದಾನ ಮತ್ತು ಭೂದಾನದ ಅಡಿಯಲ್ಲಿ ಕ್ರಿ.ಶ. ೧೯೫೬ರಲ್ಲಿ ರಾಜ್ಯಾಪಾಲರು(ರಾಜಪ್ರಮುಖರ) ಹೆಸರಿಗೆ ೩೦೦ ರೂಪಾಯಿಗೆ ಭೂಮಿಯನ್ನು ಖರೀದಿಸಿ, ಅದನ್ನು ದಾನ ಕೊಟ್ಟಿರುವುದರಿಂದ ಶಾಲೆಯು ಕೂಲಹಳ್ಳಿ ಕಂದಾಯ ಗ್ರಾಮ, ಎರಡೆತ್ತಿನಹಳ್ಳಿಯ ವ್ಯಾಪ್ತಿಗೆ ಒಳಪಟ್ಟಿತ್ತು. ಶಾಲೆಯ ವಿಸ್ತೀರ್ಣ: ಸರ್ವೆ ನಂ. ೫೮೩/ಬಿನಲ್ಲಿ ೨೬೮x೧೫೨=೪೦೭೩೬ ಚದರ ಅಡಿ ಇದೆ. ಕಟ್ಟಡವನ್ನು ಬಹಳ ಸರಳವಾಗಿ ಕಲ್ಲು, ಇಟ್ಟಿಗೆ, ಮರದ ತೀರು, ಗಾರೆ, ಸುಣ್ಣ, ಮಂಗಳೂರು ಹೆಂಚ್ ಮತ್ತು ಸಿಮೆಂಟ್‌ನ್ನು ಬಳಸಿ ಕಟ್ಟಿದ್ದಾರೆ. ಈ ಮಾಹಿತಿಯನ್ನು ಶಾಲೆಯ ಸಹಶಿಕ್ಷಕರಾದ ಹೆಚ್. ಕೃಷ್ಣಪ್ಪ ಅವರಿಂದ ಪಡೆಯಲಾಗಿದೆ.

**ಮುನಿಸಿಪಲ್ ಹೈಸ್ಕೂಲ್ - ಬಳ್ಳಾರಿ**

ಬಳ್ಳಾರಿ ನಗರದ ಸಂಗಮ ಬಸ್‌ಸ್ಟ್ಯಾಂಡ್ ಬಳಿ ಇರುವ ಮುನಿಸಿಪಲ್ ಹೈಸ್ಕೂಲ್ ೧೯೨೭ರಲ್ಲಿ ಸ್ಥಾಪಿತಗೊಂಡಿದೆ. ಇದು ಆರಂಭದಿಂದಲೂ ಬಡ - ಕುಟುಂಬಗಳ ವಿದ್ಯಾರ್ಥಿಗಳಿಗಾಗಿ ಹೆಚ್ಚು ಮನ್ನಣೆಯನ್ನು ಉಳಿಸಿಕೊಂಡು ಬಂದಿದೆ ಎಂದು ಕಾಲೇಜಿನ ಪ್ರಾಂಶುಪಾಲರಾದ ಕೆ. ತಿಮ್ಮಪ್ಪ ಅವರ ಅಭಿಮತ. ಹೈಸ್ಕೂಲ್‌ಗಾಗಿ ನಿರ್ಮಾಣಗೊಂಡ ಹಳೆಯ ೧೫ ಕೊಠಡಿಗಳು ವಿಶಾಲವಾಗಿದ್ದು, ಅವುಗಳಿಗೆ ಗಾಳಿ - ಬೆಳಕು ಒಳಸೂಸಲು ಹೆಚ್ಚು ಹೆಚ್ಚು ಕಿಟಕಿ - ಬಾಗಿಲುಗಳನ್ನು ಅಳವಡಿಸಲಾಗಿದೆ. ಈ ಕೊಠಡಿಗಳ ಮೇಲ್ಛಾವಣಿಯು ಮಂಗಳೂರು ಹೆಂಚ್‌ನ್ನು ಬಳಸಿ ನಿರ್ಮಾಣ ಮಾಡಲಾಗಿತ್ತು. ಆದರೆ, ಪ್ರಸ್ತುತ ಅದನ್ನು ತೆಗೆದು ಕಾಂಕ್ರಿಟ್ ಮೇಲ್ಛಾವಣಿಯನ್ನಾಗಿ ನವೀಕರಣ ಮಾಡಲಾಗುತ್ತಿದೆ. ಈ ಶಾಲೆಯು ನಂತರ ದಿನಗಳಲ್ಲಿ ಮಾಜಿ ಪುರಸಭೆ ಕಾಲೇಜ್ ಆಗಿರುವುದರಿಂದ ಇಲ್ಲಿ ತರಗತಿಗಳ ಕೊಠಡಿ ಲಭ್ಯತೆ ಇಲ್ಲದಿರುವ ಸಂದರ್ಭದಲ್ಲೂ ಕಾಲೇಜಿಗೆ ದಾಖಲಾಗಲು ವಿದ್ಯಾರ್ಥಿಗಳ ನೂಕು ನುಗ್ಗಲು ಇಲ್ಲಿ ಕಾಣುವ ಪ್ರತಿವರ್ಷದ ವಿದ್ಯಾಮಾನ.

**ಮುನಿಸಿಪಲ್ ಹೈಸ್ಕೂಲ್ - ಹೊಸಪೇಟೆ**

ಮುನಿಸಿಪಲ್ ಹೈಸ್ಕೂಲ್ ಹೊಸಪೇಟೆಯ ಚಿತ್ತವಾಡಗಿ ಬಡಾವಣೆಯಲ್ಲಿದೆ. ಈ ಶಾಲೆಯು ೧೯೩೫ರಲ್ಲಿ ಮದ್ರಾಸ್ ಸರಕಾರದ ಗೌವರ್ನರ್ ಆಗಿದ್ದ ಜಾರ್ಜ್ ಸ್ಟ್ಯಾನ್ಲಿ, ಬಳ್ಳಾರಿ ಜಿಲ್ಲಾ ಕಲೆಕ್ಟರ್ ಆಗಿದ್ದ ಟಿ. ಭಾಸ್ಕರ್‌ರಾವ್ ಮತ್ತು ಹೊಸಪೇಟೆಯ ಮುನಿಸಿಪಲ್ ಅಧ್ಯಕ್ಷರಾಗಿದ್ದ ಆರ್. ನಾಗನಗೌಡ ಅವರ ಸಮ್ಮುಖದಲ್ಲಿ ಸ್ಥಾಪಿಸಲ್ಪಟ್ಟಿದೆ. ಶಾಲಾಕಟ್ಟಡದ ನಿರ್ಮಾಣವನ್ನು ಹೊಸಪೇಟೆಯ ಗುತ್ತಿಗೆಗಾರರಾದ ಎ.ಡಿ. ಟ್ಯಾಂಡಿ ಅವರಿಗೆ ನೀಡಲಾಗಿತ್ತು. ಕಟ್ಟಡವು ಪೂರ್ವಾಭಿಮುಖವಾಗಿದ್ದು, ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಿಸಲಾಗಿದೆ. ತರಗತಿಯ ಕೊಠಡಿಗಳು ವಿಶಾಲವಾಗಿದ್ದು, ಅವುಗಳ ಒಳಭಾಗಕ್ಕೆ ಗಾಳಿ-ಬೆಳಕು ಒಳಸೂಸಲು ಹೆಚ್ಚು ಹೆಚ್ಚು ಕಿಟಕಿ ಮತ್ತು ಬಾಗಿಲುಗಳನ್ನು ಅಳವಡಿಸಲಾಗಿದೆ. ಶಾಲಾ ಕಟ್ಟಡದ ಪ್ರವೇಶ ದ್ವಾರದ ಮೇಲ್ತುದಿಯ ಎಡ - ಬಲ ಬದಿಯಲ್ಲಿ ಇಂಗ್ಲೆಂಡಿನ ಲಾಂಛನವನ್ನು ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಮುಂಭಾಗದಲ್ಲಿ ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಗಳಿಗಾಗಿ ಕ್ರೀಡಾ ಆವರಣವು ವಿಶಾಲವಾಗಿದೆ. ಕಟ್ಟಡಕ್ಕೆ ಕಲ್ಲು, ಗಾರೆ, ಸುಣ್ಣ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚು ಇತ್ಯಾದಿ ಸಲಕರಣೆಗಳನ್ನು ಬಳಸಿ, ನಿರ್ಮಿಸಿರುವುದು ಕಂಡುಬರುತ್ತದೆ.

**೩.೭. ಸಾರ್ವಜನಿಕ ಕಟ್ಟಡಗಳು**

ದೇಶಿಯರಿಗೂ ಹಾಗೂ ವಿದೇಶಿಯರಿಗೆ ಅನುಕೂಲವಾಗುವಂತೆ ಆಸ್ಪತ್ರೆಗಳು, ಪರಿವೀಕ್ಷಣಾ ಮಂದಿರಗಳು, ಗ್ರಂಥಾಲಯಗಳು, ತುಂಗಭದ್ರಾ ಅಣೆಕಟ್ಟು ಸಂಪರ್ಕಕ್ಕಾಗಿ ರಸ್ತೆ - ಸೇತುವೆಗಳನ್ನು ನಿರ್ಮಿಸಿಕೊಂಡಿದ್ದರು. ಇದರ ಜೊತೆಗೆ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸಿದ ಬ್ರಿಟಿಷ್ ಅಧಿಕಾರಿಗಳ ಸಮಾಧಿಗಳು ಕಂಡುಬಂದಿವೆ. ಅವುಗಳ ವಿವರ ಈ ಕೆಳಗಿನಂತಿವೆ.

**ಆಸ್ಪತ್ರೆಗಳು**

ಬ್ರಿಟಿಷರು ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡುವುದಕ್ಕಿಂತ ಪೂರ್ವದಲ್ಲಿ ಯಾವುದೇ ರೀತಿಯ ಆಸ್ಪತ್ರೆಗಳು ಇರಲಿಲ್ಲ. ಅದರ ಬದಲಾಗಿ ನಾಟಿ ಅಥವಾ ಆಯುರ್ವೇದಿಕ್ ಔಷಧಿಯ ಪಂಡಿತರಿದ್ದರು. ಈ ಪಂಡಿತರು ಗಿಡ-ಮೂಲಿಕೆಗಳಿಂದ ಕಾಯಿಲೆಗಳನ್ನು ಗುಣಪಡಿಸುತ್ತಿದ್ದರು. ಸಂಡೂರು ಮತ್ತು ಹರಪನಹಳ್ಳಿಯು ಆರಂಭದಲ್ಲಿ ಹೆಚ್ಚು ಅರಣ್ಯ ಪ್ರದೇಶದಿಂದ ಕೂಡಿತ್ತು. ಈ ಅರಣ್ಯ ಪ್ರದೇಶದಲ್ಲಿ ಬೆಳೆಯುತ್ತಿದ್ದ ಗಿಡ-ಮೂಲಿಕೆಗಳು ಜಿಲ್ಲೆಯಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿತ್ತು. ಹಾಗೆಯೇ ಹರಪನಹಳ್ಳಿಯಲ್ಲಿ ಒಂದು ಆಯುರ್ವೇದಿಕ್ ಆಸ್ಪತ್ರೆ ಮತ್ತು ಪಶು ಆಸ್ಪತ್ರೆಗಳಿದ್ದವು. ಇದರ ಪ್ರಭಾವದಿಂದ ಹರಿಹರದಲ್ಲಿ ಪ್ರಸ್ತುತವು ಆಯುರ್ವೇದಿಕ್ ಔಷಧಿಯನ್ನು ನೀಡಲಾಗುತ್ತಿದೆ. ಜಿಲ್ಲೆಯಲ್ಲಿ ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ೧೮೬೬, ೧೮೭೬-೭೮, ೧೮೯೧ರಲ್ಲಿ ಸಂಭವಿಸಿದ ತೀವ್ರ ಕ್ಷಾಮ ಮತ್ತು ಬರಗಾಲದಿಂದ ಅಪಾರ ಸಾವು-ನೋವು, ರೋಗಗಳು ಹರಡಿದವು. ಇದರ ಪರಿಣಾಮದಿಂದ ಬ್ರಿಟಿಷ್ ಸರ್ಕಾರ ಸಮಾಜದಲ್ಲಿ ಶಾಂತಿ ಸುವ್ಯವಸ್ಥೆ ಸ್ಥಾಪಿಸುವ ದೃಷ್ಟಿಯಿಂದ ಬ್ರಿಟಿಷ್ ಅಧಿಕಾರಿಗಳು ಆಸ್ಪತ್ರೆಗಳನ್ನು ಸ್ಥಾಪಿಸಲು

ಮುಂದಾದರು. 'ಬಳ್ಳಾರಿ ಜಿಲ್ಲೆಯಲ್ಲಿ ಆರಂಭದಲ್ಲಿ ಏಳು ಆಸ್ಪತ್ರೆಗಳಿದ್ದವು'.[೫] ಈ ಏಳು ಆಸ್ಪತ್ರೆಗಳನ್ನು ಮುನ್ಸಿಪಾಲಿಟಿ ನೋಡಿಕೊಳ್ಳುತ್ತಿತ್ತು. ನಂತರ ಜಿಲ್ಲೆಯ ಎಲ್ಲಾ ತಾಲೂಕು, ಹೋಬಳಿ, ಪ್ರಮುಖ ಗ್ರಾಮಗಳಲ್ಲಿ ಹಂತ ಹಂತವಾಗಿ ಸಾರ್ವಜನಿಕ ಆಸ್ಪತ್ರೆಗಳು ಸ್ಥಾಪನೆಗೊಂಡವು. ಇವು ತಾಲೂಕು ತಹಶೀಲ್ದಾರರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದವು.

## ಸಾರ್ವಜನಿಕ ಆಸ್ಪತ್ರೆ - ಬಳ್ಳಾರಿ

ಕ್ರಿ.ಶ. ೧೯೦೬-೦೭ರಲ್ಲಿ ಮದ್ರಾಸ್ ಸರ್ಕಾರದ ಸಭಾಪತಿಯಾಗಿದ್ದ ಮುದಲಿಯರ್‌ರವರು ಬಳ್ಳಾರಿಯಲ್ಲಿ ಅಸ್ತಿತ್ವದಲ್ಲಿದ್ದ ಹಳೆಯ ಸಾರ್ವಜನಿಕ ಆಸ್ಪತ್ರೆಯ ಕಟ್ಟಡವು ಯೋಗ್ಯವಲ್ಲವೆಂದು ಪರಿಗಣಿಸಿ, ನೂತನ ಆಸ್ಪತ್ರೆಯನ್ನು ನಿರ್ಮಿಸಲು ಉದ್ದೇಶಿಸಿದನು. ಇದರನ್ವಯ ಬಳ್ಳಾರಿ ಜಿಲ್ಲೆಯಲ್ಲಿ ನೂತನವಾಗಿ ಆಸ್ಪತ್ರೆಯನ್ನು ನಿರ್ಮಿಸಲು ನೈರ್ಮಲ್ಯ ಇಂಜಿನಿಯರ್ ಅವರು ೧೯೦೭ರಲ್ಲಿ ಕಟ್ಟಡದ ನೀಲ ನಕಾಶೆ ಮತ್ತು ಅಂದಾಜು ವೆಚ್ಚವನ್ನು ತಯಾರಿಸಿ, ಆದೇಶ ಸಂಖ್ಯೆ: ೨೮೨ ದಿನಾಂಕ ೧೮ನೇ ಫೆಬ್ರವರಿ ೧೯೦೮ರಲ್ಲಿ ಸರ್ಕಾರದ ಕಾರ್ಯದರ್ಶಿಗಳು, ಸ್ಥಳೀಯ ಮತ್ತು ಮುನಿಸಿಪಲ್ ಇಲಾಖೆಗೆ ಪತ್ರವನ್ನು ಕಳುಹಿಸಲಾಗಿತ್ತು. 'ಪಿ.ಆರ್. ಅಲೆನ್ ಸೂಪರಿಂಟೆಂಡೆಂಟ್ ಇಂಜಿನಿಯರ್‌ರವರು ಆಸ್ಪತ್ರೆ ನಿರ್ಮಾಣಕ್ಕೆ ಸಿದ್ಧಪಡಿಸಿದ ಅಂದಾಜು ವೆಚ್ಚ ಮತ್ತು ನೀಲ ನಕಾಶೆಯನ್ನು ಪರಿಶೀಲಿಸುವಾಗ ಇದರಲ್ಲಿ ನಮೂದು ಮಾಡಲಾಗಿರುವ ಕೆಲವು ಐಟಂಗಳ ದರಗಳು ಅಸಂಪೂರ್ಣವಾಗಿವೆ. ಆದ್ದರಿಂದ ಈ ಐಟಂಗಳ ದರವನ್ನು ಪಟ್ಟಿ ಮಾಡಿ ಮತ್ತೊಮ್ಮೆ ಅದರ ಅಂದಾಜು ವೆಚ್ಚವನ್ನು ನಮೂದಿಸಬೇಕೆಂದು ತಮ್ಮ ಕೇಳಿಕೊಳ್ಳುತ್ತೇನೆ"[೬] ಎಂದು ನೈರ್ಮಲ್ಯ ಇಂಜಿನಿಯರ್ ಇಲಾಖೆಗೆ ತಿಳಿಸಿದರು. ಇದರನ್ವಯ ಜನರಲ್ ಸರ್ಜನ್, ನೈರ್ಮಲ್ಯ ಬೋರ್ಡ್, ಪ್ರಾಂತೀಯ ಸರ್ಕಾರ ಮತ್ತು ಶ್ರೀ ಹಟನಂ, ನೈರ್ಮಲ್ಯ ಇಂಜಿನಿಯರ್ ಅವರು ಆಸ್ಪತ್ರೆ ನಿರ್ಮಾಣ ಕಾರ್ಯದ ಅಂದಾಜು ವೆಚ್ಚ ೭೭.೦೫೦ ರೂಪಾಯಿಗಳು ವೆಚ್ಚದ ಯೋಜನೆಯನ್ನು ಸಿದ್ಧಪಡಿಸಿದರು. ಇವರು ಸಿದ್ಧಪಡಿಸಿದ ಅಂದಾಜು ವೆಚ್ಚದ ವಿವರ ಈ ಕೆಳಕಂಡಂತಿದೆ.

| ಕೆಲಸದ ವಿವರ | ಜನರಲ್ ನೈರ್ಮಲ್ಯ ಇಂಜಿನಿಯರ್ ನೈರ್ಮಲ್ಯ ಬೋರ್ಡ್ ಪ್ರಾಂತಿಯ ಸರ್ಕಾರ ನೀಡಿದ ಪ್ರಸ್ತಾವನೆ | ಸರ್ಜನ್ ಶ್ರೀ ಹಟ್ಟನ್ ನೈರ್ಮಲ್ಯ ಇಂಜಿನಿಯರ್ ಬಳ್ಳಾರಿ ಜಿಲ್ಲೆ ನೀಡಿದ ಪ್ರಸ್ತಾವನೆ |
|---|---|---|
| ೧. ಆಡಳಿತ ಕಛೇರಿ | ೧೫,೩೮೦ | ೧೫,೬೧೦ |
| ೨. ಆಪರೇಷನ್ ಕೊಠಡಿ | ೬,೮೦೦ | ೬,೮೯೦ |
| ೩. ಸ್ಟೋರ್ ರೂಮ್ | ೩,೧೯೦ | ೩,೧೪೦ |
| ೪. ಅಡುಗೆ ಕೋಣೆ | ೨,೬೬೦ | ೨,೪೯೦ |

| | | |
|---|---|---|
| ೫. ೮ ಹಾಸಿಗೆಗಳ ಒಂದು ವಾರ್ಡ್ | ೩,೭೦೦ | ೩,೬೯೦ |
| ೬. ೧೨ ಹಾಸಿಗೆಗಳ ಒಂದು ವಾರ್ಡ್ | ೪,೭೧೦ | ೪,೭೦೦ |
| ೭. ಪುರುಷರ ಪ್ರತ್ಯೇಕ ವಾರ್ಡ್ | ೩,೧೫೦ | ೩,೧೪೦ |
| ೮. ೪ ಹಾಸಿಗೆಗಳ ವಾರ್ಡ್ ಯೂರೋಪಿಯನ್ ಪುರುಷರಿಗಾಗಿ | ೩,೧೫೦ | ೩,೧೪೦ |
| ೯. ವಿಶ್ರಾಂತಿ ಕೋಣೆ | ೪,೪೫೦ | ೪,೪೪೦ |
| ೧೦. ನರ್ಸ್ ವಾರ್ಡ್<br>೧೧. ಎರಡು ಸಾಮಾನ್ಯ ಶೌಚಾಲಯ | ೧,೩೩೦<br>೧,೫೬೦ | ೧,೩೪೦<br>೧,೩೬೦ |
| ೧೨. ಶವಗಾರ | ೧,೩೫೦ | ೧,೩೩೦ |
| ೧೩. ರಸ್ತೆ ಮತ್ತು ಸಮತಟ್ಟು | ೫೦೦ | ೫೦೦ |
| ೧೪. ಕಾಂಪೌಂಡ್ ಗೋಡೆ | ೩,೦೭೦ | ೩,೦೭೦ |
| ೧೫. ನೀರು | ೩,೭೦೦ | ೩,೭೦೦ |
| ೧೬. ಚರಂಡಿ | ೫,೦೦೦ | ೫,೦೦೦ |
| ೧೭. ಹೊರರೋಗಿಗಳ ವಾರ್ಡ್ | ೭,೭೦೦ | ೮,೫೧೦ |
| ೧೮. ಸಾಮಗ್ರಿ | ೫,೦೦೦ | ೫,೦೦೦ |
| **ಒಟ್ಟು** | **೭೬,೪೦೦** | **೭೭,೦೫೦**[೯೭] |

ಬಳ್ಳಾರಿ ಜಿಲ್ಲಾ ಆಸ್ಪತ್ರೆ ಕಟ್ಟಡದ ನಿರ್ಮಾಣಕ್ಕಾಗಿ ಅಂದಾಜು ಒಟ್ಟು ೭೬.೪೦೦/ ೭೭.೦೫೦ ರೂಪಾಯಿಗಳ ಮೊತ್ತವನ್ನು ಪ್ರಾಂತೀಯ ಸರ್ಕಾರದ ನೈರ್ಮಲ್ಯ ಇಲಾಖೆ ಮತ್ತು ಬಳ್ಳಾರಿ ಜಿಲ್ಲಾ ನೈರ್ಮಲ್ಯ ಇಲಾಖೆಯು ಯೋಜನೆಯನ್ನು ತಯಾರಿಸಲಾಗಿತ್ತು. ಸರ್ಕಾರದ ಆದೇಶ ಪತ್ರ ಸಂಖ್ಯೆ: ೨೮೨ ಎಂ. ದಿನಾಂಕ ೧೮ನೆಯ ಫೆಬ್ರವರಿ ೧೯೦೮ರ ಪ್ರಕಾರ ಜಿಲ್ಲಾ ಆಸ್ಪತ್ರೆಯ ಕಟ್ಟಡದ ನಿರ್ಮಾಣಕ್ಕಾಗಿ ಮುನಿಸಿಪಾಲಿಟಿಯಿಂದ ೪೩,೯೯೦ ರೂಪಾಯಿಗಳು, ಜಿಲ್ಲಾ ಮಂಡಳಿಯಿಂದ ೩,೦೬೦ ರೂಪಾಯಿಗಳು ಮತ್ತು ಪ್ರಾಂತೀಯ ಸರ್ಕಾರದಿಂದ ೩೦,೦೦೦ ಸಾವಿರ ರೂಪಾಯಿಗಳ ಅನುದಾನವನ್ನು ನೀಡಲಾಯಿತು".[೯೮] ಇದನ್ನು ೧೯೦೮-೦೯ನೇ ಸಾಲಿನ ಬಜೆಟ್ ಮಂಡನೆಯಲ್ಲಿ ಘೋಷಿಸಲಾಗಿತ್ತು. ಇದರನ್ವಯ ಜಾರಿಯಾದ ಮೊತ್ತವನ್ನು ಎರಡು ಕಂತುಗಳಲ್ಲಿ ಬಳಸಿಕೊಳ್ಳಲು ಲೋಕೋಪಯೋಗಿ ಇಲಾಖೆಗೆ ಆದೇಶಿಸ ಲಾಗಿತ್ತು. ಇದರ ಪ್ರಕಾರ ಲೋಕೋಪಯೋಗಿ ಇಲಾಖೆಯು ಜಾರಿಯಾದ ಹಣವನ್ನು ಬಳಸಿಕೊಂಡು ಕಟ್ಟಡವನ್ನು ೧೯೦೯ರಲ್ಲಿ ಪೂರ್ಣಗೊಳಿಸಿತು. ಈ ಕಟ್ಟಡವು ಎರಡು ಹಂತಸ್ತಿನ ಕಟ್ಟಡವಾಗಿದ್ದು, ಬೃಹದಾಕಾರವಾಗಿ ನಿರ್ಮಾಣಗೊಂಡಿರುವುದು ಕಂಡುಬಂದಿದೆ. ಕಟ್ಟಡದ ಒಳಭಾಗದಲ್ಲಿ ವಿಶಾಲವಾದ ಕೊಠಡಿಗಳು, ದೊಡ್ಡ ದೊಡ್ಡ ಕಿಟಕಿ ಮತ್ತು ಬಾಗಿಲುಗಳನ್ನು

ಅಳವಡಿಸಿದೆ. ಅವುಗಳಿಗೆ ವಿವಿಧ ಬಣ್ಣದ ಗಾಜುನ್ನು ಬಳಸಿರುವುದನ್ನು ಗಮನಿಸಲಾಗಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಗಾರೆ, ಸಿಮೆಂಟ್ ಮತ್ತು ಸುಣ್ಣವನ್ನು ಬಳಸಿ ಕಟ್ಟಲ್ಪಟ್ಟಿದೆ.

**ಸಾರ್ವಜನಿಕ ಆಸ್ಪತ್ರೆ - ರಾಯದುರ್ಗ**

ರಾಯದುರ್ಗ ಪಟ್ಟಣದಲ್ಲಿ ಹಳೆಯ ಮುನಿಸಿಪಾಲಿಟಿ ಕಟ್ಟಡದ ಎದುರುಗಡೆ ಕಂಡುಬರುವುದೇ ಸರ್ಕಾರಿ ಆಸ್ಪತ್ರೆ. "ಇದು ೧೮೮೩ರಲ್ಲಿ ಸ್ಥಾಪನೆಗೊಂಡಿದೆ".[೯೯] ಆಸ್ಪತ್ರೆ ಕಟ್ಟಡ ಇರುವ ಭೂಮಿಯು "ಸರ್ವೆ ನಂ. ೨೯೭ ಬಿ.ಎ.ರಲ್ಲಿ ಒಂದು ಎಕರೆ ಭೂ ವಿಸ್ತೀರ್ಣವನ್ನು ಹೊಂದಿದೆ".[೧೦೦] ಈ ಭೂಮಿಗೆ ಬಳ್ಳಾರಿ ಕಲೆಕ್ಟರ್‌ರವರ ಅನುಮತಿಯ ಮೇರೆಗೆ ತಾಲೂಕು ಪ್ರೆಸಿಡೆಂಟ್ ಆಗಿದ್ದ "ಕೆ. ಬಾಲಪ್ಪ ಅವರು ತಾಲೂಕು ಲೋಕಲ್ ಬೋರ್ಡ್ ವತಿಯಿಂದ ವರ್ಷಕ್ಕೆ ರೂ. ೧೨.೮ ಬಾಡಿಗೆಯನ್ನು ನೀಡಲಾಗುತ್ತಿತ್ತು".[೧೦೧] ಆರಂಭದಲ್ಲಿ ಈ ಭೂಮಿಯ ಮಧ್ಯಭಾಗದಲ್ಲಿ ಎರಡು ಕೊಠಡಿಗಳನ್ನು ಹೊಂದಿದ್ದ ಒಂದು ಚಿಕ್ಕ ಕಟ್ಟಡವನ್ನು ನಿರ್ಮಿಸಲಾಗಿತ್ತು. ನಂತರ ೧೯೨೦ರಲ್ಲಿ ಹಳೆಯ ಕಟ್ಟಡದ ರಿಪೇರಿ ಮತ್ತು ಹೆಚ್ಚುವರಿ ಕೊಠಡಿಗಳ ಅವಶ್ಯಕತೆ ಇದ್ದ ಕಾರಣಕ್ಕಾಗಿ ಬಳ್ಳಾರಿ ಡಿಸ್ಟ್ರಿಕ್ಟ್ ಲೋಕಲ್ ಬೋರ್ಡ್‌ಗೆ ಅನುಮತಿ ಪತ್ರವನ್ನು ಸಲ್ಲಿಸಿದ್ದರು. ಇದನ್ನು ಪರಿಶೀಲಿಸಿದ ಜಿಲ್ಲಾಡಳಿತವು "ಇಂಜಿನಿಯರ್ ಅವರು ನೋಂದಣಿ ಸಂಖ್ಯೆ: ೫೪೦/ ೧೭-೧೧-೧೯೨೦ರಲ್ಲಿ ರಾಯದುರ್ಗದಲ್ಲಿರುವ ಹಳೆಯ ಆಸ್ಪತ್ರೆಯ ಕಟ್ಟಡದ ರಿಪೇರಿ ಮತ್ತು ಹೊಸ ಕೊಠಡಿಗಳ ನಿರ್ಮಾಣಕ್ಕೆ ಅನುಮತಿ ನೀಡಿ, ೧೪೪೦-೦೦ ರೂಪಾಯಿಗಳ ಅನುದಾನವನ್ನು ನೀಡಲಾಗಿತ್ತು".[೧೦೨] ಇದರನ್ವಯ ಹಳೆ ಕಟ್ಟಡದ ರಿಪೇರಿ ಮತ್ತು ಹೊಸ ಕಟ್ಟಡವನ್ನು ನಿರ್ಮಿಸಲಾಯಿತು. ಕಟ್ಟಡ ತಳವಿನ್ಯಾಸವು ಚಚ್ಚೌಕವಾಗಿದ್ದು ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ನಿರ್ಮಿಸಲಾಗಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಗಾರೆ, ಕಬ್ಬಿಣ, ಹಾಸುಬಂಡೆ, ಮರದ ತೀರುಗಳನ್ನು ಬಳಸಿ ಕಟ್ಟಿದ್ದಾರೆ. ಕಟ್ಟಡದ ಮೇಲ್ಛಾವಣಿಯು ಕಾಂಕ್ರೀಟಿನ ಅಂದವಾದ ಇಳಿಜಾರು ತಾರಸಿ ಕಟ್ಟಡ. "ಸರ್ಕಾರಿ ಆಸ್ಪತ್ರೆಗೆ ೧೯೫೧ರಲ್ಲಿ ಶ್ರೀ ಜಯಂತಿ ರಾಮಚಂದ್ರಪ್ಪ ಶೆಟ್ಟಿ ಮತ್ತು ಸಹೋದರರು ಪ್ರೋತ್ಸಾಹ ಧನ"[೧೦೩] ನೀಡಿದ್ದರಿಂದ ಮತ್ತೊಂದು ಹೊಸ ಕಟ್ಟಡದ ಹಾಗೂ ಆಸ್ಪತ್ರೆ ಸುತ್ತಲೂ ೪ ಅಡಿ ಎತ್ತರದ ಕಾಂಪೌಂಡನ್ನು ನಿರ್ಮಿಸಿದ್ದಾರೆ.

**ಸಾರ್ವಜನಿಕ ಆಸ್ಪತ್ರೆ - ಕೂಡ್ಲಿಗಿ**

ಪಟ್ಟಣದ ಹೃದಯ ಭಾಗದಲ್ಲಿರುವ ಸಂತೆ ಮೈದಾನದ ಬಳಿ ಹಳೆಯ ಸರ್ಕಾರಿ ಆಸ್ಪತ್ರೆಯು ಕಂಡುಬರುತ್ತದೆ. ಇದು ಶತಮಾನ ಕಂಡ ಕಟ್ಟಡವಾಗಿದೆ. ಇದು ಹಳೆಯ ಕಟ್ಟಡವಾಗಿದ್ದರೂ, ಆರಂಭದಲ್ಲಿ ವ್ಯವಸ್ಥಿತವಾಗಿ ನಡೆಯುತ್ತಿತ್ತು. "೧೯೯೪ರಲ್ಲಿ ಗುಡೇಕೋಟೆ ರಸ್ತೆಯಲ್ಲಿ ಹೊಸ ಸರ್ಕಾರಿ ಆಸ್ಪತ್ರೆ ನಿರ್ಮಾಣಗೊಂಡಾಗ ಆಸ್ಪತ್ರೆಯನ್ನು, ಹಳೆಯ ಕಟ್ಟಡದಿಂದ ಹೊಸ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ'.[೧೦೪] ಹಳೆಯ ಕಟ್ಟಡ ಖಾಲಿಯಾಗಿಯೇ ಉಳಿಯಿತು. ಈ ಕಟ್ಟಡವನ್ನು ಖಾಲಿ ಬಿಡಬಾರದೆಂಬ ಉದ್ದೇಶದಿಂದ ಅಲ್ಲಿ ವೈದ್ಯಾಧಿಕಾರಿಗಳು ಅದನ್ನು

ಮಕ್ಕಳ ಆಸ್ಪತ್ರೆಯನ್ನಾಗಿ ಪರಿವರ್ತಿಸಲಾಯಿತು. ಇಲ್ಲಿ ಕಾರ್ಯ ನಿರ್ವಹಿಸಿದ್ದ ಮಕ್ಕಳ ತಜ್ಞರು ವರ್ಗಾವಣೆಗೊಂಡ ನಂತರ ಮಕ್ಕಳ ಆಸ್ಪತ್ರೆಯು ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ಸೋನಿಯಾ ಪ್ಯಾಕೇಜ್ ಯೋಜನೆಯ ಅಡಿಯಲ್ಲಿ ವೈದ್ಯಾಧಿಕಾರಿಗಳಿಗಾಗಿ ವಸತಿಗೃಹವೊಂದನ್ನು ಅಲ್ಲಿ ನಿರ್ಮಿಸಲು ಯತ್ನಿಸಿ, ಅನುದಾನ ಕೊರತೆಯಿಂದ ಅದೂ ಅರೆಬರೆಯಾಯಿತು. ಕೊನೆಗೆ ಹಳೆಯ ಆಸ್ಪತ್ರೆ ಕಟ್ಟಡದ ಹಿಂಭಾಗದಲ್ಲಿ ಅಗ್ನಿಶಾಮಕ ಠಾಣೆಗಾಗಿ ಬಳಸಿಕೊಳ್ಳಲಾಯಿತು. ಅದೂ ಹೊಸ ಕಟ್ಟಡಕ್ಕೆ ಸ್ಥಳಾಂತರಗೊಂಡ ನಂತರ ಇದೀಗ ಆಸ್ಪತ್ರೆಯ ಹಿಂಭಾಗ ಹಾಗೂ ಮುಂಭಾಗದಲ್ಲಿ ಗಿಡ-ಗಂಟೆ, ಕಸದ ರಾಶಿ ಬಿದ್ದು, ಆಸ್ಪತ್ರೆಯ ಕಟ್ಟಡ ಭೂತಬಂಗಲೆ ಎಂಬಂತೆ ಪರಿವರ್ತಿತವಾಗಿ ನಿಂತಿದೆ. ಈ ಕಟ್ಟಡವನ್ನು ಯಾರು ಕೇಳುವವರಿಲ್ಲದಂತೆ ಅನಾಥವಾಗಿ ಬಿದ್ದಿದೆ.

**ಪರಿವೀಕ್ಷಣಾ ಮಂದಿರಗಳು**

ಮೊದಲ ಬಾರಿಗೆ ಅತಿಥಿಗೃಹ ಅಥವಾ ಪರಿವೀಕ್ಷಣಾ ಮಂದಿರದ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದು ಬ್ರಿಟಿಷರು. ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕು, ಹೋಬಳಿ ಹಾಗೂ ನಿಸರ್ಗಧಾಮಗಳಲ್ಲಿ ಪರಿವೀಕ್ಷಣಾ ಬಂಗಲೆಗಳು ಅಥವಾ ಪ್ರವಾಸಿ ಮಂದಿರಗಳನ್ನು ಪ್ರಾದೇಶಿಕ ಹಾಗೂ ಪರಿಸರಕ್ಕೆ ಅನುಗುಣವಾಗಿ ಸ್ಥಾಪಿಸಿಕೊಂಡರು. ಇದರ ಉದ್ದೇಶ ಭಾರತಕ್ಕೆ ಬರುತ್ತಿದ್ದ ವಿದೇಶಿ ಆಡಳಿತಗಾರರು, ಸೈನ್ಯ ದಂಡಾಧಿಕಾರಿಗಳು, ಪ್ರವಾಸಿಗರು, ಇಂಜಿನಿಯರ್ ಹಾಗೂ ಕ್ರೈಸ್ತ ಮಿಷನರಿಗಳಿಗಾಗಿ ವಸತಿ ವ್ಯವಸ್ಥೆಯನ್ನು ಕಲ್ಪಿಸುವುದಾಗಿತ್ತು. ಇದಕ್ಕೆ ಉತ್ತಮ ಉದಾಹರಣೆ: ಸುರಪುರ ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿರುವ ಬೆಟ್ಟದ ಮೇಲೆ ಇರುವ ಟೇಲರ್ ಮಂಜಿಲ್ ಎಂದೇ ಖ್ಯಾತಿ ಪಡೆದಿದೆ. ಈ ಬಂಗಲೆಯ ಕಟ್ಟಡವು ಬಹಳ ಸ್ವಾರಸ್ಯಕರದಿಂದ ಕೂಡಿದೆ. ಅದೇನೆಂದರೆ, ಬಂಗಲೆಯ ಪ್ರವೇಶದ ಮುಖ್ಯ ಬಾಗಿಲು ತೆರೆದರೆ ಏಕಕಾಲದಲ್ಲೇ ಇತರ ಎಂಟು ಬಾಗಿಲುಗಳು ತೆರೆದುಕೊಳ್ಳುವಂತೆ ತಂತ್ರಜ್ಞಾನವನ್ನು ಅಳವಡಿಸಿರುವುದು ಕಂಡುಬಂದಿದೆ. ಭಾರತದ ಯಾವುದೇ ಕಟ್ಟಡಗಳಲ್ಲಿ ಇಂತಹ ತಂತ್ರಜ್ಞಾನ ಕಂಡುಬರುವುದಿಲ್ಲ. ಆದರೆ, ಬಳ್ಳಾರಿ ಜಿಲ್ಲೆಯಲ್ಲಿರುವ ಪ್ರವಾಸಿ ಬಂಗಲೆಗಳು ಬಹಳ ಸರಳವಾಗಿ ಹಾಗೂ ವಿಶಾಲವಾಗಿರುವುದು ಕಂಡುಬಂದಿದೆ. ಜಿಲ್ಲೆಯಲ್ಲಿರುವ ಪ್ರತಿಯೊಂದು ಪ್ರವಾಸಿ ಮಂದಿರಗಳ ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಇಲ್ಲವೆ ನಾಲ್ಕು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ನಿರ್ಮಾಣಗೊಂಡಿವೆ. ಈ ಕಟ್ಟಡಗಳಲ್ಲಿ ವಿಶಾಲವಾದ ಕೊಠಡಿಗಳಿದ್ದು, ಅವುಗಳ ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಒಳಸೂಚಿಸಲು ಕಿಟಕಿ ಮತ್ತು ಬಾಗಿಲುಗಳನ್ನು ಅಳವಡಿಸಿರುವುದು ಕಂಡುಬಂದಿದೆ. ಜಿಲ್ಲೆಯಲ್ಲಿ ಬ್ರಿಟಿಷರು ಸ್ಥಾಪಿಸಿದ್ದ ಎಲ್ಲಾ ಪ್ರವಾಸಿ ಮಂದಿರಗಳ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯಿಂದ ಕೂಡಿವೆ. ಪ್ರಸ್ತುತ ನಿರ್ಮಾಣಗೊಳ್ಳುತ್ತಿರುವ ಪ್ರವಾಸಿ ಮಂದಿರಗಳು ಆರ್.ಸಿ.ಸಿ. ಕಟ್ಟಡಗಳಾಗಿವೆ. ಪ್ರವಾಸಿ ಮಂದಿರಗಳ ಪಕ್ಕದಲ್ಲಿ ಕುದುರೆಗಳಿಗೆ ಪ್ರತ್ಯೇಕ ಚಿಕ್ಕ ಚಿಕ್ಕ ಕೊಠಡಿಗಳಿರುವುದನ್ನು ಗಮನಿಸಲಾಗಿದೆ. ಅವುಗಳಲ್ಲಿ ಪ್ರಮುಖವಾಗಿ

ಬಳ್ಳಾರಿ, ಹೊಸಪೇಟೆ, ಕೂಡ್ಲಿಗಿ, ಹರಪನಹಳ್ಳಿ, ಹಡಗಲಿ, ಸಿರುಗುಪ್ಪ, ಆಲೂರು, ಆದೋನಿ, ರಾಯದುರ್ಗ, ಕೊಟ್ಟೂರು, ಚಿಕ್ಕಜೋಗಿಹಳ್ಳಿ, ಗುಡೇಕೋಟೆ, ಕುಡತಿನಿ, ತೋರಣಗಲ್ಲು, ಗಾದಿಗನೂರು, ಕಮಲಾಪುರ, ಕಂಪ್ಲಿ ಇತ್ಯಾದಿ ಸ್ಥಳಗಳಲ್ಲಿದ್ದ ಮಂದಿರಗಳಲ್ಲಿ ಬ್ರಿಟಿಷರು ಬಳಸಿರುವ ಸಲಕರಣೆಗಳು ಪ್ರಸ್ತುತವು ಕಂಡುಬಂದಿವೆ. ಪ್ರಸ್ತುತ ಇವುಗಳ ಮೇಲುಸ್ತುವಾರಿಯು ಆಯಾ ತಾಲೂಕು ಕಾರ್ಯನಿರ್ವಾಹಕ ಅಭಿಯಂತರವರ (P.W.D) ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿವೆ.

### ರಾಣಿ ಛತ್ರ - ಕೂಡ್ಲಿಗಿ

ರಾಣಿ ಛತ್ರವು ಕೂಡ್ಲಿಗಿಯಿಂದ ಹೊಸಪೇಟೆ ಕಡೆಗೆ ಬರುವ ಮಾರ್ಗದ ಎಡಭಾಗದಲ್ಲಿದ್ದು, ಇದನ್ನು ಕ್ರಿ.ಶ. ೧೯೧೪ರಲ್ಲಿ ಬಳ್ಳಾರಿ ಜಿಲ್ಲಾ ಕಲೆಕ್ಟರ್ ಆಗಿದ್ದ ಎ.ಎಫ್.ಸಿ. ಮೆಕಾರ್ಡಿ ಅವರು ಎರಡು ಅಡಿ ಎತ್ತರದ ಬೇಸ್‌ಮೆಂಟ್ ಮೇಲೆ ಉತ್ತರ-ದಕ್ಷಿಣಾಭಿಮುಖವಾಗಿ ನಿರ್ಮಿಸಲ್ಪಟ್ಟ ಕಟ್ಟಡವನ್ನು ಉದ್ಘಾಟಿಸಿದ್ದಾರೆ. ಇದು ಹದಿನೈದು ಕೊಠಡಿಗಳನ್ನೊಳಗೊಂಡ ಬೃಹದಾಕಾರದ ನೆಲಮಾಳಿಗೆಯ ಕಟ್ಟಡವಾಗಿದ್ದು, ಕಟ್ಟಡದ ಒಳಭಾಗಕ್ಕೆ ಸಾಕಷ್ಟು ಗಾಳಿ, ಬೆಳಕು ಬರುವ ಹಾಗೆ ದೊಡ್ಡ ಕಿಟಕಿ-ಬಾಗಿಲುಗಳನ್ನು ಅಳವಡಿಸಿರುವುದು ಕಂಡುಬರುತ್ತದೆ. ಕಟ್ಟಡದ ಮೇಲ್ಛಾವಣಿಯು ಮರದ ತೀರುಗಳನ್ನು ಹಾಸಿ, ಅದರ ಮೇಲೆ ಹಾಸು ಬಂಡೆಯನ್ನು ಹಾಕಿ ಅದರ ಮೇಲೆ ಆರ್.ಸಿ.ಸಿ. ಮಾಡಿದ್ದಾರೆ. ಕಟ್ಟಡಕ್ಕೆ ಹೊಂದಿಕೊಂಡಂತೆ ಮುಂಭಾಗ ಮತ್ತು ಹಿಂಭಾಗದಲ್ಲಿ ಹೆಂಚಿನ ಇಳಿಜಾರು ಛಾವಣಿಯಿರುವುದು ಕಂಡುಬರುತ್ತದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ, ಕಬ್ಬಿಣ, ಮರದ ತೀರು, ಮಂಗಳೂರು ಹೆಂಚ್, ಗಾರೆ ಮತ್ತು ಸುಣ್ಣವನ್ನು ಬಳಸಿ ಕಟ್ಟಿದ್ದಾರೆ.

ಛತ್ರ ಎಂಬ ಪದದ ಅರ್ಥ ನಿಘಂಟುವಿನಲ್ಲಿ ಊಟ, ವಸತಿಗಳನ್ನು ಒದಗಿಸುವ ಸ್ಥಳ ಎಂದರ್ಥ. ರಾಣಿಯ ಛತ್ರ ಎನ್ನುವದರ ಬಗ್ಗೆ ಯಾವುದೇ ದಾಖಲೆಯಿಲ್ಲ. ಆದರೆ, ಸ್ಥಳೀಯರ ಬಾಯಿಯಲ್ಲಿ ಇದನ್ನು ರಾಣಿಛತ್ರ ಎಂದು ಕರೆಯುವುದುಂಟು. ಬಳ್ಳಾರಿ ಜಿಲ್ಲಾ ಕಲೆಕ್ಟರ್ ಆಗಿದ್ದ ಮೆಕಾರ್ಡಿಯವರು ವಿದೇಶಗಳಿಂದ ಬರುತ್ತಿದ್ದ ಮಹಿಳೆಯರು ಇಲ್ಲಿ ತಂಗುವುದಕ್ಕಾಗಿ ಈ ಕಟ್ಟಡವನ್ನು ಪ್ರಾಯಶಃ ಕಟ್ಟಿಸಿರಬಹುದು. ಇಲ್ಲವೆ, ಎಲಿಜಬತ್ ರಾಣಿಯ ನೆನಪಿಗಾಗಿ ಈ ಕಟ್ಟಡವನ್ನು ಕಟ್ಟಿಸಿರಬಹುದು. ಕ್ರಿ.ಶ. ೧೯೪೭ರಲ್ಲಿ ಸ್ವಾತಂತ್ರ್ಯ ಬಂದ ನಂತರ ಈ ಕಟ್ಟಡದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ಯಾಂಕ್‌ನ್ನು ಸ್ಥಾಪಿಸಿದ್ದರು। ಇತ್ತೀಚಿಗೆ ಬ್ಯಾಂಕ್‌ನ್ನು ಬೇರೆ ಕಡೆಗೆ ಸ್ಥಳಾಂತರಿಸಿರುವುದರಿಂದ ಪ್ರಸ್ತುತ ಈ ಕಟ್ಟಡವನ್ನು ಜೀರ್ಣೋದ್ಧಾರ ಮಾಡಿ, ತಾಲೂಕು ಕಛೇರಿಯ ಅಧಿಕಾರಿಗಳು ಕಾರ್ಯನಿರ್ವಹಿಸುತ್ತಿದ್ದಾರೆ.

### ಸ್ವಾತಂತ್ರ್ಯ ಭವನ

ಭಾರತ ದೇಶ ಸ್ವಾತಂತ್ರ್ಯ ಪಡೆದ ನೆನಪಿಗಾಗಿ ದೇಶಾದ್ಯಂತ ಅನೇಕ ಸ್ಮಾರಕಗಳನ್ನು ನಿರ್ಮಾಣ ಮಾಡಲಾಗಿದೆ. ಅದರಂತೆ ಕೂಡ್ಲಿಗಿ ಪಟ್ಟಣದ ಮಹದೇವ ಮೈಲಾರ ಕ್ರೀಡಾಂಗಣದಲ್ಲಿ

ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನ ೧೯೪೭ ಆಗಸ್ಟ್ ೧೫ರಂದೇ ಈ ಭವನ ನಿರ್ಮಾಣಕ್ಕೆ ಚಾಲನೆ ನೀಡಿ ಅದಕ್ಕೆ 'ಸ್ವಾತಂತ್ರ್ಯ ಭವನ' ಎಂದು ನಾಮಕರಣ ಮಾಡಲಾಗಿತ್ತು. ಆದರೆ, ಸ್ವಾತಂತ್ರ್ಯದ ಸವಿನೆನಪುಗಳನ್ನು ಸಾರಬೇಕಿದ್ದ ಈ ಭವನ ಈಗ ಪಾಳು ಬಿದ್ದು ಹಂದಿ-ನಾಯಿಗಳ ವಾಸಸ್ಥಾನವಾಗಿದ್ದ, ಅನೈತಿಕ ಚಟುವಟಿಕೆಗಳ ತಾಣವಾಗಿದೆ. ಈ ಭವನದ ಪಕ್ಕದಲ್ಲಿಯೇ ಗಾಂಧೀ ಚಿತಾಭಸ್ಮವನ್ನು ಪ್ರತಿಷ್ಠಾಪನೆ ಮಾಡಿ, ಅದಕ್ಕೆ ಹುತಾತ್ಮರ ಸ್ಮಾರಕ ಎಂದು ನಾಮಕರಣ ಮಾಡಲಾಗಿದೆ. 'ಜನರಲ್ ಕಾರ್ಯಪ್ಪ, ದಿವಂಗತ ಪ್ರಧಾನಿ ಇಂದಿರಾಗಾಂಧಿ ಸೇರಿದಂತೆ ಅನೇಕ ಕೇಂದ್ರ ಮಂತ್ರಿಗಳು, ರಾಜ್ಯದ ಮಂತ್ರಿಗಳು ಹಾಗೂ ಅಧಿಕಾರಿಗಳು ಈ ಸ್ಮಾರಕಕ್ಕೆ ಭೇಟಿ ನೀಡಿದ್ದಾರೆ'.[೧೦೫] ಆದರೆ ಇದರ ಪಕ್ಕದಲ್ಲಿಯೇ ಇರುವ ಸ್ವಾತಂತ್ರ್ಯ ಭವನವನ್ನು ಗಮನಿಸದೆ ನಿರ್ಲಕ್ಷ್ಯ ಮಾಡಲಾಗಿದೆ ಎಂದು ಸಾರ್ವಜನಿಕರು ದೂರುತ್ತಿದ್ದಾರೆ.

ಅಂದಿನ ತಾಲೂಕು ಬೋರ್ಡ್ ಪ್ರೌಢ ಶಾಲೆಯಲ್ಲಿ ದೈಹಿಕ ಶಿಕ್ಷಣದ ಶಿಕ್ಷಕರಾಗಿದ್ದ ಬಿಂದು ಮಾಧವ ಹಾಗೂ ವಿದ್ಯಾರ್ಥಿಗಳ ಶ್ರಮದಾನದಿಂದ ಈ ಭವನ ನಿರ್ಮಾಣಗೊಂಡಿತ್ತು. ಸಂಡೂರಿನ ಮಾಜಿ ಸಚಿವ ಎಂ.ವೈ. ಘೋರ್ಪಡೆಯವರು ಸಹ ಈ ಕಟ್ಟಡ ನಿರ್ಮಾಣದಲ್ಲಿ ಶ್ರಮದಾನ ಮಾಡಿದ್ದಾರೆ ಎಂದು ನಿವೃತ್ತ ಶಿಕ್ಷಕ ಕಡಿ. ನಾಗರಾಜ್ ನೆನೆಯುತ್ತಾರೆ. ಕೆಲ ವರ್ಷಗಳ ನಂತರ ತಾಲೂಕು ಬೋರ್ಡಿನ ಆರ್ಥಿಕ ನೆರವಿನಿಂದ ಇದಕ್ಕೆ ಒಂದು ರೂಪ ನೀಡಲಾಯಿತು. ಕೊಟ್ಟೂರು ಕ್ಷೇತ್ರದಲ್ಲಿ ಶಾಸಕರಾಗಿದ್ದ ಮರಳಸಿದ್ಧನಗೌಡ ಅವರ ಅನುದಾನದಲ್ಲಿ ಮತ್ತೊಮ್ಮೆ ಅಭಿವೃದ್ಧಿ ಪಡಿಸಲಾಗಿತ್ತು. ಆನಂತರ ಕೆಲಕಾರಣಗಳಿಂದ ಸ್ವಾತಂತ್ರ್ಯಭವನ ನಿರ್ಲಕ್ಷ್ಯಕ್ಕೆ ಒಳಗಾಗಿತು. ಆದರೆ, ಪಟ್ಟಣದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅನೇಕ ಅಧಿಕಾರಿಗಳು ಇಲ್ಲಿ ಬ್ಯಾಡ್‌ಮೆಂಟನ್ ಆಡಲು ಬರುತ್ತಿದ್ದರು. ಇದರಿಂದ ಇದನ್ನು ಒಂದು ಸುಸಜ್ಜಿತ ಅಡಿಟೋರಿಯಂನ್ನಾಗಿ ಪರಿವರ್ತಿಸಿ, ಬ್ಯಾಡ್ಮಿಂಟನ್ ಸೇರಿ ವಿವಿಧ ಉದ್ದೇಶಗಳಿಗೆ ಅನುಕೂಲವಾಗುವಂತೆ ನಿರ್ಮಿಸಲು ಮುಂದಾದರು. ಆದರೆ, ಅಧಿಕಾರಿಗಳು ಇಲ್ಲಿಂದ ವರ್ಗಾವಣೆಯಾದ ನಂತರ ಯೋಜನೆ ಅಲ್ಲಿಯೇ ಉಳಿಯಿತಾದರೂ, ಪಟ್ಟಣ ಪೊಲೀಸ್ ಠಾಣೆಗೆ ಸಿಪಿಐ ಆಗಿ ಬಂದಿದ್ದ ವಿನ್ಸಂಟ್ ಶಾಂತಕುಮಾರ್ ಅವರ ಇಚ್ಛಾಶಕ್ತಿ ಹಾಗೂ ದಾನಿಗಳಿಂದ ಸಂಗ್ರಹ ಮಾಡಿದ ಹಣದಿಂದ ಸುತ್ತ ಸಿಮೆಂಟ್ ಕಂಬಗಳನ್ನು ಹಾಕಿ, ಗೋಡೆ ನಿರ್ಮಾಣ ಮಾಡಲಾಯಿತು. ಇನ್ನೇನು ಛಾವಣಿಗೆ ಸಿಮೆಂಟ್ ಸೀಟ್ ಹಾಕಬೇಕು ಎನ್ನುವಷ್ಟರಲ್ಲಿ ಶಾಂತಕುಮಾರ್ ಸಹ ವರ್ಗಾವಣೆಯಾದರು. ಅಲ್ಲಿಂದ ಇಲ್ಲಿಯವರೆಗೂ ಅವಶೇಷದಂತೆ ನಿಂತಿರುವ ಭವನ ಅನೈತಿಕ ಚಟುವಟಿಕೆಗಳ ತಾಣವಾಗಿ ಮಾರ್ಪಟ್ಟಿದೆ.

ಇತ್ತೀಚೆಗೆ ಮಹಾದೇವ ಮೈಲಾರ ಕ್ರೀಡಾಂಗಣದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಜನಸಂಪರ್ಕ ಸಭೆಯಲ್ಲಿ ಭಾಗವಹಿಸಲು ಬಂದಿದ್ದ ಜಿಲ್ಲಾಧಿಕಾರಿ ರಾಮ್‌ಪ್ರಸಾದ್ ಮನೋಹರ್ ಈ ಕಟ್ಟಡ ವೀಕ್ಷಿಸಿ ಸಂಪೂರ್ಣ ಮಾಡಿ ತಡೆದರು. ನಂತರ

ಲೋಕೋಪಯೋಗಿ ಇಲಾಖೆಯ ಸಹಾಯಕ ಎಂಜಿನೀಯರ್ ಶರಣಕುಮಾರ್ ಅವರನ್ನು ಸ್ಥಳಕ್ಕೆ ಕರೆಯಿಸಿಕೊಂಡು ತಕ್ಷಣ ಇದನ್ನು ಪೂರ್ಣಗೊಳಿಸಲು ಬೇಕಾಗುವ ಹಣಕಾಸಿನ ಯೋಜನೆ ರೂಪಿಸಿ ಕಳಿಸುವಂತೆ ಸೂಚಿಸಿದ್ದರು. ಆದರೆ, ಇದುವರೆಗೂ ಕಾರ್ಯರೂಪಕ್ಕೆ ಬಂದಿಲ್ಲ. ಜಿಲ್ಲಾಧಿಕಾರಿ ಕೂಡ ಇದರ ಬಗ್ಗೆ ಮರೆತಂತಿದೆ. ಇನ್ನಾದರೂ ಸ್ಥಳೀಯ ಜನಪ್ರತಿನಿಧಿಗಳು ಮತ್ತು ಅಧಿಕಾರಿಗಳು ಇದನ್ನು ಪೂರ್ಣಗೊಳಿಸಿ ಒಂದು ಸುಂದರ ಭವನವನ್ನಾಗಿ ರೂಪಿಸಲು ಮುಂದಾಗಬೇಕು ಎಂದು ಸ್ಥಳೀಯರ ಒತ್ತಾಯ.

**ಗಾಂಧೀಜಿ ಚಿತಾಭಸ್ಮ ಸ್ಮಾರಕ - ಕೂಡ್ಲಿಗಿ**

ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯನ್ನು ೧೯೪೮ರಲ್ಲಿ ಹತ್ಯೆ ಮಾಡಿದ ನಂತರ ಅವರ ಪವಿತ್ರ ಚಿತಾಭಸ್ಮವನ್ನು ಕೂಡ್ಲಿಗಿಯ ಒಬ್ಬ ಸಾಮಾನ್ಯ ಶಿಕ್ಷಕನಾಗಿದ್ದ 'ಬಿಂದು ಮಾಧವರಾವ್' ಅವರ ಮಾರ್ಗದರ್ಶನದಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದ ವಿದ್ಯಾಗಳು ಹಾಗೂ ಕಾಂಗ್ರೇಸಿನ ಉತ್ಸಾಹಿ ಯುವಕರು ಎಲ್ಲಿಗೆ ಹೋಗಿ ರಾಜ್‌ಘಾಟ್‌ನಿಂದ ಚಿತಾಭಸ್ಮವನ್ನು ಗಂಧದ ಕರಂಡಕದಲ್ಲಿ ಕೂಡ್ಲಿಗಿಗೆ ತಂದು, ಅದನ್ನು ಹುತಾತ್ಮರ ಸ್ಮರಣೆಯ ನೆನಪಿಗಾಗಿ, ಕೂಡ್ಲಿಗಿಯಿಂದ ಗುಡೇಕೋಟೆಗೆ ಹೋಗುವ ಮಾರ್ಗದ ಬಲಭಾಗದ ಪ್ರೌಢಶಾಲಾ ಆವರಣದಲ್ಲಿ ದಿನಾಂಕ ೩೦-೦೧-೧೯೪೮ರಂದು ಪ್ರತಿಷ್ಠಾಪಿಸಿದರು. ಆರಂಭದಲ್ಲಿ ಇದನ್ನು ವಿದ್ಯಾರ್ಥಿ ಸಮುದಾಯವು ತಾತ್ಕಾಲಿಕವಾಗಿ ಕಲ್ಲುಗಳನ್ನು ಬಳಸಿ, ಚತುಷ್ಕಾಕಾರದಲ್ಲಿ ಕಟ್ಟಿದ್ದರು. '೧೯೫೦ರ ಹುತಾತ್ಮಕ ದಿನಾಚರಣೆಯ ಸಂದರ್ಭದಲ್ಲಿ ೬" x ೩"ರ ಗಾತ್ರದ ಕಟ್ಟೆಯ ಮೇಲೆ ಚಿತಾಭಸ್ಮವಿದ್ದ ಗಂಧದ ಕರಂಡಕವನ್ನು ಹೈದರಾಬಾದ್ ಕಾಂಗ್ರೇಸ್‌ನ ಅಧ್ಯಕ್ಷರು ಹಾಗೂ ಲೋಕಸಭಾ ಸದಸ್ಯರಾಗಿದ್ದ ರಾಮಾನಂದ ತೀರ್ಥರು ಪುನರ್ ಪ್ರತಿಷ್ಠಾಪಿಸಿದರು'.[೧೦೬]

ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಕೆಂಗಲ್ ಹನುಮಂತಯ್ಯನವರು ಇಲ್ಲಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಇದಕ್ಕೆ ಆರ್ಥಿಕ ನೆರವು ಒದಗಿಸಿದ್ದರು. ಈ ಆರ್ಥಿಕ ನೆರವಿನಿಂದ ೧೯೫೭ ಏಪ್ರಿಲ್ ೬ರಂದು ಅಖಿಲ ಭಾರತ ಗಾಂಧಿ ಸ್ಮಾರಕ ಸಮಿತಿಯ ಅಧ್ಯಕ್ಷರಾಗಿದ್ದ ರಂಗನಾಥ ದಿವಾಕರ್ ಅವರು ವಿಧಿವತ್ತಾಗಿ ಇದನ್ನು ಅಮೃತಶಿಲೆಯ ಸುಂದರ ಬೃಂದಾವನದಲ್ಲಿ ಭಸ್ಮದ ಕರಂಡಕವನ್ನು ಪುನರ್‌ಪ್ರತಿಷ್ಠಾಪಿಸಿದರು. ಆ ಬಳಿಕ ಮುಖ್ಯಮಂತ್ರಿಯಾಗಿದ್ದ ಡಿ. ದೇವರಾಜ್ ಅರಸು ಅವರು ನೀಡಿದ್ದ ಧನಸಹಾಯದಿಂದ ಸ್ಮಾರಕವು ಮಂಟಪದ ಸ್ವರೂಪ ಪಡೆಯಿತು.

ಚತುಷ್ಕಾಕಾರದಲ್ಲಿ ಕಟ್ಟಲ್ಪಟ್ಟ ಚಿತಾಭಸ್ಮದ ನಾಲ್ಕು ದಿಕ್ಕುಗಳಲ್ಲಿ ಉಕ್ತಿಗಳನ್ನು ಬರೆದಿರುವುದು ಕಾಣಬಹುದು. ಅವು ಈ ಕೆಳಗಿನಂತಿದೆ.

ಪೂರ್ವ ದಿಕ್ಕಿನಲ್ಲಿರುವ ಉಕ್ತಿ
ಶುದ್ಧ ಸೌಂದರ್ಯವೆಂಬುದೆ
ನಿರ್ಮಲ ಹೃದಯ

ಪಶ್ಚಿಮ ದಿಕ್ಕಿನಲ್ಲಿರುವ ಉಕ್ತಿ
ದ್ವೇಷಕ್ಕೆ ಪ್ರೇಮವೇ ಮದ್ದು
ಅಹಿಂಸೆಯ ಎಲ್ಲಾ ಧರ್ಮಗಳಿಗಿಂತ
ಶ್ರೇಷ್ಠವಾದುದು

ಉತ್ತರ ದಿಕ್ಕಿನಲ್ಲಿರುವ ಉಕ್ತಿ
ದೇವರೇ ಸತ್ಯವನ್ನು ನಿತ್ಯವಸ್ತು
ಪ್ರಾರ್ಥನೆ ಎಂದರೆ ಬೇಡಿಕೆಯಲ್ಲಿ
ಆತ್ಮದ ಬಯಕೆ

ದಕ್ಷಿಣ ದಿಕ್ಕಿನಲ್ಲಿರುವ ಉಕ್ತಿ
ಪೂಜ್ಯ ರಾಷ್ಟ್ರಪಿತನ ಪವಿತ್ರ ಚಿತಾಭಸ್ಮ
೩೦-೦೧-೧೯೪೮
ಭಾರತದ ಹುತಾತ್ಮರ ಸ್ಮರಣೆ
೧೮೫೭-೧೯೪೭

ಗಾಂಧಿ ಚಿತಾಭಸ್ಮಕ್ಕೆ ಭೇಟಿ ಕೊಟ್ಟ ಮಹನೀಯರಲ್ಲಿ ಇಂದಿರಾಗಾಂಧಿ, ನಿಜಲಿಂಗಪ್ಪ, ರಾಮಕೃಷ್ಣ ಹೆಗಡೆ, ವೀರಪ್ಪ ಮೊಯಿಲಿ ಮುಂತಾದವರಿದ್ದಾರೆ. ಈ ಸ್ಮಾರಕವನ್ನು ದೇಶಪ್ರೇಮಿಗಳ ತಾಣವಾಗಿಸುವ ನಿಟ್ಟಿನಲ್ಲಿ ಈಗಿನ ಶಾಸಕರಾದ ಬಿ. ನಾಗೇಂದ್ರ ಅವರು ಲಕ್ಷಾಂತರ ರೂ. ವೆಚ್ಚದಲ್ಲಿ ಯೋಜನೆಯನ್ನು ಸಿದ್ಧಪಡಿಸಿದ್ದಾರೆ. ಆದರೆ, ಈ ಯೋಜನೆಯು ಕಾರ್ಯರೂಪಕ್ಕೆ ಬಾರದೆ ಹಾಗೆಯೇ ಉಳಿದಿದೆ ಎಂಬ ಅಭಿಪ್ರಾಯವನ್ನು ಸ್ಥಳೀಯ ಬರಹಗಾರರಾದ ಉಜ್ಜಿನಿ ರುದ್ರಪ್ಪ ಅವರು ನೀಡಿದರು.

## ಸಾರ್ವಜನಿಕ ಗ್ರಂಥಾಲಯಗಳು

'ನೇಟಿವ್ ಜನರಲ್ ಲಾಯಬ್ರರಿ' ಎಂಬ ತಾತ್ವಿಕ ಆಧಾರದ ಮೇಲೆ ೧೮೪೮ರಲ್ಲಿ ಪ್ರಾರಂಭವಾದ ಬೆಳಗಾವಿಯಲ್ಲಿಯ 'ಸಾರ್ವಜನಿಕ ಗ್ರಂಥಾಲಯವು ಸಾರ್ವಜನಿಕ ಗಮನವನ್ನು ಸೆಳೆಯಿತು. ಜೆ.ಡಿ. ಇನ್‌ವೆರಾರಿಟಿಯವರಿಂದ ಪ್ರಾರಂಭವಾದ ಈ ಗ್ರಂಥಾಲಯವು ಇಂದಿಗೂ ಸಾರ್ವಜನಿಕ ಸೇವೆಯಲ್ಲಿ ನಿರತವಾಗಿದೆ. ೧೮೫೪ರಲ್ಲಿ ಧಾರವಾಡದಲ್ಲಿ ಪ್ರಾರಂಭವಾದ ಗ್ರಂಥಾಲಯವು ಎರಡನೆಯದು. ಆನಂತರ ಹುಬ್ಬಳ್ಳಿ, ಮಂಗಳೂರು, ಬಾಗಲಕೋಟೆ, ಹಾವೇರಿ, ವಿಜಯಪುರ ಇತ್ಯಾದಿ ಸ್ಥಳಗಳಲ್ಲಿ ಸ್ಥಾಪಿಸಲ್ಪಟ್ಟವು. ವಿಕ್ಟೋರಿಯಾ ಮಹಾರಾಣಿಯ ಆಡಳಿತದ ವಜ್ರಮಹೋತ್ಸವದ ಸ್ಮರಣೆಗಾಗಿ ಮತ್ತು ಕಾಕತಾಳೀಯವೆಂಬಂತೆ ೧೯೧೦ರಲ್ಲಿ ೫ನೆಯ ಜಾರ್ಜ್ ಅರಸನು ಭಾರತಕ್ಕೆ ಭೇಟಿಯಿತ್ತ ಸವಿನೆನಪಿಗಾಗಿ ಕರ್ನಾಟಕದಲ್ಲಿ ಅನೇಕ 'ವಜ್ರಮಹೋತ್ಸವ ಗ್ರಂಥಾಲಯ'ಗಳು ಪ್ರಾರಂಭಗೊಂಡವು. ಈ ದಿಸೆಯಲ್ಲಿ ಮೈಸೂರು ಮತ್ತು ಬೆಂಗಳೂರು ಕೇಂದ್ರ ಗ್ರಂಥಾಲಯಗಳು ೧೯೧೪-೧೫ರಲ್ಲಿ ಪ್ರಾರಂಭಗೊಂಡವು. 'ಮದ್ರಾಸ್ ಸರಕಾರವು

೧೯೪೮ರಲ್ಲಿ ಸಾರ್ವಜನಿಕ ಗ್ರಂಥಾಲಯ ಕಾನೂನನ್ನು ಹೊರಡಿಸಿತು'.[೧೦೭] ಸ್ಥಳೀಯ ಸಂಸ್ಥೆಗಳು ಸಂಗ್ರಹಿಸುವ ಮನೆತೆರಿಗೆ, ಆಸ್ತಿ ತೆರಿಗೆಯಲ್ಲಿ ಪ್ರತಿಶತ ಮೂರರಷ್ಟು ಹಣವನ್ನು ಗ್ರಂಥಾಲಯಕರ ವನ್ನಾಗಿ ಪ್ರತ್ಯೇಕವಾಗಿ ವಸೂಲು ಮಾಡುವ ಅಧಿಕಾರವುಳ್ಳ ಗ್ರಂಥಾಲಯ ಪ್ರಾಧಿಕಾರ ಮಂಡಳಿಗಳನ್ನು ಪ್ರತಿ ಜಿಲ್ಲೆಗೂ ರಚಿಸುವುದಕ್ಕೆ ಇದರಲ್ಲಿ ಅನುವು ಮಾಡಿಕೊಡಲಾಯಿತು. ಇದರಿಂದ ೧,೦೦೦ ಜನಸಂಖ್ಯೆ ಅಥವಾ ಅದಕ್ಕೂ ಹೆಚ್ಚಿರುವ ಗ್ರಾಮಗಳಿಗೆ ಶಾಖಾ ಗ್ರಂಥಾಲಯ, ಸಂಚಾರಿ ಗ್ರಂಥಾಲಯ ಮತ್ತು ಗ್ರಂಥ ವಿತರಣಾ ಕೇಂದ್ರಗಳನ್ನೊಳಗೊಂಡ ಜಿಲ್ಲಾ ಕೇಂದ್ರ ಗ್ರಂಥಾಲಯಗಳನ್ನು ಸ್ಥಾಪಿಸಲು ಸಾಧ್ಯವಾಯಿತು. ಇದರ ಅನ್ವಯ ಬಳ್ಳಾರಿಯಲ್ಲಿ ಡಾ. ಅನಿಬೆಸೆಂಟ್ ಸ್ಮಾರಕ ಉಚಿತ ಗ್ರಂಥಾಲಯವು ಇಡೀ ಜಿಲ್ಲೆಯಲ್ಲಿ ಹಳೆಯ ಗ್ರಂಥಾಲಯವಿದು. "ಸರಕಾರದ ಧನಸಹಾಯದೊಂದಿಗೆ ಜಿಲ್ಲಾ ಹಾಗೂ ತಾಲೂಕು ಮಟ್ಟದಲ್ಲಿ ಸಾರ್ವಜನಿಕ ಗ್ರಂಥಾಲಯಗಳನ್ನು ಪ್ರಾರಂಭಿಸುವ ಯೋಜನೆಯೊಂದನ್ನು ೧೯೧೭ರಲ್ಲಿ ಜಾರಿಗೊಳಿಸ ಲಾಯಿತು".[೧೦೮] ಅದರನ್ವಯ ಗ್ರಾಮೀಣ ಗ್ರಂಥಾಲಯಗಳನ್ನು ಪ್ರಾರಂಭಿಸಲಾಯಿತು. ಈ ದಿಸೆಯಲ್ಲಿ ಬಳ್ಳಾರಿ ಜಿಲ್ಲಾ ಕೇಂದ್ರ ಗ್ರಂಥಾಲಯವು ೧೯೫೨ರಲ್ಲಿ ಪ್ರಾರಂಭವಾಯಿತು. ಬಳ್ಳಾರಿ ಜಿಲ್ಲೆಯು ಕ್ರಿ.ಶ. ೧೮೫೩ರಲ್ಲಿ ವಿಶಾಲ ಮೈಸೂರು ರಾಜ್ಯದಲ್ಲಿ ವಿಲೀನಗೊಂಡಾಗ ಜಿಲ್ಲೆಯಲ್ಲಿ ೨೧ ಗ್ರಾಮೀಣ ಗ್ರಂಥಾಲಯಗಳಿದ್ದವು. ಪ್ರಸ್ತುತತವೂ ಇವೆ. ಈ ಗ್ರಂಥಾಲಯದ ಕಟ್ಟಡಗಳನ್ನು ಬಹಳ ಸರಳವಾಗಿ, ಆಕರ್ಷಕವಾಗಿ, ಕಟ್ಟಡದ ಒಳಭಾಗಕ್ಕೆ ಬೆಳಕು ಮತ್ತು ಗಾಳಿ ಒಳಸೂಸುವ ಹಾಗೆ ಹಾಗೂ ಕೆಂಪು ಬಣ್ಣದಿಂದ ಕಟ್ಟಲ್ಪಟ್ಟಿರುವ ಕಟ್ಟಡಗಳು ಇಂದಿಗೂ ಜೀವಂತವಾಗಿ ಸಾರ್ವಜನಿಕರಿಗೆ ಉಪಯೋಗವಾಗುತ್ತಿವೆ.

## ಗ್ರಂಥಾಲಯ

ರಾಯದುರ್ಗ ಪಟ್ಟಣದಲ್ಲಿ ಲಕ್ಷ್ಮಿ ಬಜಾರ್‌ನಲ್ಲಿರುವ ರಿಡಿಂಗ್ ರೂಂನ್ನು ೧೯೨೯ರಲ್ಲಿ ಶ್ರೀ ಜೆ.ಕೆ. ರುದ್ರಯ್ಯ ಶೆಟ್ಟಿಗಾರರು ಎಂಬ ಗುತ್ತಿಗೆದಾರರು ಕಟ್ಟಿಸಿರುವ ಕಟ್ಟಡವನ್ನು ಬಳ್ಳಾರಿ ಜಿಲ್ಲಾ ಕಲೆಕ್ಟರ್ ಆಗಿದ್ದ ಇ. ಬೆನ್ನಟ್‌ರವರು ಉದ್ಘಾಟಿಸಿರುವುದು ಹಳೆಯ ಕಟ್ಟಡದ ಪ್ರವೇಶ ದ್ವಾರದ ಮೇಲ್ಭಾಗದಲ್ಲಿರುವ ಶಿಲಾಫಲಕದಿಂದ ದೃಢಪಟ್ಟಿದೆ. ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಎರಡು ಅಡಿ ಎತ್ತರದ ಬೆಸ್‌ಮೆಂಟ್ ಮೇಲೆ ನಿರ್ಮಿಸಲ್ಪಟ್ಟಿದೆ. ಇದು ಕೇವಲ ಎರಡು ಕೊಠಡಿಗಳನ್ನು ಒಳಗೊಂಡಿದೆ. ಪ್ರತಿಯೊಂದು ಕೊಠಡಿಯು ವಿಶಾಲವಾಗಿದ್ದು, ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಒಳಸೂಸಿಸಲು ಕಿಡಕಿ, ಬಾಗಿಲು ಮತ್ತು ಜಾಲಂಧ್ರಗಳನ್ನು ಅಳವಡಿಸಿದೆ. ಕಟ್ಟಡದ ಮೇಲ್ಛಾವಣಿಯು ಇಳಿಜಾರು ಹೆಂಚಿನ ಛಾವಣಿಯನ್ನು ಹೊಂದಿದೆ. ಅದಕ್ಕೆ ಹೊಂದಿಕೊಂಡಂತೆ ಸುತ್ತಲೂ ಹೆಂಚಿನ ಇಳಿಜಾರು ಹಜಾರವಿದೆ. ಈ ಹಜಾರದಲ್ಲಿ ಮರದ ಕೊಂಬಗಳನ್ನು ನಿಲ್ಲಿಸಲಾಗಿದೆ. ಪ್ರಸ್ತುತ ಈ ಕಟ್ಟಡಕ್ಕೆ ಸುತ್ತಲೂ ಕಾಂಪೌಂಡ್ ಗೋಡೆಯನ್ನು ಕಟ್ಟಿ ಸಂರಕ್ಷಣೆ ಮಾಡಲಾಗಿದೆ. ಹಳೆಯ ಕಟ್ಟಡದ ಮುಂಭಾಗದಲ್ಲಿ ಹೊಸ ರಿಡಿಂಗ್ ರೂಂನ್ನು ಕಟ್ಟಲಾಗಿದೆ. ಹಳೆಯ ಕಟ್ಟಡವು ಮಳೆ ಬಂದರೆ ಸೋರುತ್ತಿದ್ದ ಕಾರಣಕ್ಕಾಗಿ

ಅಲ್ಲಿದ್ದ ಪುಸ್ತಕಗಳನ್ನು ಅದರ ಮುಂಭಾಗದಲ್ಲಿರುವ ಹೊಸ ಕಟ್ಟಡಕ್ಕೆ ಸ್ಥಳಾಂತರ ಮಾಡಲಾಗಿದೆ ಎಂದು ಗ್ರಂಥಪಾಲಕಿಯಾದ ಶ್ರೀಮತಿ ಟಿ. ತಿರುಪತಮ್ಮ ಅವರು ಮಾಹಿತಿ ನೀಡಿದರು.

**ತುಂಗಭದ್ರಾ ಯೋಜನೆ**

ಬಳ್ಳಾರಿ, ಕೊಪ್ಪಳ, ರಾಯಚೂರು, ನೆರೆಯ ಆಂಧ್ರಪ್ರದೇಶ ಅನಂತಪುರ ಮತ್ತು ಕಡಪ ಜಿಲ್ಲೆಗಳ ರೈತರು ಹಾಗೂ ಜನರಿಗೆ ತುಂಗಭದ್ರೆಯೇ ಜೀವನದಿ. ಆದರೆ, ಪ್ರತಿ ವರ್ಷಕ್ಕಿಂತ ವರ್ಷ ಪಶ್ಚಿಮಘಟ್ಟದಲ್ಲಿ ಮಾತ್ರವಲ್ಲದೇ ರಾಜ್ಯದ್ಯಾಂತ ಮಳೆಯ ಪ್ರಮಾಣದ ಕಲಸಿತದಿಂದ ಟಿ.ಬಿ. ಡ್ಯಾಂನಲ್ಲಿನ ನೀರಿನ ಪ್ರಮಾಣ ದಿನೇ ದಿನೇ ಕುಸಿಯುತ್ತಲೇ ಇದೆ. ಕಳೆದ ವರ್ಷ ಮಾರ್ಚ್ ೨೦೧೬ರಂದು ಜಲಾಶಯ ನೀರಿನ ಮಟ್ಟ ೧೬೦೨.೧೫ ಅಡಿ ಇದ್ದರೆ, ಇಂದು ಇರುವುದು ೧೫೮೭.೧೬ ಅಡಿ ಮಾತ್ರ. ಹಿಂದಿನ ವರ್ಷ ೧೫ ಟಿಎಂಸಿಯಷ್ಟಿದ್ದ ನೀರು ಇಂದು ಕೇವಲ ೭.೮೦ ಟಿಎಂಸಿಯಷ್ಟಿದೆ. ಡ್ಯಾಂನಲ್ಲಿರುವ ಈಗಿನ ನೀರಿನ ಪ್ರಮಾಣವನ್ನು ಗಮನಿಸಿದಾಗ, ಮುಂದಿನ ದಿನಗಳಲ್ಲಿ ಕುಡಿಯುವ ನೀರಿಗೆ ಹಾಹಾಕಾರ ಏಳುವುದು ನಿಶ್ಚಿತ ಎನಿಸುತ್ತಿದೆ. ಇಂತಹ ಸಂದರ್ಭದಲ್ಲಿಗಳು ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿಯೂ ಸಾಕಷ್ಟು ಭೀಕರ ಬರಗಾಲ ಎದುರಾಗಿತ್ತು. "೧೮೭೬-೭೮ರಲ್ಲಿ ಮಳೆಯ ಅಭಾವದಿಂದ ಬೆಳೆ ನಾಶವಾಯಿತು. ಈ ಭೀಕರ ಬರೆದ ಅವಧಿಯಲ್ಲೇ ಭಾರತದಿಂದ ೩.೨೦ ಲಕ್ಷ ಟನ್ ಗೋಧಿಯನ್ನು ಇಂಗ್ಲೆಂಡ್ ಕಳುಹಿಸಲಾಗಿತ್ತು".[೧೦೯] ಇದರಿಂದ ಕರ್ನಾಟಕದ ಪ್ರತಿ ಮನೆಯಲ್ಲಿ ಆಹಾರ ಧಾನ್ಯಗಳ ಕೊರತೆಯುಂಟಾಯಿತು. ಅಂಗಡಿಗಳಲ್ಲೂ ಲಭ್ಯ ಇರಲಿಲ್ಲ. ಜನರ ಜೊತೆ ಜಾನುವಾರಗಳೂ ಅನ್ನ ನೀರಿಲ್ಲದೇ ಮೂಳೆ ಚಕ್ಕಳಗಳಾಗಿ, ಜೀವಂತ ಅಸ್ಥಿಪಂಜರದಂತಾಗಿ ಪ್ರಾಣಬಿಟ್ಟವು. ಮಲೇರಿಯಾ, ಕಾಲರಾ, ಪ್ಲೇಗು ಮಾರಿ ರೋಗಗಳ ಕಾಟದಿಂದಾಗಿ ಸತ್ತ ಜನರಿಂದ ಊರು ಕೇರಿಗಳು ತುಂಬಿದ್ದವು. ಸತ್ತವರ ಸಂಸ್ಕಾರ್ಕೂ ಜನರಿಲ್ಲದೇ ನರಿ, ನಾಯಿ, ರಣಹದ್ದು, ಕಾಗೆಗಳಿಗೆ ಆಹಾರವಾಗಿ ಹೋದರು. ಇಡೀ ದಕ್ಷಿಣ ಭಾರತದಲ್ಲಿ ಸುಮಾರು ಒಂದು ಕೋಟಿಯಷ್ಟು ಜನಸಂಖ್ಯೆ ಬರದಿಂದ ಅಳಿಸಿ ಹೋಯಿತು.

"ಬ್ರಿಟಿಷರು ಬರಪರಿಹಾರಕ್ಕಾಗಿ ಗಂಜಿ ಕೇಂದ್ರಗಳನ್ನು ಸ್ಥಾಪಿಸಿದರು. ಸಶಕ್ತರಿಗೆ ಕೂಲಿಗಾಗಿ ಕಾಳು, ದುರ್ಬಲರು, ಮುದುಕರು ಹಾಗೂ ಮಕ್ಕಳಿಗೆ ಉಚಿತ ಗಂಜಿ ಕೇಂದ್ರ ತೆರೆದರು".[೧೧೦] ಈ ಮೂಲಕ ಜನರ ದಾಹವನ್ನು ನೀಗಿಸಿದರು. ಬಳ್ಳಾರಿ, ರಾಯಚೂರು, ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳ ಜನರ ಬರವನ್ನು ಖಾಯಂ ಆಗಿ ಅಳಸಿ ಹಾಕಬೇಕೆಂದರೆ "ತುಂಗಭದ್ರಾ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟನ್ನು ಈಗಿನ ಹೊಸಪೇಟೆಯ ಪಕ್ಕದಲ್ಲಿ ನಿರ್ಮಿಸಬೇಕೆಂದು ಮಾನವೀಯ ಬ್ರಿಟಿಷ್ ನೀರಾವರಿ ತಜ್ಞ ಅರ್ಥರ್ ಕಾಟನ್ ವರದಿ ನೀಡಿದರು".[೧೧೧] ಬರ ಪರಿಹಾರಕ್ಕಾಗಿ ಸರ್ಕಾರ ಖರ್ಚು ಮಾಡುವ ಹಣದ ಸ್ವಲ್ಪ ಮೊತ್ತದಲ್ಲೇ ಈ ಅಣೆಕಟ್ಟು ಹಾಗೂ ಕಾಲುವೆಗಳನ್ನು ನಿರ್ಮಿಸಿ ಈ ಭಾಗದ ಶಾಶ್ವತ ಬರವನ್ನು ನೀಗಬಹುದು ಎಂದು

ಸಲಹೆ ನೀಡಿದರು. ಆ ವೇಳೆಗಾಗಲೇ ಜನಾನುರಾಗಿಯಾಗಿದ್ದ ಅರ್ಥರ್ ಕಾಟನ್ ತಮಿಳುನಾಡು, ಆಂಧ್ರಪ್ರದೇಶ ಸೇರಿದಂತೆ ದೇಶದೆಲ್ಲೆಡೆ ಅನೇಕ ಅಣೆಕಟ್ಟುಗಳನ್ನು ನಿರ್ಮಿಸಿ ನೀರಾವರಿ ಒದಗಿಸಿ ಜನರ ಕಣ್ಮಣಿಯಾಗಿದ್ದ. ಆದರೆ ಬ್ರಿಟಿಷ್ ಸರ್ಕಾರ ಹಣಕಾಸಿನ ಕೊರತೆಯ ನೆಪದಲ್ಲಿ ಈ ಯೋಜನೆಯನ್ನು ಮುಂದಕ್ಕೆ ಹಾಕಿತು. "೧೯೦೨ರಲ್ಲಿ ಮದ್ರಾಸ್ ಸರ್ಕಾರದ ಮುಖ್ಯ ಇಂಜಿನಿಯರ್ ಆಗಿದ್ದ ಕರ್ನಲ್ ಸ್ಮಾರ್ಟ್‌ರವರು ತುಂಗಭದ್ರಾ ಅಣೆಕಟ್ಟಿನ ನಿರ್ಮಾಣಕ್ಕಾಗಿ ವಿವರವಾದ ವರದಿಯನ್ನು ಸಿದ್ಧಪಡಿಸಿ ಅದೇ ತಾನೇ ರಚಿಸಲಾಗಿದ್ದ ನೀರಾವರಿ ಆಯೋಗಕ್ಕೆ ಸಲ್ಲಿಸಿದರು".[೧೧೨] ನಂತರ ಬಂದ ಮೆಕೆಂಜಿ ಎಂಬ ಮುಖ್ಯ ಇಂಜಿನಿಯರ್ ಹೊಸಪೇಟೆ ಪಕ್ಕದಲ್ಲಿದ್ದ ಮಲ್ಲಾಪುರದಲ್ಲಿ ಎರಡು ಗುಡ್ಡಗಳ ನಡುವೆ ಅಣೆಕಟ್ಟನ್ನು ನಿರ್ಮಿಸಿ ಅಲ್ಲಿಂದ ಈ ಜಿಲ್ಲೆಗಳಿಗೆ ವಿವಿಧ ಕಾಲುವೆಗಳ ಮೂಲಕ ನೀರು ಒದಗಿಸಬೇಕು ಎಂದು ವರದಿ ನೀಡಿದರು. ಆದರೆ, ಹೈದರಾಬಾದ್ ನಿಜಾಮ ಸರ್ಕಾರದ ಅಧಿಕಾರಿಗಳು ನದಿಯ ಮೇಲೆ ತಮಗೂ ಹಕ್ಕಿದೆ ಎಂದು ತಮ್ಮ ಪ್ರದೇಶದಲ್ಲಿಯೇ ಅಣೆಕಟ್ಟನ್ನು ನಿರ್ಮಿಸಲು ಒತ್ತಾಯ ಮಾಡಿದರು. ಮುಂಬಾಯಿ ಪ್ರಾಂತ, ಮೈಸೂರು ರಾಜರ ಸರ್ಕಾರ, ಹೈದರಾಬಾದ್ ನಿಜಾಮ ಮತ್ತು ಮದ್ರಾಸ್ ಪ್ರಾಂತೀಯ ಸರ್ಕಾರ ಹೀಗೆ ನಾಲ್ಕೂ ಸರ್ಕಾರಗಳು ತಮ್ಮ ತಮ್ಮ ಹಿತಾಸಕ್ತಿಗೆ ಅನುಗುವಾಗಿ ಅಣೆಕಟ್ಟು ನಿರ್ಮಿಸುವ ಪ್ರಸ್ತಾವನೆ ಸಲ್ಲಿಸಿದವು. ಅಣೆಕಟ್ಟಿನ ನಿರ್ಮಾಣ ನೆನೆಗುದಿಗೆ ಬಿತ್ತು.

ಕ್ರಿ.ಶ. ೧೯೪೦ರಲ್ಲಿ ಮದ್ರಾಸ್ ಸರ್ಕಾರ ಮತ್ತೆ ಈ ಯೋಜನೆಯನ್ನು ಕೈಗೆತ್ತಿಕೊಂಡಿತು. ಆಗಿನ ಮುಖ್ಯ ಇಂಜಿನಿಯರ್ ಆಗಿದ್ದ ತಿರುಮಲೆ ಅಯ್ಯಂಗಾರ್ ನೇತೃತ್ವದಲ್ಲಿ ಒಂದು ವಸ್ತುನಿಷ್ಠ ಕಾರ್ಯಯೋಜನಾ ವರದಿ ತಯಾರಿಸಲು ನೇಮಿಸಲಾಯಿತು. ನಿಜಾಮನ ಸರ್ಕಾರ ಸಿ.ಸಿ. ಬಾಲಾಲ್ ಎಂಜ ಇಂಜಿಯರ್‌ರನ್ನು ನೇಮಿಸಿ ಪ್ರತ್ಯೇಕ ವರದಿ ಸಿದ್ಧಪಡಿಸಿ ಸಲ್ಲಿಸಿತು. ಆದರೆ ಎರಡೂ ವರದಿಗಳನ್ನು ಅಳೆದು ತೂಗಿ ನೋಡಿದ 'ಬ್ರಿಟಿಷ್ ಸರ್ಕಾರ ೧೯೪೨ರಲ್ಲಿ ತಿರುಮಲೆ ಅಯ್ಯಂಗಾರ್ ನೀಡಿದ ವರದಿಯೇ ಅತ್ಯಂತ ಪ್ರಶಸ್ತವಾದುದು ಎಂದಿತು". ಇಲ್ಲವಾದಲ್ಲಿ ಈ ಕಣೆಕಟ್ಟು ಕರ್ನೂಲು ಅಥವಾ ಇನ್ನೆಲ್ಲೋ ನಿರ್ಮಾಣವಾಗುತ್ತಿತ್ತೇನೋ. ಹೀಗೆ ಈಗಿನ ಹೊಸಪೇಟೆ ಹತ್ತಿರ ಆಗ ಇದ್ದ ಮಲ್ಲಾಪುರದ ಬಳಿ ೧೩೩ ಟಿಎಂಸಿ ಸಂಗ್ರಹ ಸಾಮರ್ಥ್ಯದ ಅಣೆಕಟ್ಟು ನಿರ್ಮಾಣ ಆರಂಭವಾಯಿತು. "೨೮ನೇ ಫೆಬ್ರವರಿ ೧೯೪೫ರಂದು ಇಂದಿನ ಮುನಿರಾಬಾದ್ ಬಳಿ ಹೈದರಾಬಾದ್ ನಿಜಾಮ, ಇತ್ತ ಹೊಸಪೇಟೆ ಕಡೆ ಮದ್ರಾಸ್ ಪ್ರಾಂತೀಯ ಸರ್ಕಾರದ ಗವರ್ನರ್ ಆಗಿದ್ದ ಸರ್ ಅರ್ಥರ್ ಹೋಪ್ ಅಡಿಗಲ್ಲನ್ನು ಹಾಕಿ ಈ ಯೋಜನೆಯನ್ನು ಉದ್ಘಾಟಿಸಿದರು".[೧೧೩] ಅಂದು ತಿರುಮಲೆ ಅಯ್ಯಂಗಾರ್ ನೇತೃತ್ವದಲ್ಲಿ ನಿರ್ಮಾಣ ಕಾರ್ಯ ಭರದಿಂದ ಆರಂಭವಾಯಿತು. ಆದರೆ, ನಿರ್ಮಾಣ ವಸ್ತುಗಳ ಬಳಕೆಯ ವಿವಾದ, ನಿಜಾಮರ ಆಳ್ವಿಕೆಯ ಅಂತ್ಯ ದೇಶಕ್ಕೆ ದೊರೆತ ಸ್ವಾತಂತ್ರ್ಯ, ಬದಲಾದ ಆಡಳಿತ ಮುಂತಾದ ಕಾರಣಗಳಿಂದ ಈ ಯೋಜನೆ ಕುಂಟುತ್ತಾ ಸಾಗಿತ್ತು. ನಂತರ ಸರ್.ಎಂ. ವಿಶ್ವೇಶ್ವರಯ್ಯ ನೇತೃತ್ವದ ಇಂಜಿನಿಯರ್‌ಗಳ

ಮಂಡಳಿಯ ಮೇಲ್ವಿಚಾರಣೆಯಲ್ಲಿ ಪುನಃ ನಿರ್ಮಾಣ ಕಾರ್ಯ ಭರದಿಂದ ಸಾಗಿತು. ಇದೇ ಕಾಲಘಟ್ಟದಲ್ಲಿ ಮಳೆ ಹೆಚ್ಚಾಗಿ, ನೀರಿನ ಪ್ರವಾಹದಿಂದ ಮಲ್ಲಾಪುರ ಮತ್ತು ಅದರ ಅಕ್ಕ-ಪಕ್ಕದಲ್ಲಿದ್ದ ಗ್ರಾಮಗಳು ಮುಳುಗಡೆಯಾಗಿದ್ದವು. ಇಲ್ಲಿದ್ದ ಜನವಸತಿಯನ್ನು ಪ್ರಸ್ತುತ ಹಗರಿಬೊಮ್ಮನಹಳ್ಳಿ ಅಕ್ಕ-ಪಕ್ಕದಲ್ಲಿ ಸ್ಥಳಾಂತರಿಸಲಾಯಿತು.

"ತುಂಗಭದ್ರಾ ಯೋಜನೆಯು ಆಗಿನ ಮದ್ರಾಸ್ ಸರ್ಕಾರ ಮತ್ತು ಹೈದರಾಬಾದ್ ಸಂಸ್ಥಾನಗಳ ಜಂಟಿ ಯೋಜನೆಯಲ್ಲಿ ೧೩೦.೭೬ ಕೋಟಿ ರೂಪಾಯಿ ವೆಚ್ಚದಲ್ಲಿ ಪ್ರಸ್ತುತ ಇರುವ ಅಣೆಕಟ್ಟನ್ನು ೧೯೫೩ರಲ್ಲಿ ಪೂರ್ಣಗೊಳಿಸಲಾಗಿತ್ತು".[೧೧೪] ಅಣೆಕಟ್ಟಿನ ಜಲಾನಶಯನ ವಿಸ್ತೀರ್ಣ ೧೦.೮೮೦ ಚದರ ಮೈಲಿಗಳಷ್ಟಿದ್ದು, ೧೪೬ ಚದರ ಮೈಲಿಗಳಷ್ಟು ನೀರು ವ್ಯಾಪಿಸುವ ಪ್ರದೇಶವಿದೆ. ಜಲಾಶಯದ ಗರಿಷ್ಟ ನೀರಿನ ಮಟ್ಟ ೧೬೩೩ ಅಡಿಗಳಾಗಿವೆ. ಅದರಲ್ಲಿ ತುಂಬುವ ಉಪಯುಕ್ತ ನೀರಿನ ಪ್ರಮಾಣ ೧.೩೦೦ ದಶಲಕ್ಷ ಘನ ಅಡಿಗಳು. ಅಣೆಕಟ್ಟಿನ ಮೇಲ್ಭಾಗದ ಉದ್ದ ೯.೦೩೪ ಅಡಿಗಳಾಗಿದ್ದು, ಗರಿಷ್ಟ ಎತ್ತರ ೧೩೨ ಅಡಿಗಳಷ್ಟಿದೆ. ೧೯೫೩ರಲ್ಲಿ ಮೊದಲ ಬಾರಿಗೆ ಕಾಲುವೆಯಲ್ಲಿ ನೀರು ಹರಿಯಿತು. ನೂರಾರು ಕಿಲೋಮೀಟರ್ ಉದ್ದದ ಮೂರು ಕಾಲುವೆಗಳ ನಿರ್ಮಾಣವೂ ಮುಂದುವರೆದು ೧೯೬೦ರ ವೇಳೆಗೆ ಸಂಪೂರ್ಣಗೊಂಡಿತು.

ಪ್ರಸ್ತುತ ಇರುವ ಹಾಗೆ ಅತ್ಯಾಧುನಿಕ ಯಂತ್ರಗಳು ಇಲ್ಲದೆ ೩೪೦ ಕಿ.ಮೀ. ಉದ್ದ ಕಾಲುವೆಗಳ ನಿರ್ಮಾಣಕ್ಕೆ ಮಾನವ ಶಕ್ತಿ ಬಳಕೆಯಾಯಿತು. ಕಲ್ಲು-ಗುಡ್ಡಗಳಲ್ಲಿ ಕಿಲೋಮೀಟರ್ ಗಟ್ಟಲೇ ಸುರಂಗವನ್ನು ಕೊರೆದು ಕಾಲುವೆ ನಿರ್ಮಿಸಿದ್ದು ನೋಡಿದರೆ ವಿಸ್ಮಯವಾಗುತ್ತದೆ. ಇಂತಹ ಸವಾಲುಗಳನ್ನು ಎದುರಿಸಿ ಅಣೆಕಟ್ಟನ್ನು ನಿರ್ಮಿಸಿದ ತಿರುಮಲೆ ಅಯ್ಯಂಗಾರ್ ಆಧುನಿಕ ಭಗೀರಥನೇ ಸರಿ. ಇವರ ಶ್ರಮದಿಂದಾಗಿ ಬರಡು ಬೆಂಗಾಡಾಗಿದ್ದ ಬಳ್ಳಾರಿ, ರಾಯಚೂರು, ಅನಂತಪುರ, ಕರ್ನೂಲು, ಮೆಹಬೂಬ್ ನಗರದ ಸುಮಾರು ೧೬ ಲಕ್ಷ ಎಕರೆ ಜಮೀನಿನಲ್ಲಿ ಭತ್ತ, ಕಬ್ಬು, ಬಾಳೆ ಬೆಳೆಯಲಾಗುತ್ತಿದೆ. ಗಂಗಾವತಿ-ಸಿಂಧನೂರಿನ ಪ್ರದೇಶವನ್ನು ಭತ್ತದ ಕಣಜವೆಂದೇ ಗುರುತಿಸಲಾಗುತ್ತಿದೆ. ಕರ್ನಾಟಕ, ತೆಲಂಗಾಣ ಹಾಗೂ ಆಂಧ್ರಪ್ರದೇಶದ ಐದು ಜಿಲ್ಲೆಗಳ ಒಂದು ಕೋಟಿಗೂ ಅಧಿಕ ಜನರು ತುಂಗಭದ್ರಾ ಅಣೆಕಟ್ಟಿನ ನೀರನ್ನು ಬಳಸುತ್ತಿದ್ದಾರೆ. ಈ ಸಮೃದ್ಧಿಗೆ ಕಾರಣಕರ್ತರಾದ ತಿರುಮಲೆ ಅಯ್ಯಂಗಾರರ ಪ್ರತಿಮೆಯನ್ನು ಕೆಲ ರೈತರು ಸೇರಿ ಅಣೆಕಟ್ಟಿನ ಬಲದಂಡೆಯಲ್ಲಿ ನಿರ್ಮಿಸಿದ್ದಾರೆ. ಟಿ.ಬಿ.ಡ್ಯಾಂ ಜನವಸತಿ ಪ್ರದೇಶದಲ್ಲಿ ನಿರ್ಮಿಸಿದ ಸಮುದಾಯ ಭವನಕ್ಕೆ ತಿರುಮಲೆ ಅಯ್ಯಂಗಾರ್ ಹಾಲ್ ಎಂದು ಹೆಸರಿಸಲಾಗಿದೆ. ಇದಲ್ಲದೆ ತುಂಗಭದ್ರಾ ಮಂಡಳಿಯು ಅಣೆಕಟ್ಟು ಪ್ರದೇಶದಲ್ಲಿ ಉದ್ಯಾನ, ನೀರಿನ ಕಾರಂಜಿ(ಸಂಗೀತ ಕಾರಂಜಿ), ಜಿಂಕೆವನ, ಮತ್ಸ್ಯಾಲಯ(ಅಕ್ವೇರಿಯಂ) ಇತ್ಯಾದಿಗಳನ್ನು ವ್ಯವಸ್ಥೆಗೊಳಿಸಿದೆ. ಇವೆಲ್ಲವುಗಳಿಂದಾಗಿ ಅಣೆಕಟ್ಟು ಪ್ರದೇಶವು ಒಂದು ರಮ್ಯ-ಪ್ರೇಕ್ಷಣೀಯ ಸ್ಥಳವಾಗಿಯೂ ಗಮನ ಸೆಳೆಯುತ್ತದೆ.

## ಸಾರಿಗೆ ಮತ್ತು ಸಂಪರ್ಕ

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯು ತನ್ನ ರಾಜಕೀಯ ಪ್ರಭುತ್ವವನ್ನು ಭಾರತದಲ್ಲಿ ಸ್ಥಾಪಿಸುವುದಕ್ಕಿಂತ ಮುಂಚೆ, ಸಾರ್ವಜನಿಕೋಪಯೋಗಿ ಕೆಲಸಗಳ ಅಭಿವೃದ್ಧಿಗಾಗಿ ಸರ್ಕಾರಿ ಕಾರ್ಯಾಚರಣೆಗಳ ಒಂದು ಅದ್ಭುತವಾದ ಪರಂಪರೆ ಭಾರತದಲ್ಲಿತ್ತು. ದೇಶದ ವಿಭಿನ್ನ ಭಾಗಗಳನ್ನು ವ್ಯಾಪಾರಿ ಹಾಗೂ ಇತರೆ ಉದ್ದೇಶಗಳಿಗಾಗಿ ರಸ್ತೆಗಳು ಮತ್ತು ಜಲಸಾರಿಗೆಗಳ ಮೂಲಕ ಪರಿಸ್ಪರ ಸಂಪರ್ಕಗೊಳಿಸಲಾಗಿತ್ತು. ಭಾರತೀಯ ಜನತೆ ಬ್ರಿಟಿಷರ ಸಂಪರ್ಕದಿಂದಾಗಿ ಆಧುನಿಕತೆಯ ಮೆಟ್ಟಿಲನ್ನು ಸುಲಭವಾಗಿ ಹತ್ತಲು ಅವಕಾಶವಾಯಿತು. ಹೊಸ ಹೊಸ ಆಧುನಿಕ ಅನುಕೂಲಗಳು ಈ ಕಾಲದಲ್ಲಿ ಭಾರತದಲ್ಲಿ ತಲೆದೋರಲು ಆರಂಭಿಸಿದವು. ಇಂಗ್ಲಿಷ್ ಶಿಕ್ಷಣ, ರೈಲು, ಸಂಚಾರ ವ್ಯವಸ್ಥೆ, ಬಂದರುಗಳ ಬೆಳವಣಿಗೆ, ಗಣಿಗಾರಿಕೆ, ಅಂಚೆ ಪದ್ಧತಿ ಮುಂತಾದ ಹತ್ತಾರು ವಿಷಯಗಳಲ್ಲಿ ಇದ್ದಕ್ಕಿದ್ದಂತೆ ಭಾರತ ಮುಂದುವರಿಯಿತು. ಮೌರ್ಯರ ಮತ್ತು ಮೊಘಲರ ಕಾಲಾವಧಿಯಲ್ಲಿ ಭಾರತ ಕಂಡಿದ್ದು ರಾಜಕೀಯ ಏಕತೆ ಮತ್ತೆ ಬ್ರಿಟಿಷರ ಕಾಲದಲ್ಲಿ ಕಾಣಬಂದಿತ್ತು. ಸಾಮಾನ್ಯವಾಗಿ ಎಲ್ಲಾ ಇತಿಹಾಸಕಾರರೂ ಮೆಚ್ಚಿಕೊಂಡಿರುವಂತೆ ಬ್ರಿಟಿಷರ ಆಡಳಿತ ಪದ್ಧತಿ ಭಾರತದ ಮೇಲೆ ವಿಶೇಷ ಪರಿಣಾಮ ಬೀರಿತು. ಇದರಿಂದಾಗಿ ಸಾಮಾಜಿಕ, ಆರ್ಥಿಕ ಮತ್ತು ಇತರ ವಿಷಯಗಳಲ್ಲಿ ಹೊಸ ಚೈತನ್ಯ ಮೂಡಿಬಂದಿತು. ಒಟ್ಟಿನಲ್ಲಿ ಭಾರತ ಹೊರದೇಶಗಳೊಡನೆ ಸಂಪರ್ಕ ಹೊಂದಿ ಆಧುನಿಕತೆಯ ಮೆಟ್ಟಿಲಿಗೆ ಬಂದು ನಿಲ್ಲಲು ಅನುಕೂಲವಾಯಿತು.

ಭಾರತದಲ್ಲಿ ಬ್ರಿಟಿಷ್ ಆಡಳಿತ ಸ್ಥಾಪಿತವಾದಾಗ, ವಾಹನ ಸಂಚಾರಕ್ಕೆ ಯೋಗ್ಯವಾದ ಸಾಕಷ್ಟು ದೂರದ ಒಂದು ರಸ್ತೆ ಕೂಡ ಇರಲಿಲ್ಲ. ಅನೇಕ ದೊಡ್ಡ ಪಟ್ಟಣಗಳ ಮುಖ್ಯ ರಸ್ತೆಗಳು ಕೂಡ ವಾಹನಗಳ ಬಳಕೆಗೆ ತಕ್ಕುವಾಗಿರಲಿಲ್ಲ.[೧೧೫] ಚಕ್ರವಾಹನಗಳು ಒಂದೇ ಹಲಗೆಯಿಂದ ಮಾಡಿದ್ದ ಚಕ್ರಗಳುಳ್ಳ ಒರಟು ಗೆದ್ದೆ ಗಾಡಿಗಳಿಗೆ ಸೀಮಿತವಾಗಿದ್ದವು. ಮೊದಲಿಗೆ ಎತ್ತು, ಕುದುರೆ ಇತ್ಯಾದಿ ಪ್ರಾಣಿಗಳು ಎಳೆದ ಗಾಲಿಯ ಬಂಡಿಯ ಮೂಲಕ ಸಾರಿಗೆ ಸಂಪರ್ಕವನ್ನು ಮಾಡಲಾಗುತ್ತಿತ್ತು. ಚಕ್ರದ ಆವಿಷ್ಕಾರಕ್ಕೆ ಮೊದಲ ಮಾನವನ ನಡೆಹಾದಿಗಳೇ ರಸ್ತೆಗಳಾಗಿದ್ದವು. ವೇಗವಾದ ಯಂತ್ರ ಚಾಲಿತ ವಾಹನಗಳ ಆವಿಷ್ಕಾರವಾದಂತೆ, ಉತ್ತಮ ರಸ್ತೆಗಳ ಅವಶ್ಯಕತೆ ಏರ್ಪಟ್ಟಿತು. ಮೊದಲಿಗೆ ಸೈನಿಕ ರಸ್ತೆ ನಿರ್ಮಾಣ ಬಹಳ ಪ್ರಮಾಣದಲ್ಲಿ ನಡೆಯಿತು. ಆದರೆ, ಅದಕ್ಕಾಗಿ ವೆಚ್ಚ ಮಾಡಿದ ಹಣ ಬಹುಮಟ್ಟಿಗೆ ವ್ಯರ್ಥವಾಗಿತ್ತು. ವಾಣಿಜ್ಯ ರಸ್ತೆಗಳನ್ನು ಮೊದಲ ಬಾರಿಗೆ ೧೮೧೩ರಲ್ಲಿ ಯೋಚಿಸಲಾಯಿತು. "ಆಧುನಿಕ ರಸ್ತೆಯ ಪಿತಾಮಹ ಎಂದು ಕರೆಯಲ್ಪಡುವ, ಸ್ಕಾಟ್‌ಲ್ಯಾಂಡ್‌ನ 'ಜಾನ್ ಲೌಡನ್ ಮೆಂಕಡಮ್' ಎಂಬ ಇಂಜಿನಿಯರು ೧೮೧೫ರಲ್ಲಿ ಸರಳವಾದ ಹಾಗೂ ನಂಬಿಕಾರ್ಹವಾದ ರಸ್ತೆಯ ನಿರ್ಮಾಣ ಕ್ರಮವನ್ನು ಕಂಡು ಹಿಡಿದನು".[೧೧೬] ಜಲ್ಲಿ, ಗ್ರಾವಲ್ ಪದರುಗಳನ್ನು ನೆಲದ ಮೇಲೆ ಹರಡಿ ಉರುಗಳೆಗಳಿಂದ ಅಡಕಿಸುವರು.

ನೀರನ್ನು ಸಿಂಪಡಿಸುವುದರಿಂದ ಗ್ರಾವೆಲ್‌ನಲ್ಲಿ ಉಂಟಾಗುವ ಜಿಗುಟು, ಜಲ್ಲಿಯನ್ನು ಬಲವಾಗಿ ಬಂಧಿಸುತ್ತದೆ. ಈ ರೀತಿಯ ರಸ್ತೆಗಳಿಗೆ ಅವನ ಹೆಸರನ್ನೇ ಇಟ್ಟು ಜಲಬಂಧ(ವಾಟರ್ ಬೌಂಡ್) ಮೆಕಡಂ ರಸ್ತೆ ಎಂದು ಕರೆದರು. ಮುಂದೆ, ಡಾಂಬರಿನ ಆವಿಷ್ಕಾರವಾದಾಗ ಜಲ್ಲಿಯನ್ನು ಬಿಸಿ ಡಾಂಬರಿನೊಂದಿಗೆ ಕಲಸಿ, ಮೆಕಡಂ ರಸ್ತೆಯ ಮೇಲೆ ಹರವಿ, ಉರುಳೆಯಿಂದ ಅಡಕಿಸಿದರು. ಇದರಿಂದ ನಯವಾದ, ದೃಢವಾದ, ಸರ್ವಋತು ಯೋಗ್ಯವಾದ ರಸ್ತೆಯು ದೊರೆಯಿತು. ಇದರ ಫಲವಾಗಿ ವಾಹನಗಳು ಹೆಚ್ಚು ಭಾರ ಹೊರಲು ಸಾಧ್ಯವಾಯಿತು. ವೇಗವಾದ ಸುಗಮವಾದ ಸಂಚಾರವೂ ಸಾಧ್ಯವಾಯಿತು.

ಭಾರತದಲ್ಲಿ ರಸ್ತೆ ನಿರ್ಮಾಣ ಲಾರ್ಡ್‌ಡಾಲ್‌ಹೌಸಿಯ ಆಡಳಿತಾವಧಿಯಲ್ಲಿ ಬಹಳ ಪ್ರಚೋದನೆ ಪಡೆಯಿತು. ಇದುವರೆಗೆ ಮುಖ್ಯ ರಸ್ತೆಗಳು ಪ್ರತಿ ಪ್ರೆಸಿಡೆನ್ಸಿಯ ಸೈನಿಕ ಮಂಡಲಿಯ ನಿಯಂತ್ರಣದಲ್ಲಿದ್ದವು. "೧೮೫೪ರಲ್ಲಿ ಒಂದು ಹೊಸ ಸುಧಾರಣೆ ಮಾಡಲಾಯಿತು. ಅದರ ಪ್ರಕಾರ ಅಧ್ಯಕ್ಷ ಸೈನಿಕ ಮಂಡಳಿಗಳನ್ನು ರದ್ದುಪಡಿಸಿ ರಸ್ತೆಗಳು ಮತ್ತು ಇತರ ಸಾರ್ವಜನಿಕ ಕಾರ್ಯಗಳ ಜವಾಬ್ದಾರಿಗಳನ್ನು ಸಾರ್ವಜನಿಕೋಪಯೋಗಿ ಕಾರ್ಯಗಳ ಇಲಾಖೆಗಳಿಗೆ (ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್ಸ್) ವಹಿಸಲಾಯಿತು".[೧೧೭] ಲಾರ್ಡ್‌ಡಾಲ್‌ಹೌಸಿಯ ಈ ಸುಧಾರಣೆ ಭಾರತದ ಸಂಪರ್ಕ ವ್ಯವಸ್ಥೆಯ ಅಭಿವೃದ್ಧಿಯಲ್ಲಿ ಒಂದು ಹೊಸ ಯುಗವನ್ನು ಸೂಚಿಸುತ್ತದೆ. ಪ್ರತಿಯೊಂದು ಪ್ರೆಸಿಡೆನ್ಸಿ ಸರ್ಕಾರ ಹೆಚ್ಚಿನ ಹಣವನ್ನು ಈ ಕ್ಷೇತ್ರದ ಅಭಿವೃದ್ಧಿಗೆ ತೊಡಗಿಸುವುದರ ಮೂಲಕ ರಾಜ್ಯದ ಸಮಗ್ರ ಪ್ರಗತಿಗೆ ಬುನಾದಿ ಹಾಕಿತು ಎನ್ನಬಹುದು. ಬ್ರಿಟಿಷರು ಈ ರೀತಿಯಾಗಿ ಆಧುನಿಕ ರೀತಿಯ ಸಾರಿಗೆ ಸಂಪರ್ಕಗಳನ್ನು ನಿರ್ಮಾಣ ಮಾಡಿದ್ದರ ಉದ್ದೇಶ ರಾಜ್ಯದ ಸಂಪನ್ಮೂಲಗಳನ್ನು ತಮ್ಮ ಹಿತಕ್ಕೆ ಬಳಸಿಕೊಳ್ಳುವುದೇ ಆಗಿದೆ. "ಅಂಚೆ ಕಛೇರಿಗಳನ್ನು ತೆರೆಯುವ ಮೂಲಕ, ರಸ್ತೆ ಹಾಗೂ ರೈಲು ಮಾರ್ಗಗಳನ್ನು ನಿರ್ಮಿಸುವ ಮೂಲಕ ಬ್ರಿಟಿಷರು ತಮ್ಮ ಆಳ್ವಿಕೆಯ ಗೋರಿಗಳನ್ನು ತಾವೇ ತೋಡಿಕೊಂಡರು"[೧೧೮] ಎಂದು ಇತಿಹಾಸಕಾರರ ಅಭಿಮತ. ಅಂದರೆ, ಯಾವುದೋ ಸ್ವಾರ್ಥದ ಉದ್ದೇಶವನ್ನಿಟ್ಟುಕೊಂಡು ಬ್ರಿಟಿಷ್ ವಸಾಹತು ಆಡಳಿತ ಸಾರಿಗೆ ಸಂಪರ್ಕಗಳನ್ನು ನಿರ್ಮಿಸಿದರೂ ಸಹ, ಪರೋಕ್ಷವಾಗಿ ಅವು ದೇಶೀಯ ಪ್ರಜೆಗಳ ಸಮಗ್ರ ಪ್ರಗತಿಗೆ ಅನುಕೂಲವಾದವು.

ಬಳ್ಳಾರಿ ಜಿಲ್ಲೆಯಲ್ಲಿ ರಸ್ತೆ ಸೌಲಭ್ಯ ವ್ಯವಸ್ಥಿತಗೊಳ್ಳುವ ಮುನ್ನ ಕುದುರೆ ಮತ್ತು ಎತ್ತಿನಗಾಡಿಗಳೇ ಈ ಪ್ರದೇಶದ ಪ್ರಮುಖ ಸಾಗಿಸುವ ಮಾಧ್ಯಮಗಳಾಗಿದ್ದವು. ಇದು ಮದ್ರಾಸ್ ಪ್ರಾಂತ್ಯದ ನೇರ ಆಳ್ವಿಕೆಗೆ ಒಳಪಟ್ಟ ಮೇಲೆ, ಸೀಡೆಡ್ ಜಿಲ್ಲೆಗಳ ಆಡಳಿತ ಕೇಂದ್ರವಾಗಿದ್ದ ಮದ್ರಾಸ್‌ನಿಂದ ಆಂಧ್ರದ ವೆಲ್ಲೂರು ಮಾರ್ಗವಾಗಿ ಬಳ್ಳಾರಿ, ಅನಂತಪುರ, ಕರ್ನೂಲು ಮತ್ತು ಕಡಪ ಜಿಲ್ಲೆಗಳಿಗೆ ಸಾರಿಗೆ ಸಂಪರ್ಕವನ್ನು ಕಲ್ಪಿಸಲಾಯಿತು. "೧೮೫೧ರಲ್ಲಿ ಮದ್ರಾಸ್ ಸರ್ಕಾರವು ಬಳ್ಳಾರಿಯಿಂದ ಹೊಸಪೇಟೆ ಮಾರ್ಗವಾಗಿ ಧಾರವಾಡಕ್ಕೆ ರಸ್ತೆಯನ್ನು ನಿರ್ಮಿಸಲು ಪ್ರಾರಂಭಿಸಿತು".[೧೧೯] ೧೮೬೬ ಮತ್ತು ೧೮೭೬ ಬರಗಾಲದಲ್ಲಿ ಈ ಯೋಜನೆಗೆ ವಿಶೇಷ ಚಾಲನೆ ದೊರೆಯಿತು. ಬಳ್ಳಾರಿಯಿಂದ

ಹೊಸಪೇಟೆ ಮಾರ್ಗವಾಗಿ ರಾಜ್ಯ ಹೆದ್ದಾರಿ ೨೫ರ ಮೂಲಕ ಪಶ್ಚಿಮ ಕರಾವಳಿಯಾದ ಮಂಗಳೂರಿಗೆ ಸಂಪರ್ಕವಿದೆ. ಸೊಲ್ಲಾಪುರದಿಂದ ಚಿತ್ರದುರ್ಗಕ್ಕಿರುವ ರಾಷ್ಟ್ರೀಯ ಹೆದ್ದಾರಿ ೧೩ ಹೊಸಪೇಟೆಯ ಮೂಲಕ ಹಾದು ಹೋಗಿದೆ. ಬಳ್ಳಾರಿಯಿಂದ ಬೆಂಗಳೂರಿಗೂ ಸಂಪರ್ಕ ಕಲ್ಪಿಸಿದೆ. ಬಳ್ಳಾರಿಯಿಂದ ರಾಜ್ಯ ಹೆದ್ದಾರಿ ೧೩೨ರ ಮೂಲಕ ಮಂತ್ರಾಲಯವನ್ನು ಸಂಪರ್ಕ ಹೊಂದಿದೆ. ಬಳ್ಳಾರಿಯಿಂದ ಗುತ್ತಿ, ಅನಂತಪುರ, ಕಡಪಕ್ಕೆ ರಾಜ್ಯ ಹೆದ್ದಾರಿ ಹಾದು ಹೋಗಿದೆ. ಹೀಗೆ ಊರಿಂದೂರಿಗೆ ಸಂಪರ್ಕ ಕಲ್ಪಿಸುವವುಗಳಿಗೆ ಹೆದ್ದಾರಿ ಎನ್ನುವರು. ಹೆದ್ದಾರಿಗಳು ಪ್ರಮುಖವಾಗಿ ಮೂರು ಬಗೆ - ರಾಷ್ಟ್ರೀಯ ಹೆದ್ದಾರಿ(ನ್ಯಾಷನಲ್ ಹೈವೆ-NH), ರಾಜ್ಯ ಹೆದ್ದಾರಿ(ಸ್ಟೇಟ್ ಹೈವೆ-SH) ಮತ್ತು ಗ್ರಾಮಾಂತರ ಹೆದ್ದಾರಿ(ರೂರಲ್ ಹೈವೆ). ದೇಶದ ಪ್ರಮುಖ ನಗರಗಳ, ರೇವುಪಟ್ಟಣಗಳ, ರಾಜ್ಯಗಳ ರಾಜಧಾನಿಗಳ, ಕೈಗಾರಿಕಾ ನಗರಗಳ, ಪ್ರವಾಸಿ ತಾಣಗಳ ನಡುವೆ ರಾಷ್ಟ್ರೀಯ ಹೆದ್ದಾರಿಯು ಸಂಪರ್ಕ ಕಲ್ಪಿಸುವುದು. ರಾಜ್ಯದ ಹೆದ್ದಾರಿಗಳು ರಾಜ್ಯದ ಪ್ರಮುಖ ಜಿಲ್ಲಾ ಕೇಂದ್ರಗಳ, ರಾಷ್ಟ್ರೀಯ ಹೆದ್ದಾರಿಗಳ, ನೆರೆ ರಾಜ್ಯದ ಹೆದ್ದಾರಿಗಳ ನಡುವೆ ಸಂಪರ್ಕವನ್ನು ಕಲ್ಪಿಸುತ್ತವೆ. ಗ್ರಾಮಾಂತರ ಹೆದ್ದಾರಿಗಳು ರಾಜ್ಯ ಹೆದ್ದಾರಿಯಿಂದ ಒಳನಾಡಿಗೆ ಸಂಪರ್ಕವನ್ನು ಕಲ್ಪಿಸುತ್ತವೆ. ರಸ್ತೆ, ಸೇತುವೆ ಮೊದಲಾದ ಕಾಮಗಾರಿ ಕೆಲಸಗಳಿಗೆ ಪ್ರತ್ಯೇಕವಾದ ಒಂದು ಇಲಾಖೆಯನ್ನು ಬ್ರಿಟಿಷರು ಸ್ಥಾಪಿಸಿದ್ದರು. ಅವರು ಸ್ಥಾಪಿಸಿದ್ದ ಸಾರ್ವಜನಿಕೋಪಯೋಗಿ ಕಾರ್ಯಗಳ ಇಲಾಖೆ(ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟ್ಸ್)ಯು ಪ್ರಸ್ತುತವೂ ಕಾರ್ಯನಿರ್ವಹಿಸುತ್ತಿದೆ.

### ರೈಲ್ವೆ ಸಾರಿಗೆ

ಭಾರತಕ್ಕೆ ರೈಲ್ವೆಯನ್ನು ಪ್ರಥಮ ಬಾರಿಗೆ ಪರಿಚಯಿಸಿದ ಕೀರ್ತಿ ಬ್ರಿಟಿಷರಿಗೆ ಸಲ್ಲುತ್ತದೆ. ರೈಲ್ವೆ ಮಾರ್ಗಗಳ ನಿರ್ಮಾಣದ ಪ್ರಮುಖ ಯೋಜನೆಗಳನ್ನು ಜಾರಿಗೊಳಿಸಿದವನು ಲಾರ್ಡ್‌ಡಾಲ್‌ಹೌಸಿ. ಅವನು ಭಾರತದ ತನ್ನ ಗವರ್ನರ್-ಜನರಲ್ ಹುದ್ದೆಯ ಅವಧಿಯಲ್ಲಿ ಅದನ್ನು ಮಾಡಿದ: ೧೮೫೩ರ ಅವನ ಪ್ರಸಿದ್ಧ ಸೂಚನಾಪತ್ರದಲ್ಲಿ, ಪ್ರತಿ ಪ್ರೆಸಿಡೆನ್ಸಿಯ ಒಳಭಾಗಗಳನ್ನು ಅದರ ಮುಖ್ಯ ಬಂದರಿನೊಡನೆ ಮತ್ತು ವಿಭಿನ್ನ ಪ್ರೆಸಿಡೆನ್ಸಿಗಳನ್ನು ಪರಸ್ಪರ ಕೂಡಿಸುವ ಪ್ರಧಾನ ರೈಲು ಮಾರ್ಗಗಳ ವ್ಯವಸ್ಥೆಯ ರಚನೆಯನ್ನು ಶಿಫಾರಸ್ಸು ಮಾಡಿದ. ಭಾರತದಲ್ಲಿ ರೈಲು ಮಾರ್ಗಗಳನ್ನು ಸ್ಥಾಪಿಸುವುದರಲ್ಲಿ ಅವನ ಉದ್ದೇಶಗಳು, ಅವನದೇ ಮಾತುಗಳಲ್ಲಿ "ಭಾರತ ಚಕ್ರಾಧಿಪತ್ಯದ ಪ್ರತಿಯೊಂದು ಸ್ಥಾನದ ಮೇಲೂ ತನ್ನ ಸೈನಿಕ ಪಡೆಗಳು ದಾಳಿ ಮಾಡುವ ಶಕ್ತಿಯನ್ನು ಗರಿಷ್ಠ ಮಟ್ಟಕ್ಕೆ ಏರಿಸುವುದು, ಬ್ರಿಟಿಷರ ಬಂಡವಾಳ ಮತ್ತು ಉದ್ಯಮವನ್ನು ಭಾರತಕ್ಕೆ ತರುವುದು, ಭಾರತಕ್ಕೆ ವಾಣಿಜ್ಯದ ಮತ್ತು ಸಾಮಾಜಿಕ ಅನುಕೂಲಗಳನ್ನು ಗಳಿಸಿಕೊಡುವುದು, ಒಳನಾಡಿನಿಂದ ಬಂದರುಗಳಿಗೆ ಉತ್ಪನ್ನವನ್ನು ತರುವುದು ಆಗಿದ್ದವು".[೧೨೦] ಈ ದಿಸೆಯಲ್ಲಿ ೧೮೫೩ರ ಏಪ್ರಿಲ್ ೧೬ರಂದು ಭಾರತದ ಮೊಟ್ಟ ಮೊದಲ ರೈಲು ಪ್ರಯಾಣಿಕರನ್ನು ಹೊತ್ತು ಬೊಂಬಾಯಿನ ಬೋರಿ ಬಂದರಿನಿಂದ ಥಾನವರೆಗೆ ಒಟ್ಟು ೩೨ ಕಿಲೋಮೀಟರ್ ದೂರದ ಪ್ರಯಾಣ ಆರಂಭಗೊಂಡಿತು.

ನಂತರ ಕಲ್ಕತ್ತ ಮತ್ತು ಬೊಂಬಾಯಿ ಬಳಿ ಎರಡು ಚಿಕ್ಕ ರೈಲು ಮಾರ್ಗಗಳಿಗಾಗಿ "ಈಸ್ಟ್ ಇಂಡಿಯನ್ ರೈಲ್ವೆ ಕಂಪನಿ ಮತ್ತು ೧೮೪೫ರಲ್ಲಿ ರಚಿತವಾದ ಗ್ರೇಟ್ ಇಂಡಿಯನ್ ಪೆನಿನ್‌ಶುಲರ್ ರೈಲ್ವೆ ಕಂಪನಿಗಳ ನಡುವೆ ಕರಾರುಗಳು ನಡೆದವು".[೧೨] ೧೮೫೫ರಲ್ಲಿ ಕಲ್ಕತ್ತದಿಂದ ರಾಣಿಗಂಜ್‌ವರೆಗಿನ ಒಟ್ಟು ೧೨೧ ಮೈಲಿಗಳ ದೂರವನ್ನು ಮೊದಲನೆಯ ಕಂಪನಿಯೂ, ಬೊಂಬಾಯಿಂದ ಕಲ್ಯಾಣದವರೆಗಿನ ೩೭ ಮೈಲಿಗಳ ದೂರ ರೈಲು ಮಾರ್ಗವನ್ನು ಎರಡನೆಯ ಕಂಪನಿಯೂ ಹಾಕಿದವು. ಮದ್ರಾಸ್ ರೈಲ್ವೆ ಕಂಪನಿಯು ಮದ್ರಾಸ್‌ನಿಂದ ಆರ್ಕಾಟ್‌ವರೆಗಿನ ೬೫ ಮೈಲಿಗಳದ್ದನ್ನು ೧೮೫೬ರಲ್ಲಿ ಪೂರೈಸಿತು.

ಮದ್ರಾಸ್ ಪ್ರಾಂತದಲ್ಲಿ ಭೌಗೋಳಿಕವಾಗಿ ದೊಡ್ಡ ಜಿಲ್ಲೆಯಾದ ಬಳ್ಳಾರಿಯು ಆಡಳಿತ ಕೇಂದ್ರ ಭಾಗದಿಂದ ಬಹು ದೂರದ ಅಂತರದಿಂದ ಕೂಡಿತು. ಇಲ್ಲಿ ಪ್ರಮುಖವಾಗಿ ಹತ್ತಿ ಮತ್ತು ಮೆಣಸಿನಕಾಯಿ ಹೇರಳವಾಗಿ ಬೆಳೆಯುತ್ತಿದ್ದು, ಇದರ ಜೊತೆಗೆ ಇಲ್ಲಿ ಹೇರಳವಾಗಿ ಕಬ್ಬಿಣದ ಅದಿರು ದೊರೆಯುತ್ತಿತ್ತು. ಇಲ್ಲಿ ದೊರೆತ ಕಚ್ಚಾ ವಸ್ತುಗಳನ್ನು ತಮ್ಮ ತಾಯ್ನಾಡಿಗೆ ರವಾನಿಸುವ ದೃಷ್ಟಿಯಿಂದ ಮದ್ರಾಸ್ ಸರ್ಕಾರವು ಮದ್ರಾಸ್ ರೈಲ್ವೆ ಕಂಪನಿಗೆ ಗುತ್ತಿಗೆ ನೀಡಿದ್ದರಿಂದ ಮೊದಲ ಬಾರಿಗೆ ಮದ್ರಾಸ್‌ನಿಂದ ಗುಂತಕಲ್ ಮಾರ್ಗವಾಗಿ ಬಳ್ಳಾರಿಗೆ ರೈಲ್ವೆ ಮಾರ್ಗವನ್ನು ೧೮೭೦ರಲ್ಲಿ ಆರಂಭಿಸಿ, ೧೮೭೧ರಲ್ಲಿ ಪೂರ್ಣಗೊಳಿಸಿತು. ಆ ಸಂದರ್ಭದಲ್ಲಿ ಗುಂತಕಲ್ ರೈಲ್ವೆ ಸ್ಟೇಷನ್ ಮದ್ರಾಸ್ ಪ್ರಾಂತಕ್ಕೆ ಪ್ರಮುಖ ಸಂಪರ್ಕ ಕೇಂದ್ರವಾಗಿತ್ತು. ಇಲ್ಲಿಂದ ಬಾಂಬೆ, ಹೈದರಾಬಾದ್, ಕೊಲ್ಲಾಪುರ ಇತ್ಯಾದಿ ಸ್ಥಳಕ್ಕೆ ಸಂಪರ್ಕ ಹೊಂದಲು ಸಾಧ್ಯವಾಯಿತು. ೧೮೭೬ರಲ್ಲಿ ಗುಂತಕಲ್ಲು-ಬಳ್ಳಾರಿ-ಗದಗ ಮುಖಾಂತರ ಹುಬ್ಬಳ್ಳಿ-ಧಾರವಾಡಕ್ಕೆ ರೈಲ್ವೆ ಸಂಪರ್ಕವನ್ನು ಕಲ್ಪಿಸಲಾಯಿತು. ಈ ಮಾರ್ಗವು ಬ್ರಾಡ್‌ಗೇಜ್‌ನಲ್ಲಿ ನಿರ್ಮಿಸಲ್ಪಟ್ಟಿತ್ತು. ನಂತರ ಕಾಲಾವಧಿಯಲ್ಲಿ ಅದನ್ನು ಮೀಟರ್ ಗೇಜ್‌ಗೆ ಪರಿವರ್ತಿಸಲಾಗಿದೆ. ಬಳ್ಳಾರಿಯಿಂದ ರಾಯದುರ್ಗ-ಚಳ್ಳಕೆರೆ, ಚಿತ್ರದುರ್ಗ ಮಾರ್ಗವಾಗಿ ಬೆಂಗಳೂರು ತಲುಪಲು ರೈಲ್ವೆ ಮಾರ್ಗವನ್ನು ೧೯೧೦ರ ನಂತರ ಕಾಲಾವಧಿಯಲ್ಲಿ ಸ್ಥಾಪಿಸಲ್ಪಟ್ಟಿದೆ.

ಬಳ್ಳಾರಿ ರೈಲ್ವೆ ಸ್ಟೇಷನ್ ಕಟ್ಟಡವು ಬೃಹದಾಕಾರವಾಗಿ ನಿರ್ಮಿಸಲ್ಪಟ್ಟಿದೆ. ಇದು ಎರಡು ಅಂತಸ್ತಿನ ಕಟ್ಟಡವಾಗಿದ್ದು, ವಿಶಾಲವಾದ ಕೊಠಡಿಗಳು, ಕೊಠಡಿಗಳಿಗೆ ಕಿಟಕಿ ಮತ್ತು ಬಾಗಿಲುಗಳನ್ನು ಅಳವಡಿಸಿ ಕಟ್ಟಲಾಗಿದೆ. ಕಿಟಕಿ ಮತ್ತು ಬಾಗಿಲುಗಳಿಗೆ ಗಾಜುನ್ನು ಅಳವಡಿಸಿರುವುದು ಕಂಡುಬರುತ್ತದೆ. ಇದರ ಉದ್ದೇಶ ಕೊಠಡಿಗಳ ಒಳಭಾಗಕ್ಕೆ ಗಾಳಿ ಮತ್ತು ಬೆಳಕು ಒಳಸೂಚಿಸಲು ಅಳವಡಿಸಲಾಗಿದೆ. ಕಟ್ಟಡದಲ್ಲಿ ಒಂದು ಗೋಡೆಯಿಂದ ಇನ್ನೊಂದು ಗೋಡೆಗೆ ಹೊಂದಿಕೊಂಡಂತೆ ಅರ್ಧವೃತ್ತಾಕಾರದ ಕಮಾನುಗಳನ್ನು ನಿರ್ಮಿಸಿರುವುದು ಕಂಡುಬಂದಿದೆ. ಈ ಕಟ್ಟಡದಲ್ಲಿ ಐರೋಪ್ಯ ವಾಸ್ತುಶೈಲಿಯ ಲಕ್ಷಣಗಳಾದ ಕಂಬಗಳು, ಕಮಾನುಗಳು, ಚೂಪು ಗುಮ್ಮಟಗಳು ಬ್ರಿಟಿಷ್ ಸರ್ಕಾರದ ಲಾಂಛನ, ಕಬ್ಬಿಣವನ್ನು ಬಳಸಿರುವುದು ಕಂಡುಬಂದಿದೆ. ಕಟ್ಟಡಕ್ಕೆ ಕಲ್ಲು, ಇಟ್ಟಿಗೆ,

ಕಬ್ಬಿಣ, ಗಾರೆ, ಮರದ ತೀರು, ಮಂಗಳೂರು ಹೆಂಚು, ಸಿಮೆಂಟ್, ಗಾಜು ಮತ್ತು ಸುಣ್ಣವನ್ನು ಬಳಸಿ ಕಟ್ಟಡವನ್ನು ಕಟ್ಟಿರುವುದನ್ನು ಗಮನಿಸಲಾಗಿದೆ.

ಹೊಸಪೇಟೆಗೆ-ಕೊಟ್ಟೂರು ರೈಲು ಮಾರ್ಗಕ್ಕೆ ಶತಮಾನಗಳ ಇತಿಹಾಸವಿದೆ. ಏಕೆಂದರೆ, ಇಲ್ಲಿಯ ಉತ್ಕೃಷ್ಟ ಗುಣಮಟ್ಟದ ಹತ್ತಿಯು, ಬಟ್ಟೆ ತಯಾರಿಸಲು ಹೇಳಿ ಮಾಡಿದಂತ ಆಕಾರ ಬರುತ್ತಿದ್ದರಿಂದ ಬ್ರಿಟಿಷರಿಗೆ ಇಲ್ಲಿನ ಹತ್ತಿಯ ಮೇಲೆ ಕಣ್ಣು ಬಿತ್ತು. "ಉತ್ತಮ ಗುಣಮಟ್ಟದ ಹತ್ತಿಯಿಂದಾಗಿ ಮೋಹಿತರಾಗಿ ಬಳ್ಳಾರಿಯಿಂದ ಕೊಟ್ಟೂರಿಗೆ ಬಂದು ಕೊಟ್ಟೂರನ್ನು ಇಂಗ್ಲೆಂಡಿನ ಮ್ಯಾಂಚೆಸ್ಟಾರ್"[೧೨] ಎಂದೇ ಬಣ್ಣಿಸಿದರು. ಬ್ರಿಟನ್ನಿನ ಕ್ಯಾಲಿ ಮತ್ತು ವಾಲ್ಕೆಟ್, ಕಂಪನಿಗಳು ಹತ್ತಿಯನ್ನು ಖರೀದಿಸಿ ಜವಳಿ ತಯಾರಿಕೆಗಾಗಿ ಇಂಗ್ಲೆಂಡಿನ ಮ್ಯಾಂಚೆಸ್ಟಾರ್ ರಫ್ತು ಮಾಡತೊಡಗಿದವು. ಇದರಿಂದ ಉತ್ತೇಜಿತರಾದ ಕೊಟ್ಟೂರು ಮತ್ತು ಸುತ್ತಮುತ್ತಲಿನ ರೈತರಿಗೆ ಹತ್ತಿ ಬೆಳೆಯುವ ಬೆಳೆ ಲಾಭದಾಯಕ ಬೆಳೆಯಾಯಿತು. ಕೊಟ್ಟೂರಿನ ಹತ್ತಿಗೆ ಎಲ್ಲಿಲ್ಲದ ಬೇಡಿಕೆ ಶುರುವಾಗುತ್ತಿದ್ದಂತೆ ಬ್ರಿಟಿಷ್ ದೊರೆಗಳ ದೂರಾಲೋಚನೆಯ ಫಲವಾಗಿ ೧೮೯೦-೯೫ರಲ್ಲಿ ಹೊಸಪೇಟೆಯಿಂದ ಕೊಟ್ಟೂರಿನವರೆಗೆ ರೈಲು ಮಾರ್ಗವನ್ನು ಆರಂಭಿಸಿ, ೧೯೦೫ರಲ್ಲಿ ಪೂರ್ಣಗೊಂಡಿತು. ಇಲ್ಲಿ ಮೀಟರ್ ಗೇಜ್‌ನಲ್ಲಿ ನಿರ್ಮಿಸಿದ್ದ ರೈಲ್ವೆ ಮಾರ್ಗವನ್ನು ೧೯೮೯-೯೦ರ ಕಾಲಾವಧಿಯಲ್ಲಿ ಅದನ್ನು ಬ್ರಾಡ್‌ಗೇಜ್ ಆಗಿ ಪರಿವರ್ತಿಸಲು ರೈಲ್ವೆ ಇಲಾಖೆ ತೀರ್ಮಾನಿಸಿತು. ಈ ಕಾಮಗಾರಿಯು ೧೯೯೩ರಲ್ಲಿ ಆರಂಭಗೊಂಡು ೧೯೯೭ರಲ್ಲಿ ಪೂರ್ಣಗೊಂಡಿತು. ಹೊಸಪೇಟೆ-ಕೊಟ್ಟೂರು ರೈಲ್ವೆ ಮಾರ್ಗ ಹೆಸರಿಗೆ ಮಾತ್ರವೆನ್ನಬೇಕು. ಹಲವು ವರ್ಷಗಳಾದರೂ ಈ ಮಾರ್ಗದಲ್ಲಿ ರೈಲು ಓಡುತ್ತಿಲ್ಲ. ಇದರ ಜೊತೆಗೆ ಇಲ್ಲಿದ್ದ ರೈಲು ದಾರಿಯೂ ಭದ್ರವಾದದ್ದಲ್ಲ. ಹೊಸಪೇಟೆ-ಕೊಟ್ಟೂರು ನಡುವೆ ಇರುವ ಮಾರ್ಗವು ೬೦ ಕಿ.ಮೀ. ಅಂತರ ದೂರದಲ್ಲಿದೆ.

## ರೈಲ್ವೆ ಸ್ಟೇಷನ್

ರಾಯದುರ್ಗ ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿ ಬೆಳೆಯುತ್ತಿದ್ದ ಹತ್ತಿ, ಮೆಣಸಿನಕಾಯಿ ಇತ್ಯಾದಿ ಸಾಂಬಾರ್ ಪದಾರ್ಥಗಳನ್ನು ತಮ್ಮ ತಾಯ್ನುಡಿಗೆ ಸರಬರಾಜು ಮಾಡುವುದಕ್ಕಾಗಿ ಬ್ರಿಟಿಷರು ೧೮೮೦ರಲ್ಲಿ ರೈಲ್ವೆ ಸ್ಟೇಷನ್‌ನ್ನು ಸ್ಥಾಪಿಸಿಕೊಂಡರು. ಬಳ್ಳಾರಿಯಿಂದ ರಾಯದುರ್ಗ ಮಾರ್ಗವಾಗಿ ಚಿಕ್ಕಜಾಜುರುವರೆಗೆ ಇವರು ರೈಲ್ವೆ ಮಾರ್ಗವನ್ನು ೧೮೮೦ ರಿಂದ ೧೯೦೦ರ ಕಾಲಾವಧಿಯಲ್ಲಿ ಪೂರ್ಣಗೊಳಿಸಲಾಗಿತ್ತು. ಬಳ್ಳಾರಿಯಿಂದ ರಾಯದುರ್ಗ ಈ ಮಾರ್ಗದ ಮಧ್ಯದಲ್ಲಿ ಮೂರು ಚಿಕ್ಕ ರೈಲ್ವೆ ಸ್ಟೇಷನ್‌ಗಳನ್ನು ಸ್ಥಾಪಿಸಿಕೊಂಡಿದ್ದರು. ನಂತರ ೧೯೬೭ರಲ್ಲಿ ಬಾದನಪಲ್ಲಿಯಲ್ಲಿ ಹೊಸ ರೈಲ್ವೆ ಸ್ಟೇಷನ್‌ನ್ನು ಸ್ಥಾಪನೆಯಾಗಿದೆ. ರಾಯದುರ್ಗ ರೈಲ್ವೆ ಸ್ಟೇಷನ್ ಪಟ್ಟಣದ ಈಶಾನ್ಯ ದಿಕ್ಕಿನಲ್ಲಿ ಹೊರವಲಯದಲ್ಲಿದೆ. ಇದರ ಹಳೆಯ ಕಟ್ಟಡವು ಪೂರ್ವಾಭಿಮುಖವಾಗಿದ್ದು, ೧೯೦೦ರಲ್ಲಿ ಕಟ್ಟಲ್ಪಟ್ಟಿದೆ. ಈ ಕಟ್ಟಡದ ತಳವಿನ್ಯಾಸವು ಚಚ್ಚೌಕವಾಗಿದ್ದು, ಅಗಲಕ್ಕಿಂತ ಉದ್ದ ಹೆಚ್ಚಾಗಿರುವುದು ಕಂಡುಬಂದಿದೆ. ಕಟ್ಟಡಕ್ಕೆ

ಕಲ್ಲು, ಇಟ್ಟಿಗೆ, ಕಬ್ಬಿಣ, ಗಾರೆ, ಮರದತೀರು, ಮಂಗಳೂರು ಹೆಂಚ್‌ನ್ನು ಬಳಸಿ ಕಟ್ಟಿರುವುದನ್ನು ನಾನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಗಿದೆ.

**ಸೇತುವೆಗಳು**

ಸೇತುವೆಯ ನಿರ್ಮಾಣವು ಬಹಳ ಪ್ರಾಚೀನ ಕಾಲದಿಂದಲೂ ಸಾಗಿ ಬಂದಿದೆ. ಪ್ರಾಯಶಃ ಹಳ್ಳಕ್ಕ ಅಡ್ಡಲಾಗಿ ಒಂದು ದಿಮ್ಮಿಯನ್ನು ಹಾಕಿದಾಗಲೇ, ಸೇತುವೆಯ ನಿರ್ಮಾಣವು ಪ್ರಾರಂಭವಾಯಿತೆನ್ನಬಹುದು. ರಸ್ತೆ, ರೈಲುಮಾರ್ಗಗಳಿಗೆ ಅಡ್ಡಲಾಗಿ ಬರುವ ಕೆಲಾರಕಲು, ನದಿ, ಹಳ್ಳ, ಕಾಲುವೆ, ಕೊಲ್ಲಿಗಳನ್ನು ದಾಟಲು ಬೇಕಾದ ಕಟ್ಟಡವು, ಸೇತುವೆ. ಒಂದು ಹೆದ್ದಾರಿಯು ಇನ್ನೊಂದನ್ನು ದಾಟಲು, ರಸ್ತೆ ಹಾಗೂ ರೈಲು ಮಾರ್ಗಗಳು ಒಂದನ್ನೊಂದು ದಾಟಲೂ ಇದನ್ನು ನಿರ್ಮಿಸುವರು. ಸೇತುವೆಯನ್ನು ಚೌಬೀನೆ, ಕಲ್ಲು, ಇಟ್ಟಿಗೆ, ಉಕ್ಕು, ಕಾಂಕ್ರೀಟಿನಿಂದ ನಿರ್ಮಿಸಿದ್ದಾರೆ. ಕಲ್ಲು ಇಟ್ಟಿಗೆಗಳಿಂದ ನಿರ್ಮಿಸಿದ ಬಹು ಹಳೆಯ ಸೇತುವೆಗಳನ್ನು ಈಗಲೂ ಕಾಣಬಹುದು. ಉದಾ:- ಬೆಂಗಳೂರಿನಿಂದ ಬಳ್ಳಾರಿಗೆ ಬರುವ ಮಾರ್ಗದ ಚಿನ್ನಹಗರಿ ನದಿಗೆ ಅಡ್ಡಲಾಗಿ ಸೇತುವೆಯನ್ನು ಇಟ್ಟಿಗೆ ಮತ್ತು ಕಲ್ಲಿನಿಂದ ಕಟ್ಟಿರುವುದು ಈಗಲೂ ಇದೆ. ಆದರೆ, ಇದರ ಮೇಲೆ ವಾಹನಗಳು ಚಲಿಸುವುದಿಲ್ಲ. ಅದೇ ರೀತಿ ಬಳ್ಳಾರಿಯಿಂದ ಹೊಸಪೇಟೆಗೆ ಬರುವ ಮರ್ಗಾದಲ್ಲಿ ಎರಡು ಸೇತುವೆಗಳು ಕಂಡುಬರುತ್ತವೆ. ಒಂದು: ಬಳ್ಳಾರಿ ಮತ್ತು ಕುಡತಿನಿ ಮಾರ್ಗದ ಮಧ್ಯದಲ್ಲಿದೆ. ಇದು ಪಾಳುಬಿದ್ದಿದೆ. ಇನ್ನೊಂದು: ಪಾಪಿನಾಯಕನಹಳ್ಳಿಯಿಂದ ಹೊಸಪೇಟೆಗೆ ಹೋಗುವ ಮಾರ್ಗದ ಮಧ್ಯದಲ್ಲಿದೆ. ಇದು ಕೂಡ ಕಲ್ಲು ಮತ್ತು ಇಟ್ಟಿಗೆಯಿಂದ ಕಟ್ಟಿರುವುದು ಕಾಣಬಹುದಾಗಿದೆ.

ತುಂಗಭದ್ರಾ ನದಿಗೆ ಆರಂಭದಲ್ಲಿ ಸೇತುವೆ ಇರಲಿಲ್ಲ. ಅಲ್ಲಲ್ಲಿ ಕಟ್ಟಿದ ಒಡ್ಡಗಳಲ್ಲಿ ಹರಿಗೋಲುಗಳ ಮೂಲಕ ನದಿ ದಾಟಬೇಕಾಗಿತ್ತು. ಈ ನದಿಗೆ ಮೊದಲು ಹರಿಹರದಲ್ಲಿ ಬೆಂಗಳೂರು-ಪೂನಾ ರಸ್ತೆಗೆ ಸೇತುವೆಯನ್ನು ನಿರ್ಮಿಸಲಾಯಿತು. ನಂತರ ಹೊಸಪೇಟೆಯ ಬಳಿ ೧೯೪೫ರಿಂದ ೧೯೫೩ರ ಕಾಲಾವಧಿಯಲ್ಲಿ ಅಣೆಕಟ್ಟು ನಿರ್ಮಾಣವಾದ ಬಳಿಕ ೧೩ನೇ ರಾಷ್ಟ್ರೀಯ ಹೆದ್ದಾರಿಯಲ್ಲಿ ತುಂಗಭದ್ರಾ ಅಣೆಕಟ್ಟಿನ ಕೆಳಗಡೆ ದೊಡ್ಡದಾದ ಸೇತುವೆಯೊಂದನ್ನು ನಿರ್ಮಿಸಲಾಗಿದೆ. ಇವಲ್ಲದೆ ರಸ್ತೆಗಳಿಗೆ ಅಡ್ಡವಾಗಿ ಬರುವ ಹಳ್ಳ, ಕಾಲುವೆಗಳಿಗೆ ಸಣ್ಣ-ಸಣ್ಣ ಸೇತುವೆಗಳನ್ನೂ ಕಟ್ಟಲಾಗಿದೆ. ಹೊಸಪೇಟೆಯಿಂದ ಹರಿಹರಕ್ಕೆ ಹೋಗುವ ಮಾರ್ಗದಲ್ಲಿ ಅಥವಾ ಹಗರಿಬೊಮ್ಮನಹಳ್ಳಿ ಬಳಿ ಹಗರಿ ನದಿಗೆ ಕಟ್ಟಿರುವ ಸೇತುವೆ ಪ್ರಸ್ತುತವೂ ಚಾಲ್ತಿಯಲ್ಲಿದೆ. ಅದರ ವಿವರ ಈ ಕೆಳಗಿನಂತಿದೆ.

**ಹಗರಿಬೊಮ್ಮನಹಳ್ಳಿ ಸೇತುವೆ**

ಹೊಸಪೇಟೆಯಿಂದ ಹರಿಹರಕ್ಕೆ ಹೋಗುವ ರಾಜ್ಯ ಹೆದ್ದಾರಿ ೬೩ರಲ್ಲಿನ ಹಳೆ ಮತ್ತು ಹೊಸ ಹಗರಿಬೊಮ್ಮನಹಳ್ಳಿಯನ್ನು ಸಂಪರ್ಕಿಸುವ ಈ ಸೇತುವೆಯು ೮೦ ವಸಂತಗಳನ್ನು

ಕಂಡಿದೆ. ಈ ಸೇತುವೆಯ ನಿರ್ಮಾಣದ ಕಾರ್ಯವು ಜುಲೈ ೧೯೩೭ರಲ್ಲಿ ಪ್ರಾರಂಭಗೊಂಡು ಅಕ್ಟೋಬರ್ ೨೮, ೧೯೩೮ರಲ್ಲಿ ಸಾರ್ವಜನಿಕ ಸೇವೆ ತೆರೆಯಲ್ಪಟ್ಟಿತು. ಇದೇ ಕಾಲಘಟ್ಟದಲ್ಲಿ ಹಗರಿಬೊಮ್ಮನಹಳ್ಳಿ ತಾಲೂಕು ಆಗಿರಲಿಲ್ಲ. ಕೇವಲ "೨೦೩೦ ಮನೆಗಳನ್ನು ಹೊಂದಿದ್ದ ಒಂದು ಹಟ್ಟಿಯಾಗಿತ್ತು".[೧೨೩] ನಂತರ ೧೯೫೩ರಲ್ಲಿ ಹೊಸ ತಾಲೂಕು ರಚನೆಯಾದ ಮೇಲೆ ಅಭಿವೃದ್ಧಿಯನ್ನು ಕಂಡಿತು. ಕ್ರಿ.ಶ. ೧೯೩೭ರಲ್ಲಿ ಋತುಮಾನಕ್ಕೆ ತಕ್ಕಂತೆ ಸಾಕಷ್ಟು ಮಳೆ ಬೀಳುತ್ತಿದ್ದರಿಂದ ಕೊಟ್ಟೂರು, ಕೋಗಳಿ, ಅಂಬಳಿ, ಅಲಬೂರಿನಕೆರೆ, ರೊಟ್ಟಿಹಳ್ಳ ಇತ್ಯಾದಿ ಅನೇಕ ಕೆರೆಗಳು ತುಂಬಿ ಹರಿಯುತ್ತಿದ್ದರಿಂದ ಇಲ್ಲಿನ ಚಿಕ್ಕಹಗರಿ ಹಳ್ಳದಲ್ಲಿ ಯಾವಾಗಲೂ ನೀರು ನಿಂತಿರುತ್ತಿತ್ತು. ಇದು ಹೊಸಪೇಟೆಯಿಂದ ಇಟ್ಟಗಿ, ಹಡಗಲಿ, ಹರಿಹರ, ದಾವಣಗೆರೆ, ಧರ್ಮಸ್ಥಳ, ಮಂಗಳೂರು ಇತ್ಯಾದಿ ಭಾಗಗಳಿಗೆ ಹೋಗಲು ಸಾರಿಗೆ ಸಂಪರ್ಕಕ್ಕೆ ಅಡ್ಡಿಯಾಗಿತ್ತು. ಇದನ್ನು ಗಮನಿಸಿದ ಬಳ್ಳಾರಿ ಜಿಲ್ಲಾ ಕಲೆಕ್ಟರಾದ ಮಿ.ಎಫ್.ಡಬ್ಲ್ಯೂ. ಸ್ಟೇವರ್ಟ್‌ರವರು ಇಲ್ಲಿರುವ ಚಿಕ್ಕಹಗರಿಗೆ ಸೇತುವೆ ಕಟ್ಟುವುದು ಅವಶ್ಯಕತೆ ಇದ್ದ ಕಾರಣಕ್ಕಾಗಿ ಮದ್ರಾಸ್ ಸರಕಾರಕ್ಕೆ ಪತ್ರ ಬರೆದರು. ಈ ಪತ್ರವನ್ನು ಪರಿಶೀಲಿಸಿದ ಮದ್ರಾಸ್ ಸರಕಾರವು ಇದಕ್ಕೆ ಅನುಮೋದನೆಯನ್ನು ನೀಡಿ, ಸೇತುವೆಯ ನಿರ್ಮಾಣಕ್ಕೆ ಟೆಂಡರ್‌ನ್ನು ಕರೆಯಿತು. "ಕ್ರಿ.ಶ. ೧೯೩೭ರಲ್ಲಿ 'ದಿ ಬಾಂಬೆ ಇಂಜಿನಿಯರಿಂಗ್ ಕಂಪನಿ' ಇದರ ನಿರ್ಮಾಣದ ಗುತ್ತಿಗೆ ಪಡೆದುಕೊಂಡಿತು".[೧೨೪] ಈ ಕಂಪನಿಯ ಇಂಜಿನಿಯರ್‌ಗಳಾದ ಶ್ರೀ ಪಂಜೆ ಶಂಕರರಾವು, ಶ್ರೀ ಮಲ್ಲಪ್ಪರಾಜ ಪಂತುಲು, ಬಷೀರ್ ಅಹಮ್ಮದ್ ಸಾಹೇಬು, ಶ್ರೀ ಜಿ.ಎಸ್. ಗಣಪತಿ ಅವರು ಸೇತುವೆ ನಿರ್ಮಾಣದ ಹೊಣೆ ಹೊತ್ತುಕೊಂಡು ಈ ಸೇತುವೆಯ ನಿರ್ಮಾಣಕ್ಕೆ ನೀಲನಕ್ಷೆಯನ್ನು ನೀಡಿದರು.

ದಿ ಬಾಂಬೆ ಇಂಜಿನಿಯರಿಂಗ್ ಕಂಪನಿಯು ಈ ಸೇತುವೆಯನ್ನು ಹಳ್ಳದ ನೆಲಮಟ್ಟದಿಂದ ೯ ಮೀಟರ್ ಎತ್ತರ, ೮ ಮೀಟರ್ ಅಗಲ ಮತ್ತು ೧೨೦ ಮೀಟರ್ ಉದ್ದ ಇರುವ ಸೇತುವೆಯನ್ನು ಅಚ್ಚುಕಟ್ಟಾಗಿ ನಿರ್ಮಿಸಿದೆ. ಇದು ಕಬ್ಬಿಣ-ಆರ್.ಸಿ.ಸಿ. ಸೋಂಕಿಲ್ಲದೆ ಬರೀ ಸೈಜುಕಲ್ಲು ಮತ್ತು ಸಿಮೆಂಟ್‌ನಿಂದ ಕಟ್ಟಿದ ೮ ಮೀಟರ್‌ಗೊಂದರಂತಿರುವ ೮ ಪಿಲ್ಲರ್‌ಗಳ ಕಲ್ಲಿನ ನಡುವೆ ೮೦ ವರ್ಷ ಗತಿಸಿದರೂ ಒಂದೂ ಬಿರುಕು ಕಾಣಿಸದೇ ಇರುವುದು ಅಂದಿನ ಕೆಲಸಗಾರರ ಅರ್ಪಣಾ ಮನೋಭಾವ ಮತ್ತು ನೈಪುಣ್ಯವನ್ನು ಇಂದಿಗೂ ಸಾಕ್ಷೀಕರಿಸುತ್ತದೆ. ಸೇತುವೆಯ ಎರಡು ಭಾಗಗಳಲ್ಲಿರುವ ಕಬ್ಬಿಣದ ಪಟ್ಟಿಗಳ ಗಟ್ಟಿತನ ಅಂದಿನ ಇಂಜಿನಿಯರ್‌ಗಳ ಕಾರ್ಯಕ್ಷಮತೆಯನ್ನು ಸಾರುತ್ತಿವೆ. ಈ ಸೇತುವೆಯನ್ನು ೧೯೩೮ರಲ್ಲಿ ಮದ್ರಾಸ್ ಸರಕಾರದ ಸ್ಥಾನಿಕ ಸಂಸ್ಥೆಗಳ ಮಂತ್ರಿ ಗೌರವನೀಯ ಶ್ರೀ ಬಿ. ಗೋಪಾಲರೆಡ್ಡಿಯವರಿಂದ ತೆರೆಯಲ್ಪಟ್ಟಿತು ಎಂಬ ಮಾಹಿತಿಯು ಸೇತುವೆಯಲ್ಲಿರುವ ಶಿಲಾಫಲಕದಿಂದ ದೃಢಪಟ್ಟಿದೆ. ಈ ಶಿಲಾಫಲಕವು ಹಗರಿಬೊಮ್ಮನಹಳ್ಳಿಯ ಹೊಸಬಸ್ಸ್ಟ್ಯಾಂಡ್‌ಯಿಂದ ಹೊಸಪೇಟೆ ಮಾರ್ಗವಾಗಿ ಬರುವ ಸೇತುವೆಯ ಎಡಭಾಗದಲ್ಲಿದೆ. ಅದರಲ್ಲಿರುವ ಮಾಹಿತಿಯು ಈ ಕೆಳಗಿನಂತಿದೆ.

## ಹಗರಿಬೊಮ್ಮನಹಳ್ಳಿ ಸೇತುವೆ

ಬಹುದಾನ್ಯಂ ಸಂ॥ ಕಾರ್ತೀಕ ಶು॥ ಪಂಚಮಿ ಶುಕ್ರವಾರ
ಮದರಾಸು ಸರ್ಕಾರದ ಸ್ಥಾನಿಕ ಸಂಸ್ಥೆಗಳ ಮಂತ್ರಿ
ಗೌರವನೀಯ ಶ್ರೀ ಬಿ. ಗೋಪಾಲರೆಡ್ಡಿಯವರಿಂದ
ತೆರೆಯಲ್ಪಟ್ಟಿತು.

| | |
|---|---|
| ಇಂಜಿನಿಯರುಗಳು | ಡಾ॥ ಆರ್. ನಾಗನಗೌಡ |
| ಶ್ರೀ ಪಂಜೆ ಶಂಕರರಾವು | ಜಿಲ್ಲಾ ಬೋರ್ಡ್ |
| ಶ್ರೀ ಮಲ್ಲಪ್ಪರಾಜ ಪಂತುಲು | |
| ಬಷೀರ ಅಹಮ್ಮದ್ ಸಾಹೇಬು | ಅಧ್ಯಕ್ಷರು |
| ಶ್ರೀ ಜಿ.ಎಸ್. ಗಣಪತಿ | ಬಳ್ಳಾರಿ |

ಕಂಟ್ರಾಕ್ಟರರು - ದಿ ಬಾಂಬೆ ಇಂಜಿನಿಯರಿಂಗ್ ಕಂಪನಿ.

೨೮-೧೦-೧೯೩೮

ಪ್ರಸ್ತುತ ಹಗರಿಬೊಮ್ಮನಹಳ್ಳಿ ತಾಲೂಕು ಲೋಕೋಪಯೋಗಿ ಇಲಾಖೆಯು ಆರು ವರ್ಷಗಳ ಹಿಂದೆ ಈ ಮಾರ್ಗದಲ್ಲಿ ವಾಹನಗಳ ಓಡಾಟ ಹೆಚ್ಚಾಗಿದ್ದರಿಂದ ಹಳೆಯ ಸೇತುವೆಯ ಮೇಲಿನ ಒತ್ತಡವನ್ನು ಕಡಿಮೆ ಮಾಡುವ ದೃಷ್ಟಿಯಿಂದ ಹಾಗೂ ಎನ್.ಎಸ್. ೧೩ರ ಹೆದ್ದಾರಿಯಿಂದ ಹರಿಹರಕ್ಕೆ ಸಾರಿಗೆ ಸಂಪರ್ಕ ಕಲ್ಪಿಸುವ ರಸ್ತೆಯನ್ನು ಅಭಿವೃದ್ಧಿಪಡಿಸುವಾಗ ಹಳೆಯ ಸೇತುವೆಯನ್ನು ಕೆಡವದೆ ಅದರ ಪಕ್ಕದಲ್ಲಿಯೇ ಮತ್ತೊಂದು ಹೊಸ ಸೇತುವೆಯನ್ನು ನಿರ್ಮಿಸಲಾಗಿದೆ. ಇದರಿಂದ ಹಳೆಯ ಸೇತುವೆಯ ಮೇಲಿನ ಒತ್ತಡ ಕಡಿಮೆಯಾಗಿರುವುದು ಕಂಡುಬರುತ್ತದೆ. ಸೇತುವೆಗಳನ್ನು ಸ್ಥೂಲವಾಗಿ ಕಮಾನು ಸೇತುವೆ, ತೊಲೆ ಸೇತುವೆ, ತೂಗು ಸೇತುವೆ ಹಾಗೂ ಮಹಡಿ ಸೇತುಗಳೆಂದು ವಿಂಗಡಿಸಲಾಗುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚು ಕಮಾನು ಸೇತುವೆ ಮತ್ತು ತೊಲೆ ಸೇತುವೆಗಳನ್ನು ನಿರ್ಮಿಸಿರುವುದನ್ನು ಗಮನಿಸಲಾಗಿದೆ.

### ಕ್ರೈಸ್ತ ಧರ್ಮದಲ್ಲಿ ಶವಶಂಸ್ಕಾರ ಪದ್ಧತಿ

ಜಗತ್ತಿನ ಅನೇಕ ಧರ್ಮಗಳಲ್ಲಿ ಇರುವ ನಂಬಿಕೆಯಂತೆ ಮನುಷ್ಯ ಜನ್ಮ ಪಡೆಯಲು ಏಳೇಳು ಜನ್ಮ ತಳೆಯಬೇಕು. ಅದೊಂದು ಪೂರ್ವಜನ್ಮದ ಪುಣ್ಯ. ಇಲ್ಲದಿದ್ದರೆ ನಾಯಿ ಸರಿಯಾಗಿ ಹುಟ್ಟಿ ಬರಬೇಕಾಗುತ್ತದೆ. ತನ್ನ ಕರ್ಮದ ಫಲವಾಗಿ ಜೀವನ ಸವೆಸಿ ಸತ್ತು ಮತ್ತೊಮ್ಮೆ ಹುಟ್ಟಿ, ಮತ್ತೆ ಒಳ್ಳೆಯ ಜೀವನ ನಡೆಸಿ ಮೋಕ್ಷವನ್ನು ಪಡೆಯಬೇಕಾಗುತ್ತದೆ ಎಂಬ ಪುನರ್ ಜನ್ಮದ ಕಲ್ಪನೆ ನೀಡುತ್ತದೆ. ಆದರೆ, ಕ್ರೈಸ್ತ ಧರ್ಮದಲ್ಲಿ ಸ್ವಲ್ಪ ವಿಶಿಷ್ಟತೆಯಿಂದ ಕೂಡಿದೆ. 'ದೇವರು ಪ್ರೀತಿ ಸ್ವರೂಪ'. ಆದ್ದರಿಂದ ತನ್ನ ಸ್ವರೂಪದಲ್ಲಿ ಮನುಜನನ್ನು ಸೃಷ್ಟಿಸಿದೆ. ನಾವೆಲ್ಲರು ಆತನ ಮಕ್ಕಳಾಗಿದ್ದರಿಂದ ಒಂದೇ ಬಾರಿ ಹುಟ್ಟಿ ಒಂದೇ ಬಾರಿ ಮೋಕ್ಷವನ್ನು

ಪಡೆಯುತ್ತೇವೆ ಎಂಬುದು ನಂಬಿಕೆ. ಇಲ್ಲಿ ಪುನರ್ ಜನ್ಮವಿಲ್ಲ, ಪುನರುತ್ಥಾನದ ವಿಶ್ವಾಸವಿದೆ. "ಪುನರುತ್ಥಾನವೂ ಜೀವವೂ ನಾನೇ, ನನ್ನಲ್ಲಿ ವಿಶ್ವಾಸವಿಡುವವನು ಸಾವಿಗೀಡಾದರೂ ಜೀವಿಸುವನು. ಜೀವಿಸುವ ಪ್ರತಿಯೊಬ್ಬನೂ ನನ್ನಲ್ಲಿ ವಿಶ್ವಾಸವಿಟ್ಟರೆ ಅವನೆಂದಿಗೂ ಸಾಯನ"[೧೨೫] ಎಂದು ಯೇಸು ಹೇಳಿದ್ದಾನೆ.

ಕ್ರೈಸ್ತರ ಶವಸಂಸ್ಕಾರ ಪದ್ಧತಿ ಯೂದ ಜನಾಂಗದಿಂದ ಬಳುವಳಿಯಾಗಿ ಬಂದದ್ದು, ಈ ಸಂಸ್ಕೃತಿಗೆ ಇತಿಹಾಸವೇ ಇದೆ. ಯೇಸುವನ್ನು ಶಿಲುಬೆಗೇರಿಸಿದಾಗ ಅವರ ಪಾರ್ಥೀವ ಶರೀರವನ್ನು ಯೂದ ಜನಾಂಗದ ಸಂಪ್ರದಾಯದಂತೆ ಸಮಾಧಿ ಮಾಡಲಾಯಿತು. "ಮೃತರಾದ ಕ್ರಿಸ್ತನ ಶರೀರಕ್ಕೆ ಬಿಳಿಯ ವಸ್ತ್ರದಿಂದ ಸುತ್ತಿ, ಸುಗಂಧ ದ್ರವ್ಯಗಳನ್ನು ಪೂಸಿ, ಧೂಪವನ್ನು ಹಾಕಿ ಸಮಾಧಿಯಲ್ಲಿ ಶ್ರದ್ಧೆ, ಭಕ್ತಿಪೂರಕವಾಗಿರಿಸಿದರು".[೧೨೬] ಅಂದಿನಿಂದ ಇಂದಿನವರೆಗೂ ಅದೇ ಪದ್ಧತಿಯನ್ನು ರೂಢಿಸಿಕೊಂಡು ಬರಲಾಗಿದೆ. ಮೃತರಾದ ಪ್ರತಿಯೊಬ್ಬ ಕ್ರೈಸ್ತ ವಿಶ್ವಾಸಿಗೂ ಕೂಡ ಈ ಪದ್ಧತಿಯಲ್ಲೇ ಶವಸಂಸ್ಕಾರವನ್ನು ಮಾಡುವುದನ್ನು ಕಾಣುತ್ತೇವೆ.

ಕ್ರೈಸ್ತ ಭಕ್ತನು ಮರಣ ಹೊಂದಿದ ಸಂದರ್ಭದಲ್ಲಿ ತಮ್ಮ ವ್ಯಾಪ್ತಿಯಲ್ಲಿರುವ ಕ್ರೈಸ್ತ ಗುರುಗಳಿಗೆ ಮೊದಲು ಸತ್ತ ಸುದ್ಧಿಯನ್ನು ಮುಟ್ಟಿಸಲಾಗುವುದು. ಆಗ ಅಗಲಿದ ವ್ಯಕ್ತಿಗೆ ವಿಷಾದನೀಯವಾಗಿ ಚರ್ಚಿನಲ್ಲಿ ಗಂಟೆಯನ್ನು ಬಾರಿಸಲಾಗುವುದು. ಈ ಗಂಟೆಯನ್ನು ಬಾರಿಸುವುದರಲ್ಲೂ ವೈಶಿಷ್ಟ್ಯವಿದೆ. ಪ್ರಾರ್ಥನಾ ವಿಧಿಗೆ ಬಾರಿಸುವುದೇ ಬೇರೆ, ಸತ್ತವರಿಗೆ ಬಾರಿಸುವುದೇ ಬೇರೆ. ಸತ್ತ ವಾರ್ತೆಯನ್ನು ಕೇಳಿದ್ದೇ ತಡ ಢಣ್, ಢಣ್, ಢಣ್ ಎಂದು ಮೂರು ಬಾರಿ ಒಂದೊಂದೇ ಗಂಟೆಯನ್ನು ಬಾರಿಸಲಾಗುವುದು. ಇದರಿಂದ ಅಲ್ಲಿರುವ ಕ್ರೈಸ್ತರಿಗೆ ಯಾರೋ ತೀರಿಕೊಂಡಿದ್ದಾರೆಂದು ತಿಳಿದು ಸತ್ಯ ವ್ಯಕ್ತಿಯ ಮನೆಯ ಹತ್ತಿರ ಬಂದು ಮೃತನ ಆತ್ಮಕ್ಕೆ ಶಾಂತಿ ಸಿಗಲೆಂದು ದೇವರಲ್ಲಿ ಮೊರೆಯಿಡುತ್ತಾರೆ. ಪ್ರಾರ್ಥನಾ ಕೂಟದ ಸದಸ್ಯರು ಪವಿತ್ರ ಶಿಲುಬೆ ಮತ್ತು ದೀಪಗಳನ್ನು ತಂದು ಸತ್ತಿರುವ ವ್ಯಕ್ತಿಯ ತಲೆಯ ಪಕ್ಕದಲ್ಲಿರಿಸಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಮೃತನ ಕೈಯಲ್ಲಿ ಜಪಮಾಲೆ ಇರಿಸಿ, ಅಂತಿಮ ನಮನವನ್ನು ಸಲ್ಲಿಸಿ ಪುರುಷ, ಸ್ತ್ರೀ ಎನ್ನದೆ ಎಲ್ಲರೂ ಶವದ ಪೆಟ್ಟಿಗೆಯ ಜೊತೆಗೆ ಚರ್ಚಿಗೆ ತೆರಳುವರು. ಮೊದಲಿಗೆ ಕುಟುಂಬದ ಸದಸ್ಯರು ಹೆಗಲು ಕೊಡುವರು. ಹಾಗೆಯೇ ಬಂದಿರುವ ಜನರು ಹೊತ್ತುಕೊಂಡು ನಡೆಯುವರು. ಮುಂದೆ ಶಿಲುಬೆಯನ್ನು ಹಿಡಿದುಕೊಂಡು ತೆರಳುವರು. ಮೌನ ಮೆರವಣಿಗೆಯಲ್ಲಿ ಹೊತ್ತು ತಂದು ಚರ್ಚಿನ ಪೀಠದ ಮುಂದೆ ಇರಿಸುವರು. ಇಲ್ಲಿಯೂ ಕೂಡ ಒಂದು ವೈಶಿಷ್ಟ್ಯವನ್ನು ಗಮನಿಸಬಹುದು. ಶವವನ್ನು ಯಾವ ಧರ್ಮದಲ್ಲಿಯೂ ದೇವಾಲಯಕ್ಕೆ ತೆಗೆದುಕೊಂಡು ಹೋಗುವುದಿಲ್ಲ. ಕ್ರೈಸ್ತ ಧರ್ಮದಲ್ಲಿ ಮಾತ್ರ ದೇವಾಲಯಕ್ಕೆ ತರಲಾಗುತ್ತದೆ. ಇದರಿಂದ ಈ ಧರ್ಮದಲ್ಲಿ ಸಾವಿಗೆ ಎಷ್ಟು ಪ್ರಾಮುಖ್ಯತೆ ಇದೆ ಎಂದು ತಿಳಿದುಬರುತ್ತದೆ.

ಕ್ರೈಸ್ತ ಧರ್ಮದಲ್ಲಿ ಮೃತದೇಹವನ್ನು ಸುಡುವುದಿಲ್ಲ. ಒಂದು ವೇಳೆ ರಸ್ತೆ ಅಪಘಾತದಲ್ಲಿ ಮೃತರಾದರೆ ಅಂಥವರ ದೇಹವನ್ನು ಸುಡುತ್ತಾರೆ. ಬಹುಪಾಲು ಕ್ರಿಶ್ಚಿಯನ್ನರು ದೇಹವನ್ನು ಶವಪೆಟ್ಟಿಗೆಯಲ್ಲಿಟ್ಟು ಸಮಾಧಿ ಮಾಡುತ್ತಾರೆ. ಯಾಕೆಂದರೆ, ಪುನರುತ್ಥಾನದಲ್ಲಿ ವಿಶ್ವಾಸವಿಟ್ಟಿರುವ ಕ್ರೈಸ್ತರು ಅಂತಿಮ ದಿನ ದೇವರು ನ್ಯಾಯ ತೀರ್ಮಾನ ಮಾಡಲು ಈ ಲೋಕಕ್ಕೆ ಹಿಂತಿರುಗಿ ಬರುವಾಗ ಮೃತರಾದ ಸಕಲ ದೇಹಾತ್ಮಗಳು ಪುನರುತ್ಥಾಗೊಳ್ಳುತ್ತವೆ. ಆ ಸಂದರ್ಭದಲ್ಲಿ ದೇವರು ನ್ಯಾಯ ತೀರ್ಮಾನ ಮಾಡಿ ದುಷ್ಟಾತ್ಮಗಳಿಗೆ ದಂಡನೆಯನ್ನು, ಸತ್ಪುರುಷರಿಗೆ ಸತ್ಫಲಗಳನ್ನು ನೀಡಿ ಮೋಕ್ಷಾನಂದಕ್ಕೆ ಕೊಂಡೊಯ್ಯುತ್ತಾರೆಂಬ ನಂಬಿಕೆ. ಆದ್ದರಿಂದ ಮೃತನ ದೇಹವನ್ನು ಶವದ ಪೆಟ್ಟಿಗೆಯಲ್ಲಿ ಭದ್ರವಾಗಿ ಮಣ್ಣಾಗದ ಹಾಗೆ ಸಂರಕ್ಷಿಸಿ ಸಮಾಧಿ ಮಾಡುತ್ತಾರೆ. ಆತ್ಮಹತ್ಯೆ ಮಾಡಿಕೊಂಡವರು, ವಿಷ ಸೇವಿಸಿ, ಸತ್ತವರನ್ನು ಚರ್ಚಿಗೆ ಒಯ್ಯದೆ ನೇರವಾಗಿ ಸಮಾಧಿಯ ಬಳಿ ತಂದು ಸಂಸ್ಕಾರ ಮಾಡುತ್ತಾರೆ.

ಕ್ರೈಸ್ತರು ಚರ್ಚ್ ಪಕ್ಕದಲ್ಲಿ ಇಲ್ಲವೇ ಪ್ರತ್ಯೇಕ ಭೂಮಿ ಇದ್ದ ಸ್ಥಳದಲ್ಲಿ ಸಮಾಧಿಯನ್ನು ಕಟ್ಟಿಸುತ್ತಾರೆ. ಇದಕ್ಕೆ ಪ್ರತ್ಯೇಕ ಗಾರ್ಡ್‌ನ್ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ಉದಾ:- ಮಂಗಳೂರಿನಲ್ಲಿ ಪ್ರತಿಯೊಂದು ಚರ್ಚ್ ಪಕ್ಕದಲ್ಲಿ ಶಾವಾಗಾರ ಗಾರ್ಡ್‌ನ್‌ಗಳಿವೆ. ಕ್ರೈಸ್ತರು ಸಮಾಧಿಯನ್ನು ಬಹಳ ಸರಳವಾಗಿ ಇಟ್ಟಿಗೆ, ಗಾರೆ ಮತ್ತು ಸಿಮೆಂಟಿನಿಂದ ಕಟ್ಟಿ, ಅದರ ಮೇಲ್ಭಾಗದಲ್ಲಿ ಇಲ್ಲವೆ ಮುಂಭಾಗದಲ್ಲಿ ಒಂದು ಶಿಲಾಫಲಕ ಅಳವಡಿಸಿ ಅದರಲ್ಲಿ ಸತ್ತ ವ್ಯಕ್ತಿಯ ಹೆಸರು, ಜನನದ ದಿನಾಂಕ ಮತ್ತು ಮರದ ದಿನಾಂಕವನ್ನು ಕೊರೆಸಲಾಗಿರುತ್ತದೆ. ಇದರಿಂದ ಕರ್ನಾಟಕದಲ್ಲಿ ಸೇವೆ ಸಲ್ಲಿಸಿದ ಎಷ್ಟೋ ವಿದೇಶೀಯರ ಸಮಾಧಿಗಳನ್ನು ಬೆಳಕಿಗೆ ಬಂದಿರುವುದು ಗಮನಾರ್ಹ.

**ಬ್ರಿಟಿಷ್ ಅಧಿಕಾರಿಗಳ ಸಮಾಧಿಗಳು**

ರಾಮಘಡ ಬೆಟ್ಟದ ನೈರುತ್ಯ ಭಾಗದಲ್ಲಿ ಬ್ರಿಟಿಷ್ ಅಧಿಕಾರಿಗಳ ಸೈನ್ಯಾಧಿಕಾರಿಗಳ ಹಾಗೂ ಕ್ರೈಸ್ತ ಮಿಷನರಿಗಳ ಸಮಾಧಿಗಳಿವೆ. ಬ್ರಿಟಿಷ್ ಅಧಿಕಾರಿಗಳಿಗೆ ನಿಸರ್ಗಧಾಮವಾಗಿದ್ದ ಈ ಬೆಟ್ಟದಲ್ಲಿ ನೂರಾರು ಸೈನಿಕರು, ಅಧಿಕಾರಿಗಳು, ಕ್ರೈಸ್ತ ಮಿಷನರಿಗಳು, ಮಕ್ಕಳ ಮತ್ತು ಮಹಿಳೆಯರು ವಿಶ್ರಾಂತಿ ಪಡೆಯುತ್ತಿದ್ದರು. ಕಾರಣಾಂತರಗಳಿಂದ ಕಾಯಿಲೆಗಳಿಗೆ ಬಲಿಯಾಗಿ ಅಕಾಲಿಕೆ ಮರಣವನ್ನಪ್ಪಿದ ಅಧಿಕಾರಿಗಳನ್ನು ಇಲ್ಲಿಯೇ ಸಮಾಧಿ ಮಾಡಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಸತ್ತ ಅಧಿಕಾರಿಗಳನ್ನು ಸುಮಾರು ಒಂದು ಎಕರೆ ವ್ಯಾಪ್ತಿಯಲ್ಲಿರುವ ನೆಲದಲ್ಲಿ ಸಮಾಧಿ ಮಾಡಲಾಗಿದೆ. ಈ ಸ್ಮಶಾನ ಮತ್ತು ಅದರ ಮೇಲಿರುವ ಬರಹಗಳು ಬ್ರಿಟಿಷರ ಐತಿಹಾಸಿಕ ಪ್ರಜ್ಞೆಗೆ ಸಾಕ್ಷಿ ಹೇಳುತ್ತವೆ.

ಸಮಾಧಿಗಳನ್ನು ಚಚ್ಚೌಕವಾಗಿ, ಅಗಲಕ್ಕಿಂತ ಉದ್ದವಾಗಿ ಮೂರು ಅಡಿ, ನಾಲ್ಕು ಅಡಿ ಎತ್ತರದಲ್ಲಿ, ಇಟ್ಟಿಗೆ ಮತ್ತು ಗಾರೆಯನ್ನು ಬಳಸಿ, ಅದರ ಮೇಲೆ ಹಾಸು ಬಂಡೆಯನ್ನು ಹಾಸಿ

ನಿರ್ಮಿಸಿದ್ದಾರೆ. ಇದರಿಂದ ನಮಗೆ ಹಾಸು ಬಂಡೆಯಲ್ಲಿರುವ, ಕೊರೆದಿರುವ ಲಿಪಿಯಿಂದ ಸೈನ್ಯಾಧಿಕಾರಿಗಳ ಪದನಾಮ, ಕಾಲ, ವಯಸ್ಸು, ಸಾವಿಗೆ ಕಾರಣ ಇವೆಲ್ಲವುಗಳನ್ನು ತಿಳಿಸುತ್ತವೆ. ಈ ಸಮಾಧಿಗಳ ಶಿಲಾಫಲಕಗಳಲ್ಲಿ ರಾಮಘಡವನ್ನು RAMANDROOG, ಬಳ್ಳಾರಿಯನ್ನು BELLARY ಎಂದು, ಹೊಸಪೇಟೆಯನ್ನು HOSEPETTE ಎಂಬ ಉಲ್ಲೇಖಗಳು ಕಂಡುಬರುತ್ತವೆ. ಇಲ್ಲಿ ಕಂಡುಬರುವ ತೀರಾ ಹಳೆಯದಾದ ಸಮಾಧಿ ಎಂದರೆ ೧೮೫೫ ಮತ್ತು ಇತ್ತೀಚಿನ ಎಂದರೆ ೧೯೧೮ರ ಕಾಲದ್ದು. ಅವರ ಪದನಾಮಗಳು, Mr. Sergeant, High Landers, Asst. Apothecary ಇತ್ಯಾದಿ ವಿವರಗಳು ನಮಗೆ ದೊರೆಯುತ್ತವೆ. ಹೀಗೆ ಸಮಾಧಿಗಳು ಒಂದು ಐತಿಹಾಸಿಕ ಸ್ಮಾರಕವಾಗಿ ಗಮನಸೆಳೆಯು ಆವರಣವಿದ್ದು ಇವುಗಳನ್ನು ಗಮನಿಸಿದ ಸರ್ವದರ್ಶನ ಮೇರಿಮಾತೆಯ ಪ್ರಾರ್ಥನಾ ಮಂದಿರ ಪದಾಧಿಕಾರಿಗಳು ಇವುಗಳ ಸಂರಕ್ಷಣೆಗೆ ಮುಂದಾಗಿ, ಸುತ್ತಲೂ ಕಾಂಪೌಂಡ್‌ನ್ನು ನಿರ್ಮಿಸಿದ್ದರಿಂದ ನಮಗೆ ಇಂದು ಅವು ಐತಿಹಾಸಿಕ ಕುರುಹುಗಳಾಗಿ ಕಂಡುಬರುತ್ತವೆ.

ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳು ಕೃಷಿ ಮತ್ತು ನೀರಾವರಿಗೆ ಹೆಚ್ಚು ಆದ್ಯತೆ ನೀಡಿರುವುದರಿಂದ ಕಾಲುವೆ - ಕೆರೆಕಟ್ಟೆಗಳ ನಿರ್ಮಾಣ ಮಾಡಿರುವುದು ಕಂಡುಬಂದಿದೆ. ಉದಾ:- ಐತಿಹಾಸಿಕ ದರೋಜಿ ಕೆರೆಯನ್ನು ಕ್ರಿ.ಶ. ೧೭೯೭ರ ಅಸುಪಾಸಿನಲ್ಲಿ ಟಿಪ್ಪುಸುಲ್ತಾನ್ ನಿರ್ಮಿಸಿದ ಎಂದು ಸ್ಥಳೀಯರು ಹೇಳಲಾಗುತ್ತಿದೆ. ೧೮೫೧ರಲ್ಲಿ ದರೋಜಿ ಕೆರೆ ನೀರಿನ ಪ್ರವಾಹಕ್ಕೆ ಸಿಲುಕಿ ಒಡೆದು ಅಪಾರ ಪ್ರಮಾಣದ ನಷ್ಟ ಉಂಟಾಗಿತ್ತು. ಈ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಎ. ಹ್ಯಾಥವೇ ಅವರು ೧೮೫೩ರಲ್ಲಿ ಹೊಸ ದರೋಜಿ ಗ್ರಾಮ ನಿರ್ಮಾಣಕ್ಕೆ ಮುಂದಾಗಿದ್ದರು ಎಂದು ತಿಳಿಯುತ್ತದೆ. ಇದೇ ಅವಧಿಯಲ್ಲಿ ಈ ಕೆರೆಯನ್ನು ಜೀರ್ಣೋದ್ಧಾರ ಮಾಡಲಾಗಿದೆ ಎಂದು ತಿಳಿದು ಬಂದಿದೆ. ಈ ಕೆರೆಯು ೩.೬ ಕಿ.ಮೀ. ಕೆರೆ ಏರಿಯ ಒಟ್ಟು ಉದ್ದವನ್ನು ಒಳಗೊಂಡಿದೆ. ಇದು ದೇಸಿ ಮತ್ತು ವಲಸೆ ಪ್ರಾಣಿ - ಪಕ್ಷಿಗಳಿಗೆ ತಾಣವಾಗಿತ್ತು. ಆದರೆ, ಪ್ರಸ್ತುತ ದಿನಗಳಲ್ಲಿ ಮಳೆ ಕಡಿಮೆಯಾಗಿರುವುದರಿಂದ ಕಣ್ತುಂಬಿಕೊಳ್ಳಲು ಆಗಮಿಸುತ್ತಿದ್ದ ಪಕ್ಷಿ ಪ್ರಿಯರು, ಹವ್ಯಾಸಿ ಛಾಯಾಗ್ರಾಹಕರು ಈಗ ಸುಳಿಯುತ್ತಿಲ್ಲ. ಇದರ ಜೊತೆಗೆ ಜನ, ಜಾನುವಾರುಗಳಿಗೆ ಗುಟುಕು ನೀರಿಲ್ಲದಂತಾಗಿ ಸಂಕಷ್ಟದ ಸ್ಥಿತಿ ಎದುರಾಗಿದೆ. ಇದರ ಜೊತೆಗೆ ಜಿಲ್ಲಾದ್ಯಾದಂತ ನೀರಿನ ಕಾಲುವೆಗಳು ಹಾಗೂ ಕೆರೆಗಳನ್ನು ನಿರ್ಮಿಸಿರುವುದು ಕಂಡುಬಂದಿದೆ.

**ಕೊನೆ ಟಿಪ್ಪಣಿಗಳು**


೧. ತಿಪ್ಪೇರುದ್ರಸ್ವಾಮಿ ಎಚ್., ೨೦೦೧, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಪುಟ ೫೨೫.

೨. ಕನ್ನಡ ವಿಷಯ ವಿಶ್ವಕೋಶ, ೨೦೦೯, **ಇತಿಹಾಸ ಮತ್ತು ಪುರಾತತ್ವ**, ಪುಟ ೧೪೯.

೩. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ, ೧೯೭೦, **ಕರ್ನಾಟಕದ ಇತಿಹಾಸ ದರ್ಶನ**, ಪುಟ ೧೦೫೪.

೪. ರಮಾನಾಥ್ ಕೋಟೆಕಾರ್, ೨೦೧೩, **ಬಲ್ಲವರು ಮತ್ತು ಬಾಸೆಲ್‌ಮಿಷನ್,** ಪುಟ ೭೦.

೫. ಅದೇ, ಪುಟ ೭೦.

೬. ವಿಲ್ ಡ್ಯೂರಾಂಟ್(ಮೂಲ), ಪ್ರಧಾನಗುರುದತ್ತ(ಅನು) (ಪ್ರ.ಸಂ.), ೨೦೦೮, **ನಾಗರಿಕತೆಯ ಕಥೆ ಗ್ರೀಸ್ ಜನಜೀವನ(ಸಂಪುಟ-೨),** ಪುಟ ೧೪೮.

೭. ಅದೇ, ಪುಟ ೧೪೭.

೮. ವಿಲ್ ಡ್ಯೂರಾಂಟ್(ಮೂಲ), ಪ್ರಧಾನಗುರುದತ್ತ(ಅನು) (ಪ್ರ.ಸಂ.), ೨೦೧೨, **ನಾಗರಿಕತೆಯ ಕಥೆ ಧರ್ಮ ಶ್ರದ್ಧೆಯ ಯುಗ(ಸಂಪುಟ-೪),** ಪುಟ ೧೧೭೪.

೯. ಎನ್. ಮರಿಶಾಮಾಚಾರ್(ಸಂ), ೨೦೦೨, **ಕಲಾಚರಿತ್ರೆ,** ಪುಟ ೧೩೧.

೧೦. ವಿಲ್ ಡ್ಯೂರಾಂಟ್(ಮೂಲ), ಪ್ರಧಾನಗುರುದತ್ತ(ಅನು) (ಪ್ರ.ಸಂ.), ೨೦೧೨, **ಪೂರ್ವೋಕ್ತ,** ಪುಟ ೧೨೦೬.

೧೧. ಅದೇ, ಪುಟ ೧೨೧೨.

೧೨. ಅದೇ, ಪುಟ ೧೨೧೪.

೧೩. ಸಂದೀಪ ಫಡ್ಕೆ, ೨೦೧೨, **ವಾಸ್ತುಶಿಲ್ಪಗಳು,** ಪುಟ ೧೮.

೧೪. ಮರಿಶಾಮಾಚಾರ್ ಎನ್.(ಸಂ), ೨೦೦೨, **ಪೂರ್ವೋಕ್ತ,** ಪುಟ ೧೨೯.

೧೫. ಅದೇ, ಪುಟ ೧೨೯.

೧೬. ವಿಲ್ ಡ್ಯೂರಾಂಟ್(ಮೂಲ), ಪ್ರಧಾನಗುರುದತ್ತ(ಅನು) (ಪ್ರ.ಸಂ.), ೨೦೧೨, **ಪೂರ್ವೋಕ್ತ,** ಪುಟ ೧೧೭೦.

೧೭. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು) (ಪ್ರ.ಸಂ.), ೨೦೦೪, **ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ(೧)(ಭಾಗ ಒಂದು),** ಪುಟ ೪೮೩.

೧೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ,** ಪುಟ ೪೧.

೧೯. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೪, **ಪೂರ್ವೋಕ್ತ,** ಪುಟ ೪೮೭.

೨೦. ಅದೇ, ಪುಟ ೫೬೭.

೨೧. ಲೋಕೋಪಯೋಗಿ ಇಲಾಖೆ, ಬಳ್ಳಾರಿ, ೨೦೧೬, **ಕಟ್ಟಡಗಳ ವಿವರದ ಕಡತ, ನಮೂನೆ-೩.೧,** ಪುಟ ೪.

೨೨. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೪, **ಪೂರ್ವೋಕ್ತ,** ಪುಟ ೪೮೮.

೨೩. **G.O.No. 1393 W., 25th November, P.W.D., T.N.A.,** ಪುಟ ೨.

೨೪. ಅದೇ, ಪುಟ ೬.

೨೫. **ತಾಲೂಕು ಕಛೇರಿ, ಹರಪನಹಳ್ಳಿ, ಸ್ವಾಧೀನದಾರರ ವಿವರದ ಕಡತ** ೩೧/೦೮/೨೦೧೫, ಪುಟ ೪೬.

೨೬. **F81 Register of Building Borne on the Books of the P.W.D. Hadagali**, Page No. 01.

೨೭. ಹುಲಿಕುಂಟಮೂರ್ತಿ ಆರ್.ಎಸ್., ೨೦೦೧, **ಚರಿತ್ರ ತೆಲುಗಲೊ ರಾಯದುರ್ಗಮು**, ಪುಟ ೧೩೭.

೨೮. ಅದೇ, ಪುಟ ೧೩೭.

೨೯. **ಬಳ್ಳಾರಿ ಡಿಸ್ಟ್ರಿಕ್ಟ್ ಗೆಜೆಟ್,** 12th October 1916, ಪುಟ ೭೩.

೩೦. **G.O.No. 1272, Judicial Dated 16th July 1907, P.W.D. T.N.A,** ಪುಟ ೧.

೩೧. **G.O.No. 1136 W,** Dated 15th October 1909, P.W.D. T.N.A, ಪುಟ ೨.

೩೨. ಅದೇ, ಪುಟ ೩.

೩೩. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರಸಂ.), ೨೦೦೪, **ಪೂರ್ವೋಕ್ತ,** ಪುಟ ೪೮೬.

೩೪. ಮಹದೇವ ಸಿ., ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ, ೨೦೦೨, **ಪೂರ್ವೋಕ್ತ,** ಪುಟ ೩೩೮.

೩೫. ಲೋಕೋಪಯೋಗಿ ಇಲಾಖೆ, ಬಳ್ಳಾರಿ, ೨೦೧೬, **ಕಟ್ಟಡಗಳ ವಿವರದ ಕಡತ, ನಮೂನೆ-** ೩.೧, ಪುಟ ೦೪.

೩೬. ಜಯಸುಮನ್ ೧೯೮೭, **ರಾಯದುರ್ಗಂ ಮಂಡಲಂ ಚರಿತ್ರ-ಸಂಸ್ಕೃತಿ,** ಪುಟ ೮೩.

೩೭. ಲೋಕೋಪಯೋಗಿ ಇಲಾಖೆ, ಬಳ್ಳಾರಿ, ೨೦೧೬, **ಕಟ್ಟಡಗಳ ವಿವರದ ಕಡತ, ನಮೂನೆ-**೩.೧, ಪುಟ ೬.

೩೮. ಬಿಪಿನ್‌ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಅನು), ೨೦೧೨, **ಆಧುನಿಕ ಭಾರತದ ಇತಿಹಾಸ,** ಪುಟ ೯೧.

೩೯. ಅದೇ, ಪುಟ ೯೧.

೪೦. ಮುನಿರಾಜ್ ಎಸ್., ೨೦೧೧, **ವಸಾಹತು ಕರ್ನಾಟಕದ ಕಂಟೋನ್ಮೆಂಟ್‌ಗಳ ಅಧ್ಯಯನ,** ಮೋಹನ್‌ಕೃಷ್ಣ ರೈ ಕೆ.(ಸಂ), **ಚರಿತ್ರೆ ಅಧ್ಯಯನ,** ಸಂಪುಟ-೭, ಸಂಚಿಕೆ-೧, ಜುಲೈ-ಡಿಸೆಂಬರ್ ೨೦೧೧, ಪುಟ ೧೩೦.

೪೧. ಅದೇ, ಪುಟ ೧೩೨.

೪೨. ರಘುನಾಥಭಟ್ ಎಚ್.ಆರ್., ೧೯೮೫, **ಐರೋಪ್ಯ ವಾಸ್ತುಶಿಲ್ಪ,** ಹೆಚ್.ಎಸ್. ಕೃಷ್ಣಸ್ವಾಮಿ, **ಅವಲೋಕನ,** ಪುಟ ೧೨೫.

೪೩. Francis W.(Ed), 1904, **Madras District Gazetteers,** Bellary District, ಪುಟ ೨೨೦.

೪೪. ಅದೇ ಪುಟ ೨೨೦.

೪೫. ಮೃತ್ಯುಂಜಯ ರುಮಾಲೆ, ೨೦೦೦, **ಈಸ್ಟ್ ಇಂಡಿಯ ಕಂಪನಿ ಕಾಲದ ಬಳ್ಳಾರಿ ಜಿಲ್ಲಾ ಆಡಳಿತ ವಿಭಾಗಗಳು ಮತ್ತು ಬ್ರಿಟಿಷರ ಸಮಾಧಿಗಳು**, ಎಂ.ಜಿ. ನಾಗರಾಜ(ಸಂ), ಇತಿಹಾಸ ದರ್ಶನ ಸಂಪುಟ-೧೫, ಪುಟ ೧೬೭.

೪೬. ಅದೇ, ಪುಟ ೧೬೭.

೪೭. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರಸಂ.), ೨೦೦೪, **ಪೂರ್ವೋಕ್ತ**, ಪುಟ ೫೭೦.

೪೮. ಅದೇ, ಪುಟ ೫೭೦.

೪೯. ಶೇಷಾದ್ರಿ ಬಿ.(ಸಂ), ೧೯೯೮, **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ**, ಪುಟ ೨೩.

೫೦. G.O.No. 8/42-C.1, Dated 18/12/ 1942, Revenue Department, Madras, ಪುಟ ೧.

೫೧. ಶೇಷಾದ್ರಿ ಬಿ.(ಸಂ), ೧೯೯೮, **ಪೂರ್ವೋಕ್ತ**, ಪುಟ ೨೪.

೫೨. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ಪೂರ್ವೋಕ್ತ**, ಪುಟ ೮೪.

೫೩. ಶೇಷಾದ್ರಿ ಬಿ.(ಸಂ), ೧೯೯೮, **ಪೂರ್ವೋಕ್ತ**, ಪುಟ ೨೩.

೫೪. ಲೋಕೋಪಯೋಗಿ ಇಲಾಖೆ, ಬಳ್ಳಾರಿ, ೨೦೧೬, **ಕಟ್ಟಡಗಳ ವಿವರದ ಕಡತ, ನಮೂನೆ-೩.೧**, ಪುಟ ೫.

೫೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ಪೂರ್ವೋಕ್ತ**, ಪುಟ ೮೩.

೫೬. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರಸಂ.), ೨೦೦೪, **ಪೂರ್ವೋಕ್ತ**, ಪುಟ ೫೫೮.

೫೭. ಅದೇ, ಪುಟ ೫೫೯.

೫೮. ಅದೇ, ಪುಟ ೫೫೯.

೫೯. ಅದೇ, ಪುಟ ೫೬೬.

೬೦. G.O.No. 1097 W., 7th October 1909, P.W.D. T.N.A., ಪುಟ ೧.

೬೧. ಅದೇ, ಪುಟ ೧.

೬೨. ಡಿಸೋಜ ನಾ., ೧೯೮೫, **ಕರ್ನಾಟಕದಲ್ಲಿ ಕ್ರೈಸ್ತ ಧರ್ಮ**, ಹೆಚ್.ಎಸ್. ಕೃಷ್ಣಸ್ವಾಮಿ, ಅವಲೋಕನ, ಪುಟ ೧೯೪.

೬೩. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರಸಂ.), ೨೦೦೫, **ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ(೨) (ಭಾಗ ಒಂದು)**, ಪುಟ ೨೨೯.

೬೪. ಅದೇ, ಪುಟ ೨೨೭.

೬೫. Dr. Preeti Tripathi, 2009, **Art and Architecture of India: Ancient to Modern**, ಪುಟ ೫೭.

೬೬. ರಘುನಾಥ ಭಟ್ ಎಚ್.ಆರ್., ೧೯೮೫, **ಐರೋಪ್ಯ ವಾಸ್ತುಶಿಲ್ಪ**, ಹೆಚ್.ಎಸ್. ಕೃಷ್ಣಸ್ವಾಮಿ **ಅವಲೋಕನ**, ಪುಟ ೧೨೪.

೬೭. **ಕನ್ನಡ ವಿಶ್ವಕೋಶ**, ೧೯೭೪, ಪುಟ ೧೮೫.

೬೮. ತಲ್ವಾಡಿ ಬಿ.ಎಸ್., ೨೦೧೪, **ದಕ್ಷಿಣ ಕರ್ನಾಟಕದ ಕ್ರೈಸ್ತ ಜನಪದ ಸಾಹಿತ್ಯ**, ಪುಟ ೫೨.

೬೯. ರೆವೆ. ಎನ್. ಸಭಾಪತಿ, ೨೦೦೧, **ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ**, ಬಳ್ಳಾರಿ ಲಂಡನೇ ಮಿಷನಿನ ಪ್ರಥಮ ಕೊಡುಗೆ, ಪುಟ ೮.

೭೦. ಶ್ರೀನಿವಾಸ ಹಾವನೂರ, ೨೦೧೧, **ಹೊಸಗನ್ನಡದ ಅರುಣೋದಯ**, ಪುಟ ೩೦.

೭೧. ಅದೇ, ಪುಟ ೩೦.

೭೨. ಅದೇ, ಪುಟ ೩೧.

೭೩. ರೆವೆ.ಎನ್. ಸಭಾಪತಿ, ೨೦೦೧, **ಪೂರ್ವೋಕ್ತ**, ಪುಟ ೪೩.

೭೪. ಅದೇ, ಪುಟ ೩೮.

೭೫. ಅದೇ, ಪುಟ ೩೮.

೭೬. ಅದೇ, ಪುಟ ೩೮.

೭೭. Rev. N. Sabhapathy, 2011, Short History of Holy Trinity Church Fort, Bellary, Page-18.

೭೮. ಮಂಜುದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೫, **ಬ್ರಿಟಿಷ್ ಪಾರಮ್ಯ ಮತ್ತು ಭಾರತೀಯ ಪುನರುಜ್ಜೀವನ(೧)(ಭಾಗ ಎರಡು)**, ಪುಟ ೬೪೩.

೭೯. ಅದೇ, ಪುಟ ೬೪೪.

೮೦. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ಪೂರ್ವೋಕ್ತ**, ಪುಟ ೧೦೩.

೮೧. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೫, **ಪೂರ್ವೋಕ್ತ**, ಪುಟ ೬೪೮.

೮೨. **ಭಾರತದ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ೧೯೮೬, **ಭಾಗ-ಮೂರು**, ಪುಟ ೭.

೮೩. ಬಿಪಿನ್‌ಚಂದ್ರ(ಮೂಲ), ಎಚ್.ಎಸ್. ಗೋಪಾಲರಾವ್(ಕನ್ನಡಕ್ಕೆ), ೨೦೧೨, **ಪೂರ್ವೋಕ್ತ**, ಪುಟ ೧೩೮.

೮೪. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೫, **ಪೂರ್ವೋಕ್ತ**, ಪುಟ ೭೨.

೮೫. ಧರ್ಮಪಾಲ್(ಮೂಲ), ಮಾಧವ ಪೆರಾಜೆ(ಕನ್ನಡಕ್ಕೆ) ೨೦೧೫, **ಚೆಲುವತರು**, ಪುಟ ೧೨೨.

೮೬. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೫, **ಪೂರ್ವೋಕ್ತ**, ಪುಟ ೯೩.

೮೭. **ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** ೧೯೮೬, ಭಾಗ-ಮೂರು, ಪುಟ ೭.

೮೮. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು), (ಪ್ರಸಂ.), ೨೦೦೫, **ಪೂರ್ವೋಕ್ತ,** ಪುಟ ೯೬.

೮೯. Lord Pentland, 1984, **Sixty Tour (Anantapur and Bellary),** ಪುಟ ೮೩.

೯೦. ರೆವೆ. ಯೆನ್. ಸಭಾಪತಿ, ೨೦೦೧, **ಪೂರ್ವೋಕ್ತ,** ಪುಟ ೮೭.

೯೧. Lord Pentland, 1914, **ಪೂರ್ವೋಕ್ತ,** ಪುಟ ೮೭.

೯೨. ಜಯಸುಮನ್, ೧೯೮೭, **ರಾಯದುರ್ಗಂ, ಮಂಡಲಂ ಚರಿತ್ರ-ಸಂಸ್ಕೃತಿ,** ಪುಟ ೭೧.

೯೩. ಸದಾಶಿವಪ್ಪ ಕುಂ.ಬಾ. ೨೦೦೮, **ಹರಪನಹಳ್ಳಿ ತಾಲೂಕು ಪರಿಚಯ,** ಪುಟ ೧೪೫.

೯೪. ಸರ್ಕಾರಿ ಪದವಿಪೂರ್ವ ಕಾಲೇಜ್, **ಹರಪನಹಳ್ಳಿ,** ಕಡತದ ಸಂಖ್ಯೆ-ಇ೧/ಐಮ್ಯ ಮಾಹಿತಿ/೦೮/೨೦೧೧-೧೨, ಪುಟ ೪ ಮತ್ತು ೫.

೯೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೯, **ಪೂರ್ವೋಕ್ತ,** ಪುಟ ೧೧೦.

೯೬. G.O.N. 867 W., Ist August 1908, P.W.D. T.N.A. ಪುಟ ૩.

೯೭. ಅದೇ, ಪುಟ ೩.

೯೮. ಅದೇ, ಪುಟ ೬.

೯೯. ಜಯಸುಮನ್, ೧೯೮೭, **ರಾಯದುರ್ಗಂ ಮಂಡಲಂ ಚರಿತ್ರ-ಸಂಸ್ಕೃತಿ,** ಪುಟ ೮೪.

೧೦೦. **ಬಳ್ಳಾರಿ ಡಿಸ್ಟ್ರಿಕ್ಟು ಗೆಜಿಟ್ ಲೋಕಲ್ ಫಂಡ್ ಷೀಟು,** ೧೬ ಫೆಬ್ರವರಿ ೧೯೨೧ರ ಬುಧವಾರ ಸಾಯಂತ್ರಮು, ಪುಟ ೪.

೧೦೧. ಅದೇ, ಪುಟ ೪.

೧೦೨. ಅದೇ, ಪುಟ ೪.

೧೦೩. ಜಯಸುಮನ್, ೧೯೮೭, **ಪೂರ್ವೋಕ್ತ,** ಪುಟ ೮೪.

೧೦೪. ಸಿದ್ಧರಾಮ ಹಿರೇಮಠ, ೩೦ನೆಯ ಮೇ ೨೦೧೩, **ಪ್ರಜಾವಾಣಿ, ದಿನಪತ್ರಿಕೆ,** ಪುಟ ೩.

೧೦೫. ಸೋಮಶೇಖರಯ್ಯ ಎ.ಎಂ., ೩೦ ಜನವರಿ ೨೦೧೭, **ಪಾಳುಬಿದ್ದ ಸ್ವಾತಂತ್ರ ಭವನ, ಪ್ರಜಾವಾಣಿ,** ದಿನಪತ್ರಿಕೆ, ಪುಟ ೩ಬಿ.

೧೦೬. ಉಜ್ಜಿನಿ ರುದ್ರಪ್ಪ, ೨೦೧೨, **ಕೌತುಕ,** ಪುಟ ೨೯.

೧೦೭. **ಭಾರತದ ಗ್ಯಾಸೆಟಿಯರ್ ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** ಭಾಗ-ಮೂರು, ಪುಟ ೧೭೪.

೧೦೮. ಅದೇ, ಪುಟ ೧೭೩.

೧೦೯. ಸಮದ್ ಕೊಟ್ಟೂರು, ಮೇ ೧೦ ೨೦೧೬, **ಬೆಂಗಾಡಿಗೆ ನೀರು ಹರಿಸಿದ ಭಗೀರಥರು, ಪ್ರಜಾವಾಣಿ,** ಕರ್ನಾಟಕ ದರ್ಶನ, ಪುಟ ೩.

೧೧೦. ಅದೇ, ಪುಟ ೩.

೧೧೧. ಅದೇ, ಪುಟ ೩.

೧೧೨. ಅದೇ, ಪುಟ ೩.

೧೧೩. ಅದೇ, ಪುಟ ೩.

೧೧೪. ಮಹದೇವ ಸಿ., ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ, ೨೦೦೨, **ಹೊಸಪೇಟೆ ತಾಲ್ಲೂಕು ದರ್ಶನ,** ಪುಟ ೩೫೫.

೧೧೫. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು) (ಪ್ರ.ಸಂ.), ೨೦೦೪, **ಪೂರ್ವೋಕ್ತ,** ಪುಟ ೫೭೩.

೧೧೬. ಶ್ರೀನಿವಾಸನ್ ಎಂ.ಜಿ., ೨೦೧೨, **ಸಿವಿಲ್ ಇಂಜಿನಿಯರಿಂಗ್ ಒಂದು ಪರಿಚಯ,** ಪುಟ ೫೭.

೧೧೭. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು), (ಪ್ರ.ಸಂ.), ೨೦೦೪, **ಪೂರ್ವೋಕ್ತ,** ಪುಟ ೫೭೪.

೧೧೮. ರಾಜಪ್ಪ ಡಿ.ಸಿ., ೧೯೯೫, **ಮೈಸೂರು ರಾಜ್ಯದಲ್ಲಿ ವಾಣಿಜ್ಯ ಮತ್ತು ಕರಕುಶಲ ಕಲೆಗಳು,** ಪುಟ ೧೮೩.

೧೧೯. ಮಹದೇವ ಸಿ., ಎ. ಸುಬ್ಬಣ್ಣ ರೈ, ಮಾಧವ ಪೆರಾಜೆ, ೨೦೦೨, **ಪೂರ್ವೋಕ್ತ,** ಪುಟ ೩೯೫.

೧೨೦. ಮಜುಂದಾರ್ ಆರ್.ಸಿ.(ಮೂಲ), ಎ.ವಿ. ನರಸಿಂಹಮೂರ್ತಿ(ಅನು)(ಪ್ರ.ಸಂ.), ೨೦೦೪, **ಪೂರ್ವೋಕ್ತ,** ಪುಟ ೫೭೨.

೧೨೧. ಅದೇ, ಪುಟ ೫೭೧.

೧೨೨. ಉಜ್ಜಿನಿ ರುದ್ರಪ್ಪ, ೨೦೧೨, **ಪೂರ್ವೋಕ್ತ,** ಪುಟ ೭೪.

೧೨೩. ಸುಣಗಾರ ಮಂಜುನಾಥ, ೬ನೇ ಜುಲೈ ೨೦೧೪, **ಹಗರಿಬೊಮ್ಮನಹಳ್ಳಿಯಲ್ಲೊಂದು ಬ್ರಿಟಿಷರ ಕಾಲದ ಸೇತುವೆ,** ಪ್ರಜಾವಾಣಿ, ಪುಟ ೩.

೧೨೪. ಅದೇ, ಪುಟ ೩.

೧೨೫. ಅಗಸ್ಟೀನ್ ರಾಜು, ೨೦೦೯, ಕ್ರೈಸ್ತ ಧರ್ಮದಲ್ಲಿ ಶವಸಂಸ್ಕಾರ, ರೇಣುಕಾ ಕೋಡಗುಂಟಿ(ಸಂ), **ಕರ್ನಾಟಕದಲ್ಲಿ ಶವಸಂಸ್ಕಾರ,** ಪುಟ ೭೧.

೧೨೬. ಅದೇ, ಪುಟ ೭೨.



ಅಧ್ಯಾಯ : ನಾಲ್ಕು

# ಕಲೆ

೪.೧. ಪಾಶ್ಚಾತ್ಯ ಕಲಾ ಪ್ರಕಾರಗಳು

೪.೨. ಚಿತ್ರಕಲೆ

೪.೩. ಭಿತ್ತಿಚಿತ್ರ ಕಲೆ

೪.೪. ಮೂರ್ತಿಶಿಲ್ಪ ಹಾಗೂ ಕಲಾಕೃತಿಗಳು

## ಅಧ್ಯಾಯ : ನಾಲ್ಕು

# ಕಲೆ

ಭಾರತೀಯ ಕಲೆಗಳನ್ನು ೬೪ ಕಲೆಗಳೆಂದು ಸಂಖ್ಯೆಯಲ್ಲಿ ಪಟ್ಟಿ ಮಾಡಿರುವುದು ವಿಧಿತಷ್ಟೆ. ಆದರೆ, ಈ ಸಂಖ್ಯೆಯೂ ನಿಶ್ಚಿತವಾದುದಲ್ಲ. ಕೆಲವೊಮ್ಮೆ ಈ ಪಟ್ಟಿಯಲ್ಲಿ ಐನೂರಕ್ಕೂ ಹೆಚ್ಚು ಸಂಖ್ಯೆಯ ಕಲೆಗಳು ಸೇರ್ಪಡೆಯಾಗುವುದುಂಟು. ಇವುಗಳನ್ನು ಲಲಿತಕಲೆ ಮತ್ತು ಕುಶಲಕಲೆ ಎಂದು ವಿಭಜಿಸಿ ಗುರುತಿಸುವುದು ರೂಢಿ. ಭಾವಪ್ರಧಾನವಾದುದು ಲಲಿತಕಲೆ ಎಂದೂ, ವಸ್ತುಪ್ರಧಾನವಾದುದು. ಕುಶಲಕಲೆ ಎಂದೂ ಸ್ಥೂಲವಾಗಿ ವಿಭಾಗಿಸಲಾಗಿದೆ. ಸಂಗೀತ, ನೃತ್ಯ, ಚಿತ್ರರಚನೆ ಮುಂತಾದವು ಲಲಿತಕಲೆಗಳೆನಿಸಿವೆ. ಈ ಕಲೆಗೆ ಪ್ರತಿಭೆ, ಸ್ವಂತಿಕೆ ಬಹುಮುಖ್ಯ. ಕಠಿಣ ಪರಿಶ್ರಮ ಹಾಗೂ ಸತತ ಅಭ್ಯಾಸಗಳಿಂದ ಇದು ಉತ್ಕೃಷ್ಟವೆನ್ನಿಸುತ್ತದೆ. ಮನೋರಂಜನೆಯೇ ಈ ಕಲೆಯ ಮುಖ್ಯ ಉದ್ದೇಶ. ಆದರೆ, ಕರಕುಶಲ ಕಲೆಗೆ ಪ್ರತಿಭೆಗಿಂತಲೂ ಬುದ್ಧಿ, ಕೌಶಲಗಳೇ ವಿಶೇಷವಾಗಿ ಬೇಕಾಗುತ್ತದೆ. ಜೊತೆಗೆ ದೈಹಿಕ ಪರಿಶ್ರಮವೂ ಅಪೇಕ್ಷಣೀಯ. ಸತತ ಅಭ್ಯಾಸದಿಂದ ಇದನ್ನು ಕರಗತಗೊಳಿಸಿಕೊಳ್ಳಲು ಸಾಧ್ಯ. ಹೆಚ್ಚಿನ ಕರಕುಶಲ ಕಲೆಗಳು ಪರಂಪರಾಗವಾಗಿ ಬರುವಂತಹವು; ಸಾಂಪ್ರದಾಯಿಕವಾದುವು. ಇದನ್ನು ಪ್ರಾಚೀನ ಕಾಲದಲ್ಲಿ ಕಸುಬು ಎಂದೇ ಪರಿಗಣಿಸುತ್ತಿದ್ದರು. ಏಕೆಂದರೆ, ಈ ಕಸುಬು ಅಥವಾ ವಿದ್ಯೆಗಳು ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಅನುವಂಶೀಯವಾಗಿ ಒಲಿದು ಬರುವಂತಹುದಾದ್ದರಿಂದ ಇದನ್ನು ಕುಲಕಸುಬು ಎಂದೇ ಗುರುತಿಸಲಾಗಿದೆ.

ಪ್ರಾಗಿತಿಹಾಸದ ಮಾನವನು ಪ್ರಾಣಿ-ಪಕ್ಷಿಗಳಂತೆ ಊಟ, ನಿದ್ದೆ, ಮೈಥುನಗಳಲ್ಲಿಯೇ ಆಯುಷ್ಯ ವ್ಯಯ ಮಾಡುವವನಲ್ಲ. ಆತ ಬದುಕಿನ ಕೆಲವೊಂದು ಉದ್ದೇಶಗಳನ್ನು ರೂಪಿಸಿಕೊಂಡ. ಆ ಉದ್ದೇಶ ಸಾಧನೆಯಲ್ಲಿ ಕೆಲವು ವ್ಯವಸ್ಥೆಗಳನ್ನು ಮಾಡಿಕೊಂಡ. ಆ ವ್ಯವಸ್ಥೆಗಳಲ್ಲಿ ಸುಖ, ದುಃಖ, ನೋವು-ನಲಿವು, ಬೇನೆ ಬೇಗುದಿಗಳಿಗೆ ಪಕ್ಕದಾಗ ಬದುಕಿನ ಏರಿಳಿತಗಳಲ್ಲಿ ವಿಭಿನ್ನ ಬಗೆಯ ಬದುಕಿನ ರೀತಿಗಳು ರೂಪಿಸಿಕೊಂಡ. ಸುಖ ನೀಡಲು, ಸುಖ ನೀಡುವ ಸಾಧನಗಳು, ದುಃಖಿಯಾಗಿದ್ದಾಗ ದುಃಖ ನಿವಾರಣೋಪಾಯಗಳನ್ನು ಶೋಧಿಸಿಕೊಂಡ. ಈ ಶೋಧನೆಗಳು ದುಃಖವನ್ನು ನಿವಾರಿಸುವಲ್ಲಿ ಪರಿಹಾರಗಳೆಂದು ನಂಬಿಕೊಂಡ ಇಂತಹ ನಂಬಿಕೆಗಳ ನೆಲೆಯಿಂದ

ಅನೇಕ ಆಚರಣೆಗಳು, ಆರಾಧನೆಗಳನ್ನು ರೂಢಿಸಿಕೊಂಡ. ಈ ಆಚರಣೆಗಳಿಗೆ ಆರಾಧನೆಗಳಿಗೆ ಪ್ರಾಕೃತಿಕ ಏರುಪೇರುಗಳ ವಿವಿಧ ಮಜಲುಗಳನ್ನು ತಾಳೆಹಾಕುತ್ತಾ ಒಂದು ವ್ಯವಸ್ಥೆಯಾಗಿ ರೂಪಿಸಿಕೊಂಡ. ನಂಬಿಕೆಯ ನೆಲೆಯಿಂದ ಹುಟ್ಟಿಕೊಂಡ ಆಚರಣೆಗಳು, ಆರಾಧನೆಗಳು ಬದುಕಿನ ಉಪಯೋಗ ವಿಧಿಗಳಾದವು. ಆ ವಿಧಿ-ವಿಧಾನಗಳ ರೀತಿನೀತಿಗಳಲ್ಲೂ, ಮಾನವನ ಬುದ್ಧಿ, ಆಲೋಚನೆಗಳು ಕೆಲಸ ಮಾಡಿರುವುದನ್ನು ಕಾಣಬಹುದು. ಈ ತೆರನ ವಿಧಿ-ವಿಧಾನಗಳನ್ನು ನೆರವೇರಿಸುವ ಪ್ರಾಯೋಗಿಕವಾಗಿ ಆಚರಿಸುವ ವೇಳೆಯಲ್ಲಿ ಅನೇಕ ಕಲಾ ವಸ್ತುಗಳನ್ನು ಸೃಷ್ಟಿಯ ಅಗತ್ಯವನ್ನು ಮನಗಂಡ. ಹೀಗೆ ಉಪಯೋಗಕ್ಕೆ ಅಗತ್ಯವೆನಿಸಿದ ಕಲಾವಸ್ತುವಿನ ಸೃಷ್ಟಿಯ ಕ್ರಿಯೆ, ವಿವಿಧ ಹಂತಗಳಲ್ಲಿ ನಡೆಯುತ್ತಲೇ ಸಾಗಿದೆ. ಆದಿಮಾನವ ಕಾಡಿನಲ್ಲಿ ವಾಸ ಮಾಡಿ ಬದುಕಲಾರಂಭಿಸಿದ ವೇಳೆ ಆಹಾರದ ಬೇಟೆಗಾಗಿ ಬೇಕಾದ ಆಯುಧೋಪಕರಣಗಳನ್ನು, ಪಶುಪಾಲಕನಾಗಿ ಬದುಕಿಗೆ ಅನಿವಾರ್ಯವಾದ ವಸ್ತುಗಳನ್ನು, ವ್ಯವಸಾಯವನ್ನು ಮಾಡಿ ಬದುಕಲಾರಭಿಸಿದಾಗ ಅದಕ್ಕೆ ಅಗತ್ಯವೆನಿಸಿದ ವ್ಯವಸಾಯದ ಉಪಕರಣಗಳನ್ನು ನಾಗರೀಕನಾಗಿ ಗೃಹಜೀವನವನ್ನು ರೂಢಿಸಿಕೊಂಡಾಗ ಆತನಿಗೆ ಬೇಕಾದ ಉಡುಗೆ ತೊಡುಗೆಗಳನ್ನು ಎಲ್ಲೆಲ್ಲಿ, ಯಾವಾಗೆಲ್ಲಾ ಉಪಯೋಗ ಎನಿಸಿತೋ ಆಗೆಲ್ಲಾ ಮಾನವನು ತನ್ನಲ್ಲಿರುವ ಕಲಾ ಪ್ರತಿಭೆ ಹಾಗೂ ತಂತ್ರ ಕೌಶಲ್ಯಗಳಿಂದ ವಸ್ತುಗಳನ್ನು ಸೃಷ್ಟಿಸಿ, ಅವುಗಳನ್ನು ಬಳಸುತ್ತಾ ಹೋದ. ಹೀಗೆ ತನ್ನ ಬದುಕನ್ನು ಸುಧಾರಿಸಿಕೊಳ್ಳುತ್ತಾ ಸಾಗಿದ್ದಾಗ ಆತನ ಮನಸ್ಸು ಸೌಂದರ್ಯದ ಕಡೆ ತಿರುಗಿತು. ತಾನು ಕಂಡು ನೋಡಿದ್ದ ಅನುಭವವನ್ನು ಒಂದೆಡೆ ವ್ಯಕ್ತಪಡಿಸಿದ ಈ ಪ್ರಯತ್ನವೇ ಕಲಾಸೃಷ್ಟಿಗೆ ನಾಂದಿಯಾಯಿತು.

ಕಲೆ ಎಂದರೇನು? ಪ್ರಸ್ತುತ ಕಾಲಾವಧಿಯಲ್ಲಿ ಇದ್ದುದನ್ನು ಇದ್ದ ಹಾಗೆಯೇ ಚಿತ್ರಿಸುವುದನ್ನು ಕುಶಲಕಲೆ (Craft) ಎನ್ನುತ್ತೇವೆಯೇ ಹೊರತು ಅದನ್ನು ಕಲೆ ಎಂದು ಹೇಳುವುದಿಲ್ಲ. ಆದರೆ, ನಿಜವಾಗಿ ಕಲೆ ಎಂದರೇನು ಎನ್ನುವ ಬಗ್ಗೆ ಬಹಳ ಹಿಂದಿನ ಕಾಲದಿಂದಲೂ ಚರ್ಚೆ ನಡೆಯುತ್ತಿದೆ. ಆದರೆ, ಈ ಪ್ರಶ್ನೆಗೆ ಸಮರ್ಪಕವಾಗಿ ಸರ್ವಸಮ್ಮತವಾದ ಉತ್ತರ ಈವರೆಗೆ ಸಿಕ್ಕಿಲ್ಲ. ಇದನ್ನು ಡಿಫೈನ್ ಮಾಡುವುದು ಕಷ್ಟದ ಕೆಲಸವೇ? ಪ್ರಾಯಶಃ ಜೀವನ ಎಂದರೇನು? ಎನ್ನುವ ಪ್ರಶ್ನೆಗೆ ವ್ಯಾಖ್ಯೆಯ ರೂಪದಲ್ಲಿ ಉತ್ತರಿಸುವುದು ಎಷ್ಟು ಕಷ್ಟವೋ ಹಾಗೆಯೇ ಕಲೆ ಎಂದರೇನು ಎನ್ನುವ ಬಗ್ಗೆ ಸೂತ್ರ ರೂಪದಲ್ಲಿ ಹೇಳುವುದು ಕಷ್ಟ. ಆದರೂ, ಕೆಲವು ಅಭಿಪ್ರಾಯಗಳನ್ನು ನೋಡೋಣ.

ಟಾಲ್‌ಸ್ಟಾಯ್ ಅವರ ಪ್ರಕಾರ "ಅನುಭವಿಸಿ ಆಗಿರುವ ಭಾವವನ್ನು ಒಬ್ಬಾತ ತನ್ನಲ್ಲಿ ಎಚ್ಚರಿಸಿಕೊಂಡು, ಅದನ್ನು ಚಲನೆ, ರೇಖೆ, ಬಣ್ಣ, ನಾದ, ಆಕೃತಿ ಅಥವಾ ಶಬ್ದಗಳ ಮೂಲಕ ಅಭಿವ್ಯಕ್ತಿಗೊಳಿಸಿ, ಆ ಭಾವವನ್ನು ಇನ್ನೊಬ್ಬ ನಡೆಗೆ ಪ್ರವಹಿಸಿದಾಗ ಎರಡನೆಯವನಲ್ಲೂ ಮೂಲದ ಭಾವನೆ. ಸ್ಫುರಿಸುವಂತೆ ಮಾಡುವುದೇ ಕಲೆಯ ಕೆಲಸ". ಇಮ್ಯಾನ್ಯುಯಲ್ ಕ್ಯಾಂಟ್ ಅವರ ಪ್ರಕಾರ "ಯಾವುದು ತಾಟಸ್ಥ್ಯ ಚಿಂತನೆಯಲ್ಲಿ ಆನಂದವನ್ನು ಕೊಡಬಲ್ಲುದೋ ಅದೇ

ಕಲೆ. ಕ್ರೋಷೆ ಅವರ ಪ್ರಕಾರ "ಇಂದ್ರಿಯ ಜ್ಞಾನ, ಭಾವೋದ್ರೇಕ ಸ್ಥಿತಿಗಳು ತಟಸ್ಥವಾಗಿರುತ್ತವೆ. ಕಲೆ ಕ್ರಿಯಾಶೀಲವಾಗಿರುತ್ತದೆ. ಕಲೆ ಎಂದರೆ, ತಟಸ್ಥ ಅವಲೋಕನವೂ ಅಲ್ಲ, ಹಗಲುಗನಸು ಕಾಣುವುದೂ ಅಲ್ಲ. ಅದು ವ್ಯವಸ್ಥಾಪಿಸಲ್ಪಟ್ಟ ಪ್ರತಿಮೆಗಳ ಮೂಲಕ ಉಂಟಾಗುವ ಮಾನಸಿಕ ದೃಶ್ಯ" ಎನ್ನುತ್ತಾರೆ. ಕ್ಲೈವ್ ಬೆಲ್ ಅವರ ಪ್ರಕಾರ "ಕಲೆಯಲ್ಲಿ ಕಾಣುವ ಅದರ ಅತ್ಯುಚ್ಚ ಗುಣ ಸ್ವರೂಪವೇ ಅದರ ಸ್ವರೂಪ. ಸ್ವರೂಪವೆಂದರೆ ವ್ಯವಸ್ಥೆ, ಕ್ರಮಾನುಗತಿ, ಚಲನೆ ಮತ್ತು ಆಕಾರಗಳ ಒಟ್ಟಂದ. ಕಲೆಯು ಭಾವಾತ್ಮಕವಾಗಿದ್ದರೂ ಅದು ಪ್ರಚೋದಿತ ಸೌಂದರ್ಯ ಭಾವ".[೧] ವಸಾಹತುಶಾಹಿ ಕಾಲದಲ್ಲಿ ದಾರ್ಶನಿಕನೂ ಆದ ಷೆಲ್ಲಿಂಗ್‌ನ(೧೭೭೫-೧೮೫೫) ತತ್ವಗಳ ಪ್ರಕಾರ, "ಜ್ಞಾತೃ ತನ್ನ ಸ್ವಂತ ಜ್ಞೇಯವಾಗುವಂತಹ ಅಥವಾ ಜ್ಞೇಯ ತನ್ನ ಸ್ವಂತ ಜ್ಞಾತೃವಾಗುವಂತಹ ವಸ್ತು ಪರಿಕಲ್ಪನೆಯ ಉತ್ಪಾದನೆ ಅಥವಾ ಫಲಿತಾಂಶವೇ ಕಲೆ".[೨] ಸೌಂದರ್ಯವು ಸಾಂತದಲ್ಲಿನ ಅನಂತದ ಪರಿಗ್ರಹಣ ಮತ್ತು ಕಲಾಕೃತಿಗಳ ಮುಖ್ಯ ವೈಲಕ್ಷಣ್ಯವೆಂದರೆ ಅಪ್ರಜ್ಞಾಪೂರ್ವಕ ಅನಂತತೆ. ಕಲೆಯು ವಸ್ತುನಿಷ್ಠವಾದುದರೊಡನೆ ವ್ಯಕ್ತಿನಿಷ್ಠವಾದುದರ, ಬುದ್ಧಿಯೊಡನೆ ಪ್ರಕೃತಿಯ, ಪ್ರಜ್ಞಾಪೂರ್ವಕವಾದುದರೊಡನೆ ಅಪ್ರಜ್ಞಾಪೂರ್ವಕವಾದುದರ ಸಂಯೋಗ; ಆದ್ದರಿಂದ ಕಲೆ ಜ್ಞಾನದ ಅತ್ಯುನ್ನತ ಸಾಧನ. ಸೌಂದರ್ಯವು ಸಂಗತಿಗಳನ್ನು ಅವುಗಳಷ್ಟಕ್ಕೆ ಅವು ಮೂಲರೂಪದಲ್ಲಿರುವಂತೆ ಪರಿಭಾವಿಸುವಿಕೆ, ಸುಂದರವಾದುದನ್ನು ಕಲಾವಿದ ತನ್ನ ಜ್ಞಾನ ಅಥವಾ ಕೌಶಲ್ಯದಿಂದ ಉತ್ಪಾದಿಸುವುದಿಲ್ಲ. ಅವನಲ್ಲಿರುವ ಸೌಂದರ್ಯದ ಭಾವನೆಯೆ ಅದನ್ನು ಉತ್ಪಾದಿಸುತ್ತವೆ. ಹೀಗೆ, ಪ್ಲೇಟೋವಿನಿಂದ ಇಂದಿನವರೆಗೆ ಬೇರೆ ಬೇರೆಯ ಅಭಿಪ್ರಾಯಗಳು ಬಂದಿವೆ; ಬರುತ್ತಿವೆ. ಒಟ್ಟಿನಲ್ಲಿ ಕಲೆ ಮನುಷ್ಯನ ಸಹಜವಾದ ಒಂದು ಪ್ರವೃತ್ತಿ. ಇದು ಕಲಾವಿದನ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿ ಅಥವಾ ಮನುಷ್ಯನಲ್ಲಿ ಅಂತರ್ಗವಾಗಿರುವ ಪ್ರತಿಭೆಯಿಂದ ವಿಕಾಸಗೊಳ್ಳುವುದೇ ಕಲೆ.

ಭಾರತೀಯ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನ ಪಡೆದ ವಾಸ್ತುಕಲೆ, ಶಿಲ್ಪಕಲೆ ಹಾಗೂ ಚಿತ್ರಕಲೆಯು ವಿವಿಧ ಕಾಲಘಟ್ಟಗಳಲ್ಲಿ ಬೆಳವಣಿಗೆಯಾಗುತ್ತಾ ಬಂದುದಲ್ಲದೆ, ಪ್ರದೇಶನಿಷ್ಠ, ಜನಾಂಗನಿಷ್ಠ ವೈಶಿಷ್ಟ್ಯತೆಯನ್ನು ಹೊಂದಿ, ರಾಜಾಶ್ರಯದಲ್ಲಿ ವಿವಿಧ ಧರ್ಮದ ಧಾರ್ಮಿಕ ಹಿನ್ನೆಲೆಯಲ್ಲಿಯೂ ಕಾಣಿಸಿಕೊಂಡಿದೆ. ೧೮ನೆಯ ಶತಮಾನದಲ್ಲಿ ಕೇಂದ್ರೀಕೃತ ಆಡಳಿತ ಕೊನೆಗೊಂಡು ಸ್ಥಳೀಯ ಸಾಮಂತರು ತಲೆಯೆತ್ತಿದರು. ಈ ಸಂಸ್ಥಾನಗಳಲ್ಲಿ ಸ್ಥಾಪನೆಯಾಗಿದ್ದ ಕಲಾಶಾಲೆಗಳು ಕ್ರಮೇಣ ರಾಜಾಶ್ರಯವಿಲ್ಲದೆ ಅವನತಿಯತ್ತ ಸಾಗಿದವು. ಕಲಾಶಾಲೆಗಳಿದ್ದ ಕೆಲವು ಪ್ರಾಂತೀಯ ಅಥವಾ ನಾಡಿನ ಶ್ರೀಮಂತ ವರ್ಗದವರ ಆಶ್ರಯ ಪಡೆದರೆ, ಇನ್ನೂ ಕೆಲವರು ಆಗತಾನೇ ಅಧಿಕಾರಕ್ಕೆ ಬಂದ ಈಸ್ಟ್ ಇಂಡಿಯಾ ಕಂಪನಿ ಸರ್ಕಾರದ ಅಧಿಕಾರಿಗಳನ್ನು ಆಶ್ರಯಿಸಿದರು. ದೇಶಿ ಕಲಾವಿದರು ಮಾನವ ದೇಹದ ಅಂಗರಚನಾಶಾಸ್ತ್ರ, ವಾಸ್ತವ ಚಿತ್ರಣ ಶೈಲಿ ಹಾಗೂ ಐರೋಪ್ಯ ಕಲಾವಿದರ ಕಲಾಕೃತಿಗಳಿಂದ ಪ್ರಭಾವಿತಗೊಂಡು, ಪಾಶ್ಚಾತ್ಯ ಶೈಲಿಯ ಲಕ್ಷಣಗಳನ್ನು ತಮ್ಮ ಕೃತಿಯಲ್ಲಿ ಅಳವಡಿಸಿಕೊಂಡರು. ನೈಜಚಿತ್ರಣ ಶೈಲಿಯಿಂದ ಪ್ರಭಾವಿತಗೊಂಡು,

ಕೃತಿ ರಚನೆಯಲ್ಲಿ ತೊಡಗಿದ ಭಾರತದ ಚಿತ್ರಕಲಾವಿದರುಗಳಲ್ಲಿ ಹೆಚ್ಚು ಕೇಳಿ ಬರುವ ಹೆಸರು ರಾಜಾ ರವಿವರ್ಮನದು. ಖ್ಯಾತ ಇತಿಹಾಸಕಾರ ವಿನ್ಸೆಂಟ್ ಸ್ಮಿನ್‌ನು 'ರವಿವರ್ಮನು ಐರೋಪ್ಯ ಶೈಲಿಯ ಪ್ರಸಿದ್ಧ ಭಾರತೀಯ ಕಲಾವಿದ'[೩] ಎಂದು ಹೇಳಿರುವುದು ಅತ್ಯಂತ ಸ್ತುತ್ಯವೆನಿಸುತ್ತದೆ. ಇದರಿಂದಾಗಿ ಭಾರತೀಯ ಸಾಂಪ್ರದಾಯಿಕ ವಾಸ್ತು, ಶಿಲ್ಪ ಹಾಗೂ ಚಿತ್ರಕಲೆಯಲ್ಲಿ ಐರೋಪ್ಯ ಶೈಲಿಯ ಲಕ್ಷಣಗಳು ಸಹಜವಾಗಿಯೇ ಕಾಣಿಸಿಕೊಂಡವು.

ಕಲಾ ಶಿಕ್ಷಣಕ್ಕೆ ಕಲ್ಕತ್ತಾ, ಮದ್ರಾಸ್, ಮುಂಬಾಯಿಯಂತಹ ನಗರಗಳು ಪ್ರಮುಖ ನೆಲೆಗಳಾಗಿದ್ದವು. ಇಲ್ಲಿ ಕಲಾವಿದರಿಗೆ ವಿವಿಧ ಬಗೆಯ ಅನುಭವ ಮತ್ತು ಕಲೆಗೆ ಬೇಕಾದ ವಾತಾವರಣವಿತ್ತು. ಇದರಿಂದ ಕಲಾವಿದರು ಬ್ರಿಟಿಷರ ಅಕಾಡೆಮಿಕ್ ಕಲಾಶಿಕ್ಷಣ ಪಡೆದು, ಹೊಸ ಕಲೆಯ ಅಭಿವ್ಯಕ್ತಿಗೆ ಪ್ರಮುಖ ಕಲಾ ಶಿಕ್ಷಣವನ್ನು ಪಡೆಯುತ್ತಿದ್ದ ಭಾರತದ ಬಹುಪಾಲು ಕಲಾವಿದರು ಆ ಸಮಯದಲ್ಲಿ ಕಲೆಗಾಗಿಯೇ ತಮ್ಮ ಬದುಕನ್ನು ಸವೆಸಿದ ಅವರು ವರ್ಣಚಿತ್ರ, ಶಿಲ್ಪ ಮತ್ತು ಫಲಕ ಈ ಮೂರು ಮಾಧ್ಯಮಗಳಲ್ಲಿ ಪರಿಣಿತರಾಗಿದ್ದರು. 'ಕಲಾವಿದರು ತಮ್ಮ ಕೊಠಡಿಯಲ್ಲಿ ಕುಂಚ, ವರ್ಣಗಳು, ಕಾಗದ ಮತ್ತು ಕ್ಯಾನವಾಸುಗಳೊಡನೆ ಕಲೆಯ ಸೃಷ್ಟಿಯ ಕಾರ್ಯ ಮಾಡುತ್ತಿದ್ದರು. ಚಿಕ್ಕ ಚಿತ್ರಗಳಿಂದ ಹಿಡಿದು ದೊಡ್ಡ ಭಿತ್ತಿ ಚಿತ್ರಗಳು ಮತ್ತು ಅಣುಚಿತ್ರಗಳು, ಭಾವಚಿತ್ರಗಳು, ಪಟಗಳನ್ನು ಬರೆಯುತ್ತಿದ್ದರು'.[೪] ವಿಶೇಷವಾಗಿ ಪ್ರಕೃತಿಯಲ್ಲಿ ಬೆಳಕು-ನೆರಳುಗಳ ವಿನ್ಯಾಸದ ಬಗ್ಗೆ ಇವರು ಸಾಮರ್ಥ್ಯವು ವೈಶಿಷ್ಟ್ಯಪೂರ್ಣವಾಗಿತ್ತು. ನಂತರದ ಕಾಲಘಟ್ಟದಲ್ಲಿ ಇವರ ಒಲವು ಹೆಚ್ಚು ವಾಸ್ತವಿಕೆಯಾಗಿದ್ದು, ಇನ್ನೂ ಉನ್ನತವಾದ ಕಲೆಯ ರೂಪವಾಗಿ ಇವರ ನಿಸರ್ಗದ ಅಧ್ಯಯನಗಳು ಮತ್ತು ಪ್ರಕೃತಿಯ ಚಿತ್ರಗಳಲ್ಲಿ ಪ್ರತಿಬಿಂಬಿಸಿವೆ.

೧೮ ಮತ್ತು ೧೯ನೆಯ ಶತಮಾನದಲ್ಲಿದ್ದ ಕಲಾವಿದರು ದೇಶಿ ಪರಿಕಲ್ಪನೆಗಳಿಗೆ ಪಾಶ್ಚಾತ್ಯ ಕಲಾವಿಜ್ಞಾನವನ್ನು ಅಳವಡಿಸಿದ್ದಾರೆ. ಇವರ ವಸ್ತುವಿಷಯವು ಭಾರತೀಯದ್ದಾಗಿದ್ದು, ಅವುಗಳಿಗೆ 'ಜಲವರ್ಣ ಚಿತ್ರಗಳಲ್ಲಿ ನೈಪುಣ್ಯತೆ ಪಡೆದಿದ್ದು, ಜಲವರ್ಣಗಳಿಗೆ ತೈಲವರ್ಣಗಳ ಘನತ್ವ ಮತ್ತು ಸಾಂದ್ರತೆಯನ್ನು ತಿಳಿಯಲು ಇವರು ಯಾವಾಗಲೂ ಜಲವರ್ಣಗಳಿಗೆ ಮೊದಲ ಆದ್ಯತೆ ನೀಡಿದ್ದರು".[೫] ಈ ಕಾಲಘಟ್ಟದ ಕಲಾವಿದರು ನೀಲಿ, ಹಸಿರು, ಕೆಂಪು, ಕಪ್ಪು ಮತ್ತು ಬಿಳಿ ಹೀಗೆ ಪಂಚವರ್ಣಗಳಿಂದ ಚಿತ್ರಗಳನ್ನು ರಚಿಸುತ್ತಿದ್ದರು. ಪಾಶ್ಚಾತ್ಯ ಕಲಾ ಪ್ರಕಾರಗಳಾದ ಪುನರುಜ್ಜೀವನ ಕಲೆ, ಬಾರೋಕ್, ರೋಕೊಕೊ, ಗಾಥಿಕ್, ಸಂಗೀತ ಕಲೆಯ ಅಬ್ಬರದ ಪ್ರಚಾರ, ಪ್ರಭಾವ ಮತ್ತು ಶಿಕ್ಷಣದಿಂದಾಗಿ ಭಾರತೀಯ ಕಲೆಯು ಅವನತಿಯತ್ತ ಸಾಗುತ್ತಿದ್ದ ವೇಳೆಯಲ್ಲಿ ದೇಶೀಯತೆಯನ್ನು ಉಳಿಸಿಕೊಳ್ಳುವಂತಹ ಯಾವ ಕಲಾ ಪಂಥವು ಇರಲಿಲ್ಲವೆ? ಇತ್ತು. ಭಾರತದಲ್ಲಿ ನಡೆದ ದೊಡ್ಡ ಕಲಾಚಳವಳಿಯೆಂದರೆ, ಬಂಗಾಳದ ಪುನರುಜ್ಜೀವನ ಕಲಾ ಪಂಥ. ಬಂಗಾಳ ಕಲಾಶೈಲಿ ನಮ್ಮ ದೇಶದ ಸಂಸ್ಕೃತಿ ಪರಂಪರೆಯನ್ನು ಉಳಿಸಿಕೊಳ್ಳುವ ಮತ್ತು ಅದನ್ನು ವಿಶ್ವಪ್ರಜ್ಞೆಯನ್ನಾಗಿಸುವ ಮಹಾನ್ ಉದ್ದೇಶವನ್ನು ಹೊಂದಿತ್ತು. ಐರೋಪ್ಯ ಕಲಾ ತಂತ್ರಗಳ ಪ್ರಭಾವದಿಂದ ಕಲಾಕೃತಿಗಳಲ್ಲಿ ನಾವು ಕಾಣುವ ಕಲಾಭಿವ್ಯಕ್ತಿಯ ಅತ್ಯಂತ

ವಿಶಿಷ್ಟವಾದ ಮಾಧ್ಯಮವು ರೂಪುಗೊಂಡಿತು. ಕರ್ನಾಟಕದಲ್ಲಿ ಮಂಗಳೂರು, ಬೆಳಗಾವಿ, ಧಾರವಾಡ, ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಪಾಶ್ಚಾತ್ಯ ಕಲಾ ಪ್ರಕಾರಗಳು ಹೆಚ್ಚು ಪ್ರಭಾವ ಬೀರಿದೆ. ಆದರೆ, ಬಳ್ಳಾರಿ ಜಿಲ್ಲೆಯಲ್ಲಿ ಅಲ್ಪ ಪ್ರಮಾಣದಲ್ಲಿ ಅದು ಧಾರ್ಮಿಕ ಹಿನ್ನೆಲೆಯಲ್ಲಿ ಬೆಳವಣಿಗೆಯಾಗಿರುವುದನ್ನು ಗುರುತಿಸಲಾಗಿದೆ.

## ೪.೧. ಪಾಶ್ಚಾತ್ಯ ಕಲಾ ಪ್ರಕಾರಗಳು

ಗ್ರೀಕ್ ನಾಗರಿಕತೆಯ ಕಲಾ ಸಾಧನೆ ಹಾಗೂ ಪ್ರಯೋಜನೆಗಳು ಜನಸಾಮಾನ್ಯರಿಗೆ ಹತ್ತಿರವಾಗಿದ್ದವು. ಅವು ಕೆಲವೇ ಕೆಲವು ಪಂಡಿತರ ಸೊತ್ತಾಗಿರಲಿಲ್ಲ. ಇವರು ತರ್ಕಬದ್ಧವಾದ ಚಿಂತನೆಗಳಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟವರು. ಇದರಿಂದ ಯೂರೋಪಿನಲ್ಲಿ ಪ್ರಸಿದ್ಧ ಗ್ರೀಕ್ ದೃಶ್ಯಕಲಾ ಶೈಲಿಯು ಸಂಪೂರ್ಣ ಅನುಕರಣೀಯವಾಗಿಲ್ಲದಿದ್ದರೂ, ಅದು ದೀರ್ಘಕಾಲದವರೆಗೆ ಮುಂದುವರಿದು ಬಂದಿದೆ. ಇದು ಗ್ರೀಕ್ ವಾಸ್ತುಶಿಲ್ಪಕ್ಕೆ ಅನ್ವಯಿಸುತ್ತದೆ. ಇವರ ಮೂರ್ತಿಶಿಲ್ಪವು ಜಗತ್ತಿನಾದ್ಯಂತ ಮನ್ನಣೆ ಪಡೆದಿದೆ. ಗ್ರೀಕ್ ವಾಸ್ತುಶಿಲ್ಪ, ಮೂರ್ತಿಶಿಲ್ಪ ಹಾಗೂ ಚಿತ್ರಕಲೆ ರೋಮನ್ನರಿಗೆ ಆಗಾಧ ಸ್ಫೂರ್ತಿಯನ್ನು ಕೊಟ್ಟವು. ರೋಮನ್ನರ ಸಾಮ್ರಾಟರಲ್ಲಿ ಒಬ್ಬನಾದ ಕಾನ್‌ಸ್ಟೆಂಟೈನ್ ಎಂಬುವನು ಬೈಜೆಂಟೈನ್‌ನಲ್ಲಿ(ಈಗಿನ ಇಸ್ತಾಂಬುಲ್) ಕ್ರಿ.ಶ. ೩೩೦ಕ್ಕೆ ರಾಜಧಾನಿಯನ್ನು ಸ್ಥಾಪಿಸಿದ. ಬೈಜೆಂಟೈನ್ ರಾಜ್ಯದ ಪ್ರಭಾವವು ಬಹುತೇಕ ಭೂಮಧ್ಯದ ಹಾಗೂ ಸಮುದ್ರ ತೀರದ ಪ್ರಾಂತ್ಯಗಳಲ್ಲಿ ಹರಡಿತು. ಈ ಸಾಮ್ರಾಜ್ಯ ಸ್ಥಾಪಕನಾದ ಕಾನ್‌ಸ್ಟೆಂಟೈನ್ ಕ್ರೈಸ್ತಧರ್ಮವನ್ನು ಸ್ವೀಕರಿಸಿ, ಅದನ್ನು ರಾಷ್ಟ್ರಧರ್ಮವೆಂದು ಸಾರಿದನು.[೬] ಇವರಿಂದ ಈ ಕ್ರೈಸ್ತ ಧರ್ಮವು ಚಿತ್ರ, ಶಿಲ್ಪ, ವಾಸ್ತುಶಿಲ್ಪ ಹಾಗೂ ಸಾಹಿತ್ಯಗಳ ಮೇಲೆ ಅಪಾರ ಪ್ರೇರಣೆ ಮತ್ತು ಪ್ರಭಾವವನ್ನು ಬೀರಿತು. ಅವು ಈ ಕೆಳಗಿನಂತಿವೆ.

### ಪುನರುಜ್ಜೀವನ ಕಲೆ

ಕ್ರಿ.ಶ. ೧೫ ಮತ್ತು ೧೬ನೆಯ ಶತಮಾನದಲ್ಲಿ ಯೂರೋಪಿಯನ್ನರಲ್ಲಿ ಕಂಡುಬಂದ ಬೌದ್ಧಿಕ ಬದಲಾವಣೆಯಿಂದಾಗಿ, ಕಲಾರಂಗದಲ್ಲಿ ಮಹತ್ತರವಾದ ಬೆಳವಣಿಗೆಯಾಯಿತು. ಇದು ಶೀಘ್ರವಾಗಿ ಹರಡಲು ಅನೇಕ ರಾಜರು, ಪೋಪರು, ಸರದಾರರು, ಬ್ಯಾಂಕರ್ಸ್‌ಗಳು ಗ್ರೀಕ್ ಮತ್ತು ಲ್ಯಾಟಿನ್‌ಗಳ ಹೊಸ ಕಲಿಕೆಗೆ ಪ್ರೋತ್ಸಾಹ ನೀಡಿ, ಉದಾರ ದಾನ ಕೊಟ್ಟರು. ಪಂಡಿತರಿಗೆ, ಕವಿಗಳಿಗೆ, ಲ್ಯಾಟಿನ್ ಕ್ಲಾಸಿಕ್ಸ್ ಕಲಿಕೆಗೆ ಕಲೆ, ಸಾಹಿತ್ಯ ಮತ್ತು ವಿಜ್ಞಾನಿಗಳಿಗೆ ಆಶ್ರಯ ನೀಡಿದ್ದರಿಂದ ಇಟಲಿಯು ಪ್ರಸಿದ್ಧ ಮಾನವತಾವಾದಿಗಳಿಗೆ(ಪೆಟ್ರಾರ್ಕ್, ದಾಂಟೆ, ಬೊಕಾಶಿಯೋ) ಚಿತ್ರಕಾರರಿಗೆ (ಲಿಯೋನಾರ್ಡೋ ಡಾವಿನ್ಸಿ, ಏಂಜಲೋ, ರಾಫೆಲ್) ಕಲಾಕಾರರಿಗೆ, ವಿಜ್ಞಾನಿಗಳಿಗೆ ಜನ್ಮ ಕೊಟ್ಟಿತು. ಕೆಲವು ಪ್ರತಿಭಾವಂತ ಪ್ರಬುದ್ಧ ವ್ಯಕ್ತಿಗಳು ಹಿಂದೆಂದೂ ಕಾಣಲಾರದ ಸ್ವತಂತ್ರ ದೃಷ್ಟಿಕೋನಗಳಿಂದ ಹೊಸ ಚೇತನಗಳಿಂದ ನವನವೀನ ಆವಿಷ್ಕಾರಗಳು ಕಲಾಜಗತ್ತಿನಲ್ಲಿ ವಿಪ್ಲವಕ್ಕೆ ದಾರಿ ಮಾಡಿದವು. ವಿಶೇಷವಾಗಿ ದೃಶ್ಯಕಲೆ, ಸಾಹಿತ್ಯ, ತತ್ತ್ವಶಾಸ್ತ್ರ,

ನಾಟ್ಯಶಾಸ್ತ್ರ, ತರ್ಕಶಾಸ್ತ್ರ, ಚರಿತ್ರೆ, ನ್ಯಾಯಶಾಸ್ತ್ರ, ವೈದ್ಯಕೀಯ, ವ್ಯಾಕರಣ ಇತ್ಯಾದಿಗಳಲ್ಲಿ ಪರಿವರ್ತನಾಶೀಲವಾದ ಬೆಳವಣಿಗೆಗಳು ಜನತೆಯ ಬೌದ್ಧಿಕ ಜೀವನದಲ್ಲಿ ಮಹತ್ತರ ಬದಲಾವಣೆಗಳನ್ನು ತಂದವು. ಇದನ್ನೆಲ್ಲಾ ಗುರುತಿಸಿಯೇ ಇದನ್ನು ಪುನರುಜ್ಜೀವನ ಯುಗವೆಂದು ಕರೆದಿದ್ದಾರೆ. 'ಇಟಲಿಯ ರೋಮ್ ನಗರವು ಹಿಂದಿನ ಕಾಲದಿಂದಲೂ ಕ್ಯಾಥೋಲಿಕ್ ಪಂಥದ ಪೋಪ್ ಪರಂಪರೆಯ ನೆಲೆವೀಡಾಗಿದ್ದುದರಿಂದ, ಅದರ ಆಶ್ರಯದಲ್ಲಿ ದೃಶ್ಯ ಕಲಾವಿದರಿಗೆ ಪ್ರೇರಣೆ ಮತ್ತು ಪುರಸ್ಕಾರಗಳು ದೊರೆಯುತ್ತ ಬಂದಿದ್ದವು'.[೭] ರೋಮ್‌ನಂತಹ ಇನ್ನೊಂದು ಪ್ರಧಾನ ನಗರವೆಂದರೆ ಫ್ಲಾರೆನ್ಸ್. ಇದು ಒಂದು ನಗರ ಮಾತ್ರವಾಗಿರದೇ ಒಂದು ದೇಶವಾಗಿ ಬೆಳೆದು, ಅಲ್ಲಿನ 'ಮೆಡಿಸಿ' ಎಂಬ ಕುಟುಂಬದ ಧಾರಾಳ ಆಶ್ರಯದಲ್ಲಿ ಅನೇಕ ಪ್ರಸಿದ್ಧ ಕಲಾವಿದರನ್ನು ಪೋಷಿಸಿತು'. ಅದರಂತೆಯೇ ವೇನಿಸ್ ನಗರವು ಶ್ರೀಮಂತವಾಗಿದ್ದುದರಿಂದ ಇದೂ ಸಹ ಕಲಾವಿದರ ತವರು ಮನೆಯಾಯಿತು. ಹೀಗೆ 'ರೋಮ್, ಫ್ಲಾರೆನ್ಸ್ ಮತ್ತು ವೇನಿಸ್ ಈ ಮೂರು ನಗರಗಳು ಕಲೆಗೆ ಪ್ರೋತ್ಸಾಹ, ಪುರಸ್ಕಾರ, ಪ್ರೇರಣೆ ನೀಡುವುದರಲ್ಲಿ ಪರಸ್ಪರ ಸ್ಪರ್ಧೆ ನಡೆಸಿದ್ದವು'.[೮] ಈ ಬಗೆಯ ಸರ್ವತೋಮುಖ ಕ್ರಾಂತಿ ಆರಂಭದಲ್ಲಿ ಇಟಲಿ ದೇಶದಲ್ಲಿ ಪ್ರಚಲಿತವಾದರೂ ಅದು ಮುಂದೆ ಯೂರೋಪಿನ ಪಶ್ಚಿಮ ಮತ್ತು ಉತ್ತರದ ರಾಷ್ಟ್ರಗಳಿಗೆ ವಿಸ್ತಾರವಾಗಿ ಹರಡಿ ಫಲ ನೀಡಿತು. ಈ ಹಿನ್ನೆಲೆಯಲ್ಲಿ ಹದಿನಾಲ್ಕನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ನಡೆದ ಸಾಹಸಗಳನ್ನು ಪುನರುತ್ಥಾನ ಯುಗದ ಕೊಡುಗೆಗಳೆಂದು ನಾವು ಪರಿಗಣಿಸಬೇಕಾಗಿರುತ್ತದೆ.

ಪುನರುಜ್ಜೀವನ ಕಾಲದ ಚಿತ್ರಕಲೆಯ ಮತ್ತೊಂದು ಮಹತ್ವದ ಸಂಗತಿಯೆಂದರೆ, ಡಾವಿಂಚಿಯು ತನ್ನ 'ಮನೋಲಿಸಾ' ಎಂಬ ಚಿತ್ರದಲ್ಲಿ ಎರಡು ಭಿನ್ನ ದೃಶ್ಯಾಂತರಗಳನ್ನು ಪ್ರಯೋಗಿಸಿರುತ್ತಾನೆ. ಯಥಾದರ್ಶನ ಪರಿಕಲ್ಪನೆಯಂತೆ ನಾವು ನೋಡುವ ವಸ್ತು ಅದರ ಪರಿಮಾಣಗಳಲ್ಲಿ ಎಲ್ಲೆಲ್ಲಿ ದೂರ, ಎಲ್ಲೆಲ್ಲಿ ಸಮೀಪ, ಎಲ್ಲೆಲ್ಲಿ ದಪ್ಪ, ಎಲ್ಲೆಲ್ಲಿ ಸಣ್ಣಗೇ, ಕಾಣಬೇಕೆಂಬುದನ್ನು ಚಿತ್ರಿಸಿದ್ದಾನೆ. ಅದೇ ಚಿತ್ರದ ಇನ್ನೊಂದು ಕಡೆಗೆ ಅದರಲ್ಲಿಯ ದೂರ ಸಮೀಪಗಳ ಸಂಬಂಧವನ್ನು ಬೇರೆ ತೆರನಾಗಿ ಚಿತ್ರಿಸಿದ್ದಾನೆ. ಇದು ಡಾವಿಂಚಿಯ ಮನೋಲಿಸಾಳ ಕೃತಿಯ ವಿಶೇಷತೆ'.[೯]

ಪುನರುಜ್ಜೀವನ ಕಾಲದ ಕಲೆಯ ಇನ್ನೊಂದು ಮಹತ್ತ್ವದ ಸಂಗತಿಯೆಂದರೆ, ಮನುಷ್ಯನ ದೇಹ ಚಿತ್ರಿಸುವಾಗ ಸ್ನಾಯು ಶಾಸ್ತ್ರದ ಅಳವಡಿಕೆ ಪ್ರಾರಂಭವಾದುದು. 'ಈ ಕಲಾವಿದರು, ಮಾನವ ದೇಹಗಳನ್ನು ಚಿತ್ರಿಸುವಾಗ, ದೇಹದ ಸ್ನಾಯು ಖಂಡಗಳನ್ನು ಮೂಳೆಗಳ ರಚನೆಯನ್ನು ತಿಳಿಯಲು ಶವಗಳನ್ನು ಕೊಯ್ದು ಪರಿಶೀಲಿಸಿ ಅಧ್ಯಯನ ಮಾಡುತ್ತಿದ್ದರು'.[೧೦] ಈ ಸ್ನಾಯುಶಾಸ್ತ್ರದ ಅಳವಡಿಕೆಯು ಪುನರುಜ್ಜೀವನ ಕಲೆಗೆ ಒಂದು ಹೊಸ ಆಯಾಮವನ್ನು ತಂದುಕೊಟ್ಟಿದೆ.

ಪುನರುಜ್ಜೀವನ ಕಾಲದ ಮತ್ತೊಂದು ಮಹತ್ವದ ಸಂಗತಿಯೆಂದರೆ, ತೈಲವರ್ಣದ ಬಳಕೆ ಪ್ರಪ್ರಥಮವಾಗಿ ಜಾರಿಯಲ್ಲಿ ಬಂದದ್ದು. 'ಪ್ಲೇಮೇಲ್ ಆಚಾರ್ಯ ಎಂಬುವವನು ಪ್ರಪ್ರಥಮವಾಗಿ

ತೈಲವರ್ಣಗಳನ್ನು ಬಳಕೆಗೆ ತರುತ್ತಾನೆ'.[೧೧] ಇದಕ್ಕೂ ಮೊದಲು ಕಲಾವಿದರು ಪುಡಿ ಬಣ್ಣಗಳನ್ನು ಮೊಟ್ಟೆಯ ಲೋಳೆಯೊಂದಿಗೆ ಮಿಶ್ರಣ ಮಾಡಿ ಉಪಯೋಗಿಸುತ್ತಿದ್ದರು. ಈ ಬಣ್ಣವು ಪಾತಳಿಗೆ ಬಿದ್ದ ತಕ್ಷಣ ಒಣಗಿ ಹೋಗುತ್ತಿತ್ತು. ಇದರಿಂದ ಈ ಬಣ್ಣದ ಜೊತೆಗೆ ಇನ್ನೊಂದು ಬಣ್ಣವನ್ನು ಮಿಶ್ರಣ ಮಾಡಲು ಆಗುತ್ತಿರಲಿಲ್ಲ. ಆದರೆ, ತೈಲವರ್ಣದಲ್ಲಿ ಇಂಥ ಮಿಶ್ರಣ ಮಾಡಲು ಸಾಧ್ಯವಾಯಿತು. ಇದು ಕಲಾವಿದರಿಗೆ ದೊಡ್ಡ ವರದಾನವಾಯಿತು. 'ಮೈಕೆಲ್ ಎಂಜಿಲೋ ಕೂಡ ತನ್ನದೇ ಆದ ಸ್ವತಂತ್ರ ಶೈಲಿಯನ್ನು ಕಂಡುಕೊಳ್ಳಲು, ಡೆಮಿನಿಕೋ ಘಿರ್ಲಾಂಡಿಯೊ ಎಂಬ ಖ್ಯಾತ ಕಲಾವಿದನಲ್ಲಿ ತನಗೆ ಬೇಕಾದ ತಂತ್ರ ಹಾಗೂ ಶೈಲಿಗಳನ್ನು ಕಲಿತುಕೊಂಡನು.[೧೨] ತದನಂತರ ಮೈಕೈಲ್ ಎಂಜಿಲೋಗೆ ಅಂದಿನ ಎರಡನೆಯ ಪೋಪ್ ಜೂಲಿಯಸ್‌ನಿಂದ ಚಿತ್ರರಚನೆಗೆ ಕರೆ ಬಂತು. ಅಲ್ಲಿಯ ಚರ್ಚ್‌ನಲ್ಲಿ ಮೈಕೆಲ್ ಎಂಜಿಲೋ ಸತತ ನಾಲ್ಕು ವರ್ಷಗಳ ಕಾಲ ಭಿತ್ತಿಚಿತ್ರಗಳನ್ನು ರಚಿಸಿದನು. ರೋಮ್ ನಗರದ ವ್ಯಾಟಿಕನ್‌ನಲ್ಲಿ ರಾಫೆಲ್‌ನು ಅದ್ಭುತವಾದ ಭಿತ್ತಿಚಿತ್ರಗಳನ್ನು ರಚಿಸಿದನು. ಇವನು ರಚಿಸಿರುವ ಮೆಡೋನಾ(ರತಿ) ದೇವತೆಗಳ ಚಿತ್ರಗಳು ಇಂದಿಗೂ ವಿಶ್ವಖ್ಯಾತಿಯನ್ನು ಪಡೆದಿವೆ. ಈ ಪುನರುತ್ಥಾನ ಕಲೆಯ ಆಂದೋಲನವು ಇತರ ರಾಷ್ಟ್ರಗಳಿಗೂ ಹರಡಿ, ನಂತರ ಈ ಕಲೆಯು ತಮ್ಮ ವೈಭವ ಮತ್ತು ವೈವಿಧತೆಗಳ ಕಾರಣದಿಂದ ಯೂರೋಪು ಖಂಡವನ್ನೆಲ್ಲ ವ್ಯಾಪಿಸಿ ಪ್ರಭಾವ ಬೀರಿತು.

**ಬರೋಕ್(ಭಾವಾವಿಷ್ಟ) ಕಲೆ**

ಯೂರೋಪಿನ ಕಲಾ ಮಾಧ್ಯಮಗಳಲ್ಲಿ ಕಾಣಿಸಿಕೊಂಡ ಮತ್ತೊಂದು ಉತ್ಸಾಹೀ ಕಲಾ ಪ್ರವೃತ್ತಿಯನ್ನು 'ಬರೋಕ್' ಎಂಬುದಾಗಿ ಕರೆದಿದ್ದಾರೆ. ಸುಮಾರು ೧೬೦೦ ರಿಂದ ೧೭೫೦ರ ತನಕ ಯೂರೋಪಿಯನಲ್ಲಿ ಕಾಣಿಸಿದ ಕಲಾಪ್ರವೃತ್ತಿ ಮತ್ತು ಸೃಷ್ಟಿಗಳ ವಿಚಾರದಲ್ಲಿ ಈ ಮಾತನ್ನು ತಾತ್ಸಾರದ ದೃಷ್ಟಿಯಿಂದಲೇ ಬಳಸಿದ್ದಾರೆ. ಪ್ರಾಚೀನ ಕಾಲದ ಕಲಾಕೃತಿಗಳನ್ನು ಮೂದಲಿಸುವುದಕ್ಕಾಗಿಯೂ ಈ ಶಬ್ದವನ್ನು ಬಳಸಿದ್ದುಂಟು. 'ಬರೋಕ್ ಎಂಬ ಪದ ಮೂಲತಃ ಪೋರ್ಚುಗೀಸ್ ಭಾಷೆಯಿಂದ ಬಂದದ್ದು. 'ಆಕಾರಗೆಟ್ಟ ಮುತ್ತು', 'ವಿಕೃತ ಮುತ್ತು'[೧೩] ಎಂಬುವುದು ಈ ಪದದ ಅರ್ಥ'. ಸಾಮಾನ್ಯವಾಗಿ 'ಬರೋಕ್' ಎಂದರೆ, ವೈವಿಧ್ಯಮಯ ಸಂಗತಿಗಳನ್ನು ಒಳಗೊಂಡಿದ್ದು ಎಂಬ ಅಭಿಪ್ರಾಯವಿದೆ. ಇಂದಿನ ಕಲಾ ವಿಮರ್ಶಕರು ಮತ್ತು ಚರಿತ್ರಾಕಾರರು ಮಾತ್ರ, ಈ ಬರೋಕ್ ಪ್ರವೃತ್ತಿಯು ಸ್ವತಂತ್ರವಾದದ್ದೂ ಅಲ್ಲ; ವಿಕೃತ ರೂಪದ್ದೂ ಅಲ್ಲವೆಂದೂ, ಅದು ಪುನರುಜ್ಜೀವನ ಯುಗಕ್ಕೆ ಸಂಬಂಧಿಸಿದ್ದೆಂದೂ, ಅದರದೇ ಒಂದು ಫಲವೆಂದೂ ತಿಳಿಯುತ್ತಾರೆ. ಪುನರುಜ್ಜೀವನ ಯುಗದ ಕೃತಿಗಳನ್ನು ನಾವು 'ಮಾರ್ಗಶೈಲಿ' (Classical) ಎಂದು ಎಣಿಸುವಲ್ಲಿ, ಅದೇ ಮಾರ್ಗ ಶೈಲಿಯಿಂದ ಇದು ಸಹ ಹುಟ್ಟಿಕೊಂಡಿತು. ಮಾರ್ಗಶೈಲಿಯ ದೃಷ್ಟಿಯಲ್ಲಿ ಯಾವುದೇ ಒಂದು ಕಲಾಕೃತಿಯ ವಿವಿಧ ಅಂಗಗಳು, ಅದರ ಒಟ್ಟು ರೂಪಕ್ಕೆ ಪೋಷಣೆ ಕೊಡಬೇಕೇ ಹೊರತು, ಪ್ರತ್ಯೇಕವಾಗಿ ಉಳಿದುಕೊಂಡು ಸುಂದರ ಎನಿಸಲಾರವು.

ಇಲ್ಲಿ ಕಲಾಕೃತಿಯ ವಿವಿಧ ಅಂಗಭಾಗಗಳೊಡನೆ ಪರಸ್ಪರ ಸಂಬಂಧ ಹೇಗಿರಬೇಕು ಎಂದು ನಿರ್ಧರಿಸುವ ವಿವೇಚನ ಕೆಲಸ ಮಾಡುತ್ತದೆ. ಆದರೆ, ಬರೋಕ್ ಶೈಲಿಯಲ್ಲಿ ಆ

ಬಗೆಯ ವಿಚಾರಸರಣಿ ಕಾಣಿಸದೆ, ಕಲಾವಿದನ ಭಾವಾವೇಶ ಅವನನ್ನು ಓಲಾಡಿಸುತ್ತದೆ. ಅಂಥವರ ಕೃತಿಗಳನ್ನು ಕಾಣುವ ದೃಷ್ಟಿಯೇ ಬದಲಾಗಬೇಕಾಗುತ್ತದೆ. ಕಲಾಕೃತಿಗಳ ಆಕೃತಿ ಕಣ್ಮನಗಳನ್ನು ರಂಜಿಸಬೇಕು; ಅವುಗಳಲ್ಲಿ ಚೈತನ್ಯ ತುಂಬಿ ತುಳುಕಬೇಕು; ಅವನ್ನು ಕಂಡೊಡನೆಯೇ ಅವು ನಮ್ಮನ್ನು ಮುಗ್ಧಗೊಳಿಸಬೇಕು ಎಂಬ ಪ್ರೇರಣೆಯಿಂದ ಈ ಅವಧಿಯ ಸೃಷ್ಟಿಗಳು ಉಂಟಾದವು. ೧೭ನೇ ಶತಮಾನದ ಮಧ್ಯಂತರದಲ್ಲಿ ಬರೋಕ್ ಕಲಾಶೈಲಿಯ ಹಲವು ಶ್ರೇಷ್ಠ ಕೃತಿಗಳು ರೋಮ್‌ನಲ್ಲಿ ರಚಿಸಲ್ಪಟ್ಟವು. 'ಭಿತ್ತಿಚಿತ್ರ ಕಲಾವಿದರಾದ ಕಾರ್ಟೋನೇನ್ ಮತ್ತು ರೂಬೆನ್ಸ್, ಶಿಲ್ಪ ಕಲಾವಿದರಾದ ಟೊರ್ನಿನಿ ಇವರು ರೋಮ್ ನಗರದಲ್ಲಿ ಬರೋಕ್ ಕಲೆಯನ್ನು ಸ್ಥಿರಗೊಳಿಸಿದರು'.[೧೪] ಅದು ಕ್ರಮೇಣ ಅಂತರಾಷ್ಟ್ರೀಯ ಕಲೆಯಾಯಿತು.

ಬರೋಕ್ ಕಲೆಯು ಮೂಲತಃ ಆಸ್ತಿಕವಾದವನ್ನು ಪ್ರತಿನಿಧಿಸಿರುವ ಕಲೆಯ ಅಭಿವ್ಯಕ್ತಿಯಾಗಿದೆ. ಕ್ರೈಸ್ತ ಧರ್ಮದ ಪ್ರಚಾರಕ್ಕೆ ಈ ಕಲಾ ಪ್ರಕಾರವನ್ನು ಅಪಾರವಾಗಿ ಉಪಯೋಗಿಸಿಕೊಳ್ಳಲಾಯಿತು. ಅಂದಿನ ಕ್ರೈಸ್ತ ಧರ್ಮದ ಶ್ರೀಮಂತ ಅನುಯಾಯಿಗಳು ಈ ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಬಹುತೇಕ ಚರ್ಚ್‌ಗಳಲ್ಲಿ ಈ ಕಲೆಯ ಅಭಿವ್ಯಕ್ತಿ ಅನುಭೂತಿಗಳು ಅವ್ಯಾಹತವಾಗಿ ಸಾಗಿದ್ದವು. ಧರ್ಮದ ಅನುಯಾಯಿಗಳು ಇದನ್ನು ಪ್ರೋತ್ಸಾಹಿಸಿರುವುದಲ್ಲದೇ ರಾಜಾಶ್ರಯ ಹಾಗೂ ಧರ್ಮಪೀಠಗಳ ಅಭಯ ಮತ್ತು ವರದ ಹಸ್ತಗಳು ಈ ಕಲೆಯ ಮೇಲೆ ಕೇಂದ್ರೀಕೃತವಾಗಿದ್ದವು. ಇದರಿಂದ ಬರೋಕ್ ಕಲೆ ತನ್ನ ಶಿಖರ ಶೃಂಗಗಳನ್ನು ಶ್ರೇಣೀಕರಿಸಿತು. ಇದರಿಂದ ಬರೋಕ್ ಕಲೆ ತನ್ನ ಶಿಖರ ಶೃಂಗಗಳನ್ನು ಶ್ರೇಣೀಕರಿಸಿತು. ಬರೋಕ್ ಕಲೆಯ ಕಲಾವಿದರೆಲ್ಲ ಕ್ರೈಸ್ತ ಧರ್ಮದ ಅನುಯಾಯಿಗಳೇ ಬರೋಕ್ ಕಲೆಯು ಸಂಪೂರ್ಣ ದೃಶ್ಯಕಲೆಗಳಲ್ಲಿ (ಚಿತ್ರ, ಶಿಲ್ಪ ಮತ್ತು ವಾಸ್ತುಶಿಲ್ಪ) ತನ್ನ ಸಮೃದ್ಧತೆಯನ್ನು ತೋರಿ ಮೆರಿದಿದೆ.

ಬರೋಕ್ ಕಲೆಯ ವಾಸ್ತುಶೈಲಿಯಲ್ಲಿ ಇಗರ್ಜಿಗಳ(ಚರ್ಚ್) ಗೋಡೆಗಳ ಹೊರಗೂ, ಒಳಗೂ ಬಾಗಿಕೊಂಡಂತಿರುವುದು ವಿಶಿಷ್ಟವಾಗಿದೆ. ಬೃಹದಾಕಾರದ ಸ್ಥಂಭಗಳು ಕಟ್ಟಡದ ನೆಲಗಟ್ಟಿನಿಂದ ಆರಂಭವಾಗಿ ಮಹಡಿಗಳನ್ನು(ಅಂತಸ್ತುಗಳನ್ನು) ಹಾಯ್ದು ಛಾವಣಿಯನ್ನು ಮುಟ್ಟುತ್ತವೆ. ಇಲ್ಲಿ ರೇಖಾತ್ಮಕ ಮತ್ತು ವರ್ಣಾತ್ಮಕ ಸಮತನ, ಹಿಂಜರಿತ ಏಕತ್ವ, ನಾನಾತ್ವ ಹೀಗೆ ವೈವಿಧ್ಯ ಲಕ್ಷಣಗಳನ್ನು ನಿರೂಪಿಸುವುದರ ಜೊತೆಗೆ ಕ್ರೈಸ್ತಧರ್ಮದ ಹಿರಿಮೆ ಮತ್ತು ಹಿತಾಸಕ್ತಿಗಳನ್ನು ಅಭಿವ್ಯಕ್ತಿಸುವ ಉದ್ದೇಶವನ್ನು ಹೊಂದಿದೆ. ಈ ಕಲೆಯು ಇಂದಿಗೂ ತನ್ನ ಜನಪ್ರಿಯತೆಯ ಕುರುಹುಗಳನ್ನು ಚಾರಿತ್ರಿಕವಾಗಿ ಉಳಿಸಿಕೊಂಡಿದೆ.

### ರೋಕೋಕೊ ಅಥವಾ ವಸ್ತುವಿನ್ಯಾಸ ಕಲೆ

ಕ್ರಿ.ಶ. ೧೮ನೆಯ ಶತಮಾನದಲ್ಲಿ ಹುಟ್ಟಿ ಬೆಳೆದ ಮತ್ತೊಂದು ಕಲಾಶೈಲಿ 'ರೋಕೊಕೊ'. ಫ್ರಾನ್ಸ್, ಜರ್ಮನಿ, ಇಂಗ್ಲೆಂಡ್ ಇತ್ಯಾದಿ ದೇಶಗಳಲ್ಲಿ ಈ ಕಲೆಯು ಹೆಚ್ಚು ಪ್ರಚಾರಕ್ಕೆ ಬಂದಿತ್ತು. 'ಇದು ಅಲಂಕಾರ ಪೂರ್ಣವೂ, ಭಾವನಾ ಪ್ರಧಾನವೂ ಆದ ಒಂದು ಕಲಾ ಶೈಲಿಯಾಗಿದೆ'.[೧೫] ವಸ್ತು ಸಂಯೋಜನೆಯ ಚಿತ್ರಗಳು ಹಾಗೂ ಕಲ್ಪನೆಯ ಚಿತ್ರಗಳು ಈ

ಕಲೆಯಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡಿವೆ. ಈ ಪಂಥದ ಕಲೆಯು ಜನಸಾಮಾನ್ಯರ ಹಾಗೂ ಖಾಸಗಿ ಕಟ್ಟಡಗಳ ಒಳಾಂಗಣ ಅಲಂಕಾರಗಳನ್ನು ಕುರಿತು ನಿರಂತರ ಶ್ರಮಿಸಿದೆ. ಸ್ವಲ್ಪವು ಓರಣವಿಲ್ಲದ, ಸಾಂಪ್ರದಾಯಿಕವಾದ ಅತ್ಯಂಲಕರಣ ಪ್ರಧಾನವುಳ್ಳ ರೋಕೊಕೊ ಶೈಲಿಯು ರಾಜವೈಭವ ಸದೃಶ್ಯ ಕಲೆಯಾದ ಬರೋಕ್ ಬದಲಾವಣೆಯಾಗಿ, ಸಮಾಜದ ಶ್ರೀಮಂತ ವರ್ಗ ಮತ್ತು ಮಧ್ಯಮವರ್ಗದ ಪ್ರೋತ್ಸಾಹ ಪಡೆದು, ಮಧ್ಯಮ ವರ್ಗದವರ ಕಲೆ ಎಂದು ಕರೆಸಿಕೊಂಡಿದೆ.

'ರೋಕೊಕೊ ಕಲೆಯು ಸಂಪ್ರದಾಯ ಬದ್ಧ ಅತ್ಯಲಂಕರಣಗಳನ್ನು ಒಳಗೊಂಡ ಶೈಲಿಯಾಗಿಲ್ಲ. ಇದು ತನ್ನ ಹಿಂದಿನ ಕಲಾಪ್ರಕಾರವಾಗಿದ್ದ ಭಾವಾವಿಷ್ಟ ಕಲೆಯ ಪರಿವರ್ತಿತ ಮುಂದುವರಿಕೆಯಾಗಿದೆ'.[೧೬] ಆದರೆ, ಭಾವಾವಿಷ್ಟ ಕಲೆಯು ಅತ್ಯಧಿಕವಾದ ಸಂಪ್ರದಾಯಬದ್ಧ ಅಲಂಕರಣಗಳನ್ನು ಒಳಗೊಂಡಿತ್ತು. ಈ ವಸ್ತು ವಿನ್ಯಾಸ ಕಲೆಯು ಇಂತಹ ರಾಜವೈಭವದ ವಿನ್ಯಾಸಗಳನ್ನು ತಿರಸ್ಕರಿಸಿತು. ಅರಮನೆಗಳ, ಕೋಟೆ-ಕೊತ್ತಲಗಳ, ಧಾರ್ಮಿಕ ಸಂಸ್ಥೆಗಳ ಕಟ್ಟಡಗಳಲ್ಲಿಯ ವೈಭವದ ವಿಲಾಸ ಪ್ರಧಾನ ವಿನ್ಯಾಸಗಳನ್ನು ಈ ಪಂಥವು ತಿರಸ್ಕರಿಸಿ, ಅದು ಜನಸಾಮಾನ್ಯರ ಹಾಗೂ ಮಾಧ್ಯಮ ವರ್ಗದವರ ನಿತ್ಯ ಜೀವನದಲ್ಲಿಯ ನೈಜ ವಸ್ತುವಿಷಯಗಳಿಗೆ ಸ್ಥಾನವನ್ನು ಕಲ್ಪಿಸಿತು. ಇದರಿಂದ ಈ ಕಲೆಯು ಜನಸಾಮಾನ್ಯರ ಪ್ರೋತ್ಸಾಹ ಹಾಗೂ ಪುರಸ್ಕಾರಗಳನ್ನು ಪಡೆದು, ಜನಸಾಮಾನ್ಯರ ಕಲೆ ಎಂಬುದಾಗಿ ಗುರುತಿಸಿಕೊಂಡಿದೆ. ಸಾಮಾನ್ಯ ಮತ್ತು ಮಾಧ್ಯಮ ವರ್ಗದ ಜನರು ಬಳಸುತ್ತಿದ್ದ ವಸ್ತುಗಳು, ಅವರು ಧರಿಸುತ್ತಿದ್ದ ಬಟ್ಟೆಗಳು, ಅವರ ಕೌಟುಂಬಿಕ ಪರಿಕರಗಳು ಇತ್ಯಾದಿ ನಿತ್ಯಜೀವನದ ವಸ್ತು ಉಪಕರಣಗಳು ಕಲೆಯಲ್ಲಿ ಕಾಣಿಸಿಕೊಂಡವು. ಅವುಗಳ ಜೋಡಣೆಗಳು, ನಿರ್ಮಾಣಗಳು ಈ ಶೈಲಿಯಲ್ಲಿ ಪ್ರಮುಖ ಪಾತ್ರವಹಿಸಿದವು. ವಿನ್ಯಾಸದ ರಚನೆಯಲ್ಲಿ ಕುರ್ಚಿ, ಮೇಜು, ಸೋಫಾ, ಟಿಪಾಯಿ, ಕಪಾಟು, ಪೀಠ, ಬಾಗಿಲು, ಕಿಟಕಿ ಇತ್ಯಾದಿ ಗೃಹಬಳಕೆಯ ಅಲಂಕಾರಿಕ ವಸ್ತುಗಳ ನಿರ್ಮಾಣದಲ್ಲಿ ಈ ಕಲೆಯು ತೊಡಗಿಕೊಂಡಿತ್ತು. ಅಂದರೆ, ಇದೊಂದು ತರಹದ ಬಡಿಗೆತನ(ಮರಗೆಲಸದ ಕಲೆ) ಆಗಿರಬೇಕೆನಿಸುತ್ತದೆ. ಈ ಶೈಲಿಯ ನಿದರ್ಶನಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಕಲಾಕೃತಿಗಳೂ ದೊರೆತಿವೆ. ಅಂಥ ಕಲಾಕೃತಿಗಳಲ್ಲಿಯೂ ಜನಸಾಮಾನ್ಯರ ವಸ್ತು ಉಪಕರಣಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ.

ಈ ಕಲಾ ಪಂಥವು ವರ್ಣವಿನ್ಯಾಸಗಳಿಗೆ ವಿಶಿಷ್ಟತೆಯನ್ನು ಪಡೆದಿದೆ. ಇಲ್ಲಿಯ ವರ್ಣಗಳು ಅತ್ಯಂತ ಆಕರ್ಷಕವಾಗಿದೆ. ಸ್ವರ್ಣ ಮತ್ತು ತಾಮ್ರ ವರ್ಣಗಳು ಈ ಕಲಾ ಪ್ರಕಾರದಲ್ಲಿ ಹೆಚ್ಚು ಪ್ರಧಾನವಾಗಿ ಮೆರಿದಿವೆ. ಕಿತ್ತಳೆ, ನೇರಳೆ, ಗುಲಾಬಿ, ಹಸಿರು, ತಿಳಿಹಳದಿ, ನೀಲಿ ಬಣ್ಣಗಳ ಬಳಕೆ ಈ ಕಲಾಶೈಲಿಯಲ್ಲಿ ಹೆಚ್ಚು ಪ್ರಭುತ್ವ ಪಡೆದಿದೆ. ಚಿತ್ರಕಲಾ ಮಾಧ್ಯಮದಲ್ಲಿ ಇವರ ವರ್ಣಗಳ ಆಯ್ಕೆಯು ಹೊಸ ಆಯಾಮಗಳನ್ನು ತಂದುಕೊಟ್ಟವು. ವಸ್ತುಗಳ ಸಂಯೋಜನೆಯ ಚಿತ್ರಗಳು ಹೆಚ್ಚು ಕಾಲ್ಪನಿಕವಾದ ವಿನ್ಯಾಸಗಳ ಅಲಂಕಾರಗಳಿಂದ ಈ ಶೈಲಿಯಲ್ಲಿ ನೋಡಲು

ಸಿಗುತ್ತವೆ. 'ಟಾಯ್ ಪೋಲೋ ಎಂಬ ಕಲಾವಿದನು ಕ್ರಿ.ಶ. ೧೭೪೫ರಲ್ಲಿ 'ಅಂಟೋನಿ ಮತ್ತು ಕ್ಲಿಯೋಪಾತ್ರ' ಎಂಬ ತೈಲವರ್ಣದ ಚಿತ್ರವನ್ನು ರಚಿಸಿದ್ದಾನೆ. ಇಲ್ಲಿ ಬಿಳಿ ಬಟ್ಟೆ ಧರಿಸಿದ ಕ್ಲಿಪೋಪಾತ್ರಗಳು ಹಾಗೂ ಕೆಂಪು ಬಟ್ಟೆ ಧರಿಸಿದ ಆಂಟೋನಿ ಇವರು ಚಿತ್ರಗಳು ತುಂಬಾ ಸುಂದರವಾಗಿ ರೂಪಿತವಾಗಿವೆ. ಈ ತೈಲವರ್ಣದ ಚಿತ್ರವು ಯಡನ್‌ಬರ್ಗ್‌ದಲ್ಲಿರುವ ನ್ಯಾಷಿನಲ್ ಗ್ಯಾಲರಿಯಲ್ಲಿ ಸಂಗ್ರಹವಾಗಿದೆ'.[೧೭] ಹಾಗೆಯೇ ಗಾಯಮ್ ಬಟ್ಟೆಸಾಟಾಯ್ ಪೋಲೋ ಚಾರಡಿಯನ್ ಇತ್ಯಾದಿ ಕಲಾವಿದರು. ಈ ವಿನ್ಯಾಸ ಕಲೆಯಲ್ಲಿ ಪ್ರಸಿದ್ಧರಾದ ಕಲಾವಿದರಾಗಿದ್ದಾರೆ. ರೋಕೊಕೊ ಕಲಾ ಶೈಲಿಯಲ್ಲಿ ಇಟಲಿಯ ಫ್ರೆಂಚ್, ಜರ್ಮನಿ ವಸ್ತುವಿನ್ಯಾಸ ಕಲೆ ಎಂಬ ಬೇರೆ ಬೇರೆ ದೇಶೀಯ ಪ್ರಕಾರಗಳೂ ಇವೆ. ಒಟ್ಟಿನಲ್ಲಿ ಸುಖ ಜೀವನ ಸಾಧನವಾಗಿ ಈ ರೋಕೊಕೊ ಶೈಲಿಯು ಅಂತಾರಾಷ್ಟ್ರೀಯ ಮನ್ನಣೆಯನ್ನು ಗಳಿಸಿತ್ತು.

**ಗಾಥಿಕ್ ಕಲೆ**

ಯೂರೋಪಿನ ಮಧ್ಯಯುಗಿನ ಕಾಲದ ಕಲೆಯನ್ನು ಗಾಥಿಕ್ ಕಲೆಯೆಂದು ಕರೆದಿದೆ. ಈ ಶೈಲಿಯನ್ನು ಮೊಟ್ಟಮೊದಲ ಬಾರಿಗೆ ಬಳಸಿಕೊಂಡ ದೇಶವು ಫ್ರಾನ್ಸ್. ಇದನ್ನು ಪ್ರಪ್ರಥಮವಾಗಿ ಬಳಸಿದ ವಾಸ್ತು ಕಲಾವಿದ ಕೆಥಿಡ್ರಲ್ ಎಂಬುವನು. ತದನಂತರ ಈ ಶೈಲಿಯ ಪ್ರಭಾವ ಯೂರೋಪಿನಲ್ಲೆಲ್ಲ ಹರಡಿತು. ಗಾಥಿಕ್ ಕಲೆ ಕ್ರೈಸ್ತನಿಗೆ ಸಂಬಂಧಿಸಿದ ಹಳೆ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆಯನ್ನು ತನ್ನ ಕಲೆಯ ಮೂಲ ಆಕರವನ್ನಾಗಿಸಿಕೊಂಡಿದೆ. ಕ್ರೈಸ್ತ ಧರ್ಮದ ಧಾರ್ಮಿಕ, ದಾರ್ಶನಿಕ ಅಂಶಗಳನ್ನು ಒಳಗೊಂಡಿರುವುದರಿಂದ ಆ ಕಾಲದ ಕಲೆಯ ಎಲ್ಲಾ ಮಾಧ್ಯಮಗಳು-ವಾಸ್ತುಕಲೆ, ಶಿಲ್ಪಕಲೆ, ಚಿತ್ರಕಲೆ, ಫಲಕ ಚಿತ್ರಗಳು, ಹಸ್ತಪ್ರತಿ ಕಲೆ, ಭಿತ್ತಿಚಿತ್ರಗಳು ಕ್ರೈಸ್ತ ಜೀವನ ಮತ್ತು ಅವನ ಪರಿಸರ, ಕ್ರೈಸ್ತನ ಪವಾಡಗಳು, ಆ ಕಾಲದ ನಿತ್ಯಜನಜೀವನ ಇತ್ಯಾದಿಗಳನ್ನು ಸಾಂಕೇತಿಕ ರೂಪಕಗಳಿಂದ ಸ್ಪಷ್ಟ ಪಡಿಸುತ್ತದೆ. ಕ್ರೈಸ್ತ ದೇವಾಲಯಗಳಲ್ಲಿ ಗಾಜಿನ ಕಿಟಕಿ, ಬಾಗಿಲು ಹಾಗೂ ಕಂಬಗಳಲ್ಲಿಯ ಕ್ರಿಸ್ತನ ಜೀವನದ ಕಥೆಗಳು ಇತ್ಯಾದಿಗಳಲ್ಲಿ ಗಾಥಿಕ್ ಶೈಲಿಯ ಕಲಾಕೃತಿಗಳನ್ನು ಕಾಣಬಹುದು. ಈ ಶೈಲಿಯ ಚಿತ್ರಕಲೆಯ ವಿಷಯದಲ್ಲಿಯೂ ವಿಭಿನ್ನತೆಯುಂಟು. ಅದನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಗ್ರಂಥಸ್ಥ ಚಿತ್ರಕಲೆ, ಎರಡನೆಯದು ರಂಗಿತ ಗಾಜಿನ ಚಿತ್ರಗಳು. ಮೂರನೆಯದು ಭಿತ್ತಿಚಿತ್ರಗಳು.

**ಸಂಗೀತ ಕಲೆ**

ಭಾರತೀಯ ಸಂಗೀತಕ್ಕೂ, ಪಾಶ್ಚಾತ್ಯ ಸಂಗೀತಕ್ಕೂ ಇರುವ ಮುಖ್ಯ ವ್ಯತ್ಯಾಸ ಇದೆ. ವ್ಯಕ್ತಿಯ ಅನುಭವದ ಕಡೆ ಮತ್ತು ಅವನ ಅಂತರಂಗದ ಭಾವನೆಗಳ ಮಿಡಿತವನ್ನು ಅಭಿವ್ಯಕ್ತಗೊಳಿಸುವುದರ ಕಡೆಗೆ ಭಾರತೀಯ ಸಂಗೀತ ಹೆಚ್ಚು ಗಮನವನ್ನು ಕೊಟ್ಟಿತು. ಹೊರಗಿನ ನಾದ ಪರಿಕರಗಳು ಮತ್ತು ವಾದ್ಯಗಳು ಅದಕ್ಕೆ ಕೇವಲ ಸಹಾಯಕವಾದವುಗಳು. ನಿರ್ದಿಷ್ಟವಾದ ಆಧಾರ ಶ್ರುತಿಯನ್ನಿಟ್ಟುಕೊಂಡು ಅದರಲ್ಲಿ ನಾದವು ಲೀನವಾಗುವಂತೆ ಸ್ವರವಿನ್ಯಾಸಗಳನ್ನು

ಕೈಕೊಂಡು ಸೃಷ್ಟಿಸುವ ಸಂಗೀತ, ಮನೋಧರ್ಮದ ಅಭಿವ್ಯಕ್ತಿಗೆ ಸಹಾಯವಾಗುತ್ತದೆ. ಆದರೆ, ಪಾಶ್ಚಾತ್ಯ ಸಂಗೀತದಲ್ಲಿ ಅನೇಕ ಶ್ರುತಿಗಳ ಧ್ವನಿಸಾಮ್ಯ ಏಕಕಾಲದಲ್ಲಿ ಉಂಟಾಗುತ್ತದೆ. ಸ್ವರಮೇಳಗಳ ತತ್ವಕ್ಕನುಗುಣವಾಗಿ ಆ ಸಂಗೀತ ರೂಪಗೊಳ್ಳಬೇಕಾಗುತ್ತದೆ. ಅಲ್ಲಿ ವೈಯಕ್ತಿಕ ಭಾವನೆಗಳ ಅಭಿವ್ಯಕ್ತಿಗಿಂತ ಹಲವಾರು ಧ್ವನಿಗಳ ಸಾಮರಸ್ಯಕ್ಕೆ ಗಮನ ಹೆಚ್ಚು. ಆದುದರಿಂದಲೇ ಅದನ್ನು ಸ್ವರಮೇಳ ಸಂಗೀತ(Hormonical System) ಎಂದು ಕರೆಯಲಾಗಿದೆ. ಹಾಗೇ ಭಾರತೀಯ ಸಂಗೀತವನ್ನು ಸುಸ್ವರ ಸಂಗೀತ(Melodical System) ಎಂದು ಕರೆಯಬಹುದು. ಸಾಮೂಹಿಕವಾದ ಸಹಕಾರ ಮತ್ತು ಸ್ವರಮೇಳಗಳಿಂದ ಅದ್ಭುತ ಶಕ್ತಿಯನ್ನು ಪಾಶ್ಚಾತ್ಯ ಸಂಗೀತ ತೋರ್ಪಡಿಸಿದರೆ, ವೈಯಕ್ತಿಕವಾದ ಪ್ರತಿಭೆಯಿಂದ ಅಭಿವ್ಯಕ್ತಿಗೊಳ್ಳುವ ಸೂಕ್ಷ್ಮ ಭಾವವಿನ್ಯಾಸವನ್ನು ಭಾರತೀಯ ಸಂಗೀತ ಸೃಷ್ಟಿಸುತ್ತದೆ. ಇದನ್ನು 'ರಾಗ ಸಂಗೀತ'ವೆಂದೂ, ಪಾಶ್ಚಾತ್ಯ ಸಂಗೀತವನ್ನು "ಸಂವಾದ ಸಂಗೀತ"[೫೯]ವೆಂದೂ ಕರೆಯಲಾಗಿದೆ.

### ೪.೨. ಚಿತ್ರಕಲೆ

ಚಿತ್ರಕಲೆ ಯಾವುದೇ ಒಂದು ನಿರ್ದಿಷ್ಟ ಭೂ ಪ್ರದೇಶದ ಸಾವಿರಾರು ವರ್ಷಗಳ ಇತಿಹಾಸವನ್ನು ಅರುಹಬಲ್ಲದು. ಇದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಜೊತೆಗೆ, ಅದು ಮನಸ್ಸಿಗೆ ಮುದವನ್ನು ನೀಡುತ್ತದೆ. ಮಾನವನ ಮೊದಲ ಪಾಠ ಚಿತ್ರಕಲೆಯಿಂದಲೇ ಆರಂಭವಾಯಿತು ಎಂದು ಹೇಳಬಹುದು. ಏಕೆಂದರೆ, ಲಿಪಿ ಹುಟ್ಟುವುದಕ್ಕೆ ಮೊದಲೇ ಚಿತ್ರಕಲೆ ಬಳಕೆಯಲ್ಲಿತ್ತು ಎಂಬುದರ ಬಗ್ಗೆ ಈಗಾಗಲೇ ಸಾಕಷ್ಟು ಅಧ್ಯಯನಗಳಿಂದ ದೃಢಪಟ್ಟಿದೆ. ಲಿಪಿಗಳ ಉಗಮಕ್ಕೆ, ಬೆಳವಣಿಗೆಗೆ ಚಿತ್ರಕಲೆಯೇ ಆಧಾರ, ಭಾಷೆ, ಸಾಹಿತ್ಯ ಬೆಳೆದಂತೆ ಚಿತ್ರಕಲೆಯೂ ಉನ್ನತಿಯನ್ನು ಕಂಡಿತು. ಬಳ್ಳಾರಿ ಜಿಲ್ಲೆಯ ಚಿತ್ರಕಲೆ ಅತ್ಯಂತ ಪ್ರಾಚೀನವಾದುದು. ಹಾಗಾಗಿ ಇಲ್ಲಿನ ಸಂಸ್ಕೃತಿಯನ್ನು ಅರಿಯಲು ಇರುವ ಆಕರಗಳಲ್ಲಿ ಚಿತ್ರಕಲೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಈ ದಿಸೆಯಲ್ಲಿ ಚಿತ್ರಕಲೆಯ ಮುಖಾಂತರ ಮಾನವ ತನ್ನ ಸಂಸ್ಕೃತಿಯನ್ನು ಹೇಗೆ ವ್ಯಕ್ತಗೊಳಿಸಿದ್ದಾನೆ ಎಂಬುವುದು ಮುಖ್ಯವಾಗುತ್ತದೆ. ಸಂಸ್ಕೃತಿಯ ಒಂದು ಭಾಗವೇ ಆಗಿರುವ ಚಿತ್ರಕಲೆ ಇತರ ಆಕರಗಳಿಗಿಂತ ಬೇರೆಯಾಗಿದೆ. ಇದು ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನಾರಚಿಸಲು ಸಹಾಯಕವಾಗಿದೆ. ನಮ್ಮ ಸಾಂಸ್ಕೃತಿಕ ಜೀವನದ ಕಲಾತ್ಮಕ ಬದುಕನ್ನು ಕಂಡುಕೊಳ್ಳುವುದರತ್ತ ಗಮನಹರಿಸಬಹುದಾಗಿದೆ. ಪ್ರಾಗಿತಿಹಾಸಿಕ ಕಾಲದಿಂದ ಇತ್ತೀಚಿನ ಕಾಲಾವಧಿವರೆಗಿನ ತನ್ನ ಸೌಂದರ್ಯ ಪ್ರಜ್ಞೆಯಿಂದ ಮನಸ್ಸಿನಲ್ಲಿ ಮೂಡಿದ ಪ್ರತಿಮೆಗಳನ್ನು ಚಿತ್ರಗಳಲ್ಲಿ ಸೆರೆಹಿಡಿದ ಶ್ರೇಷ್ಠ ಕಲಾವಿದರಾಗಿದ್ದಾರೆ. ಪ್ರಕೃತಿಚಿತ್ರ, ರೇಖಾಚಿತ್ರ, ಭಾವಚಿತ್ರ, ಸಂಯೋಜನಾ ಚಿತ್ರಗಳಿಂದಲೂ ಅವರ ಸೂಕ್ಷ್ಮ ಸಂವೇದನೆ ಮತ್ತು ವೈಚಾರಿಕತೆ ಬಳ್ಳಾರಿ ಜಿಲ್ಲೆಯ ಚಿತ್ರಕಲೆಯಲ್ಲಿ ಪ್ರಕಟವಾಗಿದೆ.

ಪ್ರಾಗಿತಿಹಾಸದ ಮಾನವ ತನ್ನ ಸಂತೋಷ ದುಃಖ ಭಾವನೆಗಳನ್ನು ವ್ಯಕ್ತಪಡಿಸುವ ಸಲುವಾಗಿ ತಾನಿರುವ ಗುಹೆಗಳ, ಶಾಲಾಶ್ರಯಗಳ ಗೋಡೆಗಳ ಭಿತ್ತಿಗಳಲ್ಲಿ, ಛಾವಣಿಗಳಲ್ಲಿ

ತನ್ನ ಸುತ್ತಿನ ಪರಿಸರವನ್ನು ನೋಡಿದ ಹಾಗೆ ಗೀಚ ತೊಡಗಿದ. ಇದೇ ಕ್ರಮೇಣ ಚಿತ್ರ ರಚನೆಗೆ ಮೂಲ ಪ್ರೇರಣೆಯಾಯಿತು. ಆಹಾರಕ್ಕಾಗಿ ಬೇಟೆಯನ್ನು ಕಸಬುನ್ನಾಗಿಸಿಕೊಂಡಿದ್ದ ಪ್ರಾಗಿತಿಹಾಸ ಮಾನವನಿಗೆ ಅವನ ಅನುಭವ ಚಟುವಟಿಕೆಗಳೇ ಅವನ ಚಿತ್ರಗಳಿಗೆ ವಸ್ತುವಾದವು. ಬಳ್ಳಾರಿ ಜಿಲ್ಲೆಯ ಕಪ್ಪಗಲ್ಲದಲ್ಲಿ 'ಹ್ಯೂ ಬಟರ್‌ನಾಕ್ಸ್' ಎಂಬ ಇಂಗ್ಲಿಷ್ ವಿದ್ವಾಂಸ ಮೊಟ್ಟಮೊದಲಿಗೆ ಗವಿಚಿತ್ರಗಳನ್ನು ಪತ್ತೆ ಹಚ್ಚಿದನು. ನಂತರ ಕಾಲದಲ್ಲಿ ಲಿಯೋ ನಾರ್ಡೋಮನ್, ಎಫ್.ಆರ್. ಅಲ್‌ಚಿನ್ ಕಂಡು ಹಿಡಿದರು. ಇತ್ತೀಚಿನ ಎರಡು ದಶಕಗಳಲ್ಲಿ ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆ, ಬಳ್ಳಾರಿ ತಾಲೂಕಿನ ಸಂಗನಕಲ್ಲು, ಬೆಳಗಲ್ಲು ಮತ್ತು ಕುರುಗೋಡು, ಅಪ್ಪಯ್ಯನ ಹಳ್ಳಿಗಳಲ್ಲಿ ಇಂತಹ ಚಿತ್ರಗಳನ್ನು ಡಾ. ಎಂ.ಎಸ್. ನಾಗರಾಜರಾವ್, ಡಾ. ರು.ಮ. ಷಡಕ್ಷರಯ್ಯ ಮೊದಲಾದವರು ಶೋಧಿಸಿದರು. ಹಳಕುಂಡಿ, ಕುರುಗೋಡು, ಹಂಪಿ ಪರಿಸರದಲ್ಲಿನ ಕೆಲವು ಗುಹಾಚಿತ್ರಗಳನ್ನು ಡಾ. ಅ. ಸುಂದರ ಅವರು ಗುರುತಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿರುವ ಗೀರು ಚಿತ್ರಗಳನ್ನು ಪ್ರೊ. ಲಕ್ಷ್ಮಣ್ ತೆಲಗಾವಿ ಗುರುತಿಸಿದ್ದಾರೆ. ಇದರ ಜೊತೆಗೆ ಸಂಶೋಧಕರು ಜಿಲ್ಲೆಯಲ್ಲಿ ಹೊಸ ಹೊಸ ನೆಲೆಗಳನ್ನು ಕಂಡು ಹಿಡಿದು ಅಲ್ಲಿ ದೊರೆತ ಪ್ರಾಗಿತಿಹಾಸದ ವರ್ಣಚಿತ್ರಗಳು, ಗವಿಚಿತ್ರಗಳು, ಕಲ್ಲಾಸರೆಯ ಚಿತ್ರಗಳು ಅಸಂಖ್ಯಾತವಾಗಿ ಗುರುತಿಸಲಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಅರಸಮನೆತನಗಳ ಕಾಲದಲ್ಲಿ ಕಲಾವಿದರಿಗೆ ಆಶ್ರಯ ನೀಡಿ; ಅವರಿಗೆ ಪ್ರೋತ್ಸಾಹ ನೀಡಿದ್ದರು. ಇವರ ಕಾಲಾವಧಿಯಲ್ಲಿ ಚಿತ್ರಕಲೆಯು ಹೆಚ್ಚು ಬೆಳವಣಿಗೆಯಾಗಿರುವುದು ಅವರ ಕಾಲದ ದೇವಾಲಯಗಳ ಭಿತ್ತಿಚಿತ್ರಗಳಲ್ಲಿ ಚಿತ್ರಿಸಿರುವ ಚಿತ್ರಗಳಿಂದ ದೃಢಪಟ್ಟಿದೆ. ಉದಾ:- ವಿಜಯನಗರ ಕಾಲಾವಧಿಯಲ್ಲಿ ಹಂಪಿಯ ವಿರೂಪಾಕ್ಷ ದೇವಾಲಯದ ಮುಖಮಂಟಪದಲ್ಲಿರುವ ಭಿತ್ತಿಚಿತ್ರಗಳನ್ನು ಹಲವು ವಿದ್ವಾಂಸರು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಈ ಚಿತ್ರಗಳು ರಾಮಾಯಣ ಮತ್ತು ಮಹಾಭಾರತದ ಸನ್ನಿವೇಶಗಳ ಸಂದರ್ಭವನ್ನು ಸೂಚಿಸುತ್ತವೆ.

ಭಾರತವು ವಸಾಹತುಶಾಹಿ ಆಳ್ವಿಕೆಗೆ ಒಳಗಾದ ಮೇಲೆ ಪಾಶ್ಚಿಮಾತ್ಯ ಚಿತ್ರಕಲೆಯು ಭಾರತೀಯ ಸಾಂಪ್ರದಾಯಿಕ ಚಿತ್ರಕಲೆಯ ಮೇಲೆ ಪ್ರಭಾವ ಬೀರಿತು. ದಖ್ಖನ್ನಲ್ಲಿ ವಿಜಯನಗರ ಸಾಮ್ರಾಜ್ಯ ಹಾಗೂ ದಖ್ಖನ್ ಸುಲ್ತಾನ ರಾಜ್ಯಗಳು ಪತನ ಹೊಂದಿದ ನಂತರ ೧೮ನೆಯ ಶತಮಾನದಲ್ಲಿ ಕೇಂದ್ರೀಕೃತ ಆಡಳಿತ ಕೊನೆಗೊಂಡು ಸ್ಥಳೀಯ ಸಾಮಂತರು ತಲೆಯೆತ್ತಿದರು. ಈ ಸಾಮ್ರಾಜ್ಯಗಳಲ್ಲಿ ಸ್ಥಾಪನೆಯಾಗಿದ್ದ ಚಿತ್ರಕಲಾ ಕೇಂದ್ರಗಳು ರಾಜ್ಯಾಶ್ರಯವಿಲ್ಲದೆ ಮುಚ್ಚತೊಡಗಿದವು. ಈ ಕೇಂದ್ರಗಳಲ್ಲಿದ್ದ ಕಲಾವಿದರು ಚಿಕ್ಕಪುಟ್ಟ ಅರಸರ ಅಥವಾ ಶ್ರೀಮಂತರ ಆಶ್ರಯ ಪಡೆದರೆ ಇನ್ನೂ ಕೆಲವರು ಆಗ ತಾನೆ ಅಧಿಕಾರಕ್ಕೆ ಬರತೊಡಗಿದ್ದ ಐರೋಪ್ಯ ಆಡಳಿತ ಅಧಿಕಾರಿಗಳನ್ನು ಆಶ್ರಯಿಸತೊಡಗಿದ್ದರು. ಬ್ರಿಟಿಷ್ ಅಧಿಕಾರಿಗಳು ಈ ಕಲಾವಿದರಿಂದ ತಮ್ಮ ವೈಯಕ್ತಿಕ ಚಿತ್ರಗಳನ್ನು ಹಾಗೂ ತಮ್ಮ ಮೆಚ್ಚಿನ ಪ್ರಾಣಿ, ಪಕ್ಷಿ, ನಾಡಿನ ಐತಿಹಾಸಿಕ,

ಸ್ಮಾರಕ ಇತ್ಯಾದಿಗಳನ್ನು ರಚಿಸಿಕೊಳ್ಳುತ್ತಿದ್ದರು. ಉತ್ತರ ಭಾಗದಲ್ಲಿ, ಬೀದರ್, ವಿಜಯಪುರ, ಗೋಲ್ಕೊಂಡ, ಅಹಮ್ಮದ್‌ನಗರ ಕಲಾಕೇಂದ್ರಗಳಲ್ಲಿ ಆಶ್ರಯವಿಲ್ಲದಂತಾಗಿ ಆಗ ತಾನೇ ಈಸ್ಟ್ ಇಂಡಿಯಾ ಕಂಪನಿ ಸರಕಾರದ ಆಡಳಿತ ಕೇಂದ್ರಗಳಾಗಿದ್ದ ಗೋವಾ, ಮುಂಬೈ, ವಿಶಾಖಪಟ್ಟಣ, ಮದ್ರಾಸ್, ಹೈದರಾಬಾದ್ ಮುಂತಾದ ಸ್ಥಳಗಳು ಕಂಪನಿ ಚಿತ್ರಕಲೆಯ ಕೇಂದ್ರಗಳಾಗಿ ಬೆಳೆದವು. ಬದಲಾದ ರಾಜಕೀಯ ಹಾಗೂ ಅಭಿರುಚಿಗಳಿಗೆ ದಖ್ಖನಿ ಚಿತ್ರಕಲಾವಿದರು ತಮ್ಮ ಶೈಲಿ ಬದಲಿಸಿಕೊಂಡರು. ದಖ್ಖನಿ ಸಾಂಪ್ರದಾಯಿಕ ಚಿಕಣಿ ಚಿತ್ರಕಲೆಯ ಈ ಕಲಾವಿದರು ಬ್ರಿಟಿಷ್ ಸರಕಾರದ ಭೂ-ಸರ್ವೆ, ಐತಿಹಾಸಿಕ ಸ್ಮಾರಕ ಸರ್ವೇ ಇತ್ಯಾದಿ ಇಲಾಖೆಗಳಲ್ಲಿ ನಕ್ಷೆ ರಚನಾಕಾರರಾಗಿಯೂ ಸೇವೆಗೆ ಸೇರಿದರು. "ಕಲಾವಿದರು ಐರೋಪ್ಯ ಕಲೆಯ ಹೊಸ ತಾಂತ್ರಿಕತೆಗಳನ್ನು ಮತ್ತು ವಿವಿಧ ಬಗೆಯ ವರ್ಣಗಳನ್ನು ಚಿತ್ರ ಸಾಮಗ್ರಿಗಳಾಗಿ ಬಳಸಿ ಹೊಸ ಪ್ರಯೋಗಗಳನ್ನು ಮಾಡಿದರು. ವಸಾಹತುಶಾಹಿ ಅಧಿಕಾರಿಗಳ ಅಭಿರುಚಿ ಹಾಗೂ ಐರೋಪ್ಯ ಶೈಲಿಗಳಿಂದ ರಚಿತವಾದ ಚಿತ್ರಕಲೆಯನ್ನು 'ಐರೋಪ್ಯ ಅಥವಾ ಕಂಪನಿ ಚಿತ್ರಕಲೆ'[೧೯] ಎಂದು ಕರೆಯಲಾಗುತ್ತದೆ.

ದಖ್ಖನ್ನಲ್ಲಿ ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯು ಅಧಿಕಾರಕ್ಕೆ ಬಂದ ನಂತರ ಐರೋಪ್ಯ ನಾಡಿನ ಅನೇಕ ಕಲಾವಿದರು ಈ ನೂತನ ಬ್ರಿಟಿಷರು ದಖ್ಖನ್ ಪ್ರದೇಶದಲ್ಲಿ ತಮ್ಮ ಕಲೆಗೆ ಆಶ್ರಯ ದೊರೆಯಬಹುದೆಂದು ದಖ್ಖನಿಗೆ ವಲಸೆ ಬರತೊಡಗಿದರು. ಇವರಿಗೆ ಮುಂಬಯಿ, ಕಲ್ಕತ್ತ, ಮದರಾಸು, ಮೈಸೂರು ಮುಂತಾದ ಕಡೆ ಕಲಾಶಾಲೆಗಳು ಸ್ಥಾಪಿತಗೊಂಡ ಕಾರಣದಿಂದ ಅವರಿಗೆ ಆಶ್ರಯ ನೀಡಿದವು. ಇಲ್ಲಿಗೆ ವಲಸೆ ಬಂದ ಐರೋಪ್ಯ ಕಲಾವಿದರಿಂದ ರಚನೆಯಾದ ಕಲಾಕೃತಿಗಳು ಐರೋಪ್ಯ ಶೈಲಿಯಲ್ಲಿ ಕಂಡುಬಂದವು. ಈ ಚಿತ್ರಗಳಲ್ಲಿ ತ್ರಿಕಾರಾತ್ಮಕ(೨-ಡಿ) ತಂತ್ರಗಳಿಂದ ಆಕೃತಿಗಳನ್ನು ರಚಿಸಿ ಅವುಗಳ ಮೇಲೆ ನೆರಳು-ಬೆಳಕು, ತೋರಿಸುವ ತಂತ್ರಗಾರಿಕೆ ಕಂಡುಬರುತ್ತದೆ. ಈ ಆಕೃತಿಗಳು ಐರೋಪ್ಯ ಶೈಲಿಯ ಲಕ್ಷಣಗಳಿಂದ ಕೂಡಿವೆ. ಇದು ಐರೋಪ್ಯರ ಚಿತ್ರಕಲೆಯ ಉಗಮಕ್ಕೆ ನಾಂದಿಯಾಯಿತು.

'೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಪಾಶ್ಚಿಮಾತ್ಯ ಕಲಾಶೈಲಿಯಲ್ಲಿ ಸ್ಥಳೀಯ ದಖ್ಖನಿ ಕಲಾವಿದರಿಗೆ ತರಬೇತಿ ನೀಡಲು ಮದ್ರಾಸ್(೧೮೫೦), ಕಲ್ಕತ್ತಾ(೧೮೯೬), ಮುಂಬೈ (೧೮೫೭) ಸರಕಾರಗಳು ಚಿತ್ರಕಲಾ ತರಬೇತಿ ಶಾಲೆಗಳನ್ನು ಸ್ಥಾಪನೆ ಮಾಡಿ ಪಾಶ್ಚಿಮಾತ್ಯ ಕಲಾಶೈಲಿಗಳು ಬೆಳೆಯಲು ಪ್ರೋತ್ಸಾಹ ಕೊಟ್ಟವು'.[೨೦] ಈ ತರಬೇತಿ ಶಾಲೆಗಳು ನಾಡಿನಲ್ಲಿ ಪಾಶ್ಚಿಮಾತ್ಯ ಕಲೆಗಳು ಬೆಳೆಯುವುದಕ್ಕೆ ನಾಂದಿ ಹಾಡಿದವು. ತರಬೇತಿ ಪಡೆದ ಕಲಾವಿದರು ಹೊಸ ತರಹದ ಕಲಾ ಚಿಂತನಗಳೊಂದಿಗೆ 'ಆಧುನಿಕ ಕಲೆ'ಯ ಉಗಮಕ್ಕೆ ಕಾರಣಕರ್ತರಾದರು. ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ ಚಿತ್ರಕಲಾರಂಗದಲ್ಲಿ ಬೆಳೆದ ಅನೇಕ ಸಂಪ್ರದಾಯಗಳನ್ನು ಅನುಸರಿಸುವ ಅವೇ ತಂತ್ರಗಳನ್ನು ಉಪಯೋಗಿಸಿ, ದೇಶೀ ವಸ್ತುಗಳನ್ನು ಪ್ರತಿಪಾದಿಸುವ ಪಂಥಗಳು ಕರ್ನಾಟಕದಲ್ಲಿ ಕಾಣಿಸಿಕೊಂಡಿವೆ. ಕರ್ನಾಟಕದ

ಚಿತ್ರಕಲಾ ಇತಿಹಾಸದಲ್ಲಿ ಈ ಆಧುನಿಕ ಯುಗ ಸಂಕೀರ್ಣತೆಯ ಕಾಲ. ಪಾಶ್ಚಿಮಾತ್ಯರಲ್ಲಿ ಬೆಳೆದ ವೈವಿಧ್ಯಮಯವಾದ ಚಿತ್ರರಚನಾ ತಂತ್ರಗಳು ತತ್ಸಂಬಂಧದ ಅನೇಕ ರೀತಿಯ ಹಿನ್ನೆಲೆಯ ವಸ್ತುಗಳು ಮತ್ತು ಕೃತಕ ವರ್ಣಗಳು ಇವುಗಳನ್ನು ಬಳಸುವುದು ಈ ಕಾಲದಲ್ಲಿ ಕಂಡುಬಂದ ಮುಖ್ಯ ಬದಲಾವಣೆ. ಪ್ರಾಚೀನ ಚಿತ್ರಕಲೆ ಎಷ್ಟರಮಟ್ಟಿಗೆ ಧಾರ್ಮಿಕ ವಸ್ತುಗಳನ್ನು ಅಭಿವ್ಯಕ್ತಗೊಳಿಸುತ್ತಿದ್ದರೆ ಈ ಕಾಲದಲ್ಲಿ ಅನೇಕ ಲೌಕಿಕ ಸನ್ನಿವೇಶಗಳನ್ನು ಮತ್ತು ಭಾವನೆಗಳನ್ನು ರೂಪಿಸುವುದು ಮತ್ತೊಂದು ಪ್ರಮುಖ ವ್ಯತ್ಯಾಸ.

೧೯ನೆಯ ಶತಮಾನದ ಆದಿಯಿಂದ ಸುಮಾರು ನಾಲ್ಕು ದಶಕಗಳ ಕಾಲ ಚಿತ್ರಕಲೆಯ ಪ್ರಗತಿ ನಿಂತು ಹೋಯಿತು. ಏಕೆಂದರೆ, ವಿದೇಶಗಳಿಂದ ಬಂದ ಚಿತ್ರಕಾರರು ನಮ್ಮ ಪ್ರಾಚೀನ ಚಿತ್ರಕಲೆಯ ಬಗ್ಗೆ, ಆಸಕ್ತಿಯಿಂದ ಅವುಗಳನ್ನು ನಕಲು ಮಾಡುವುದರಲ್ಲಿ ನಿರತರಾಗಿದ್ದರು. "೧೮೪೪ರಲ್ಲಿ ಮೇಜರ್‌ಗಿಲ್, ೧೮೭೫ರಲ್ಲಿ ಗ್ರಿಫಿಕ್ಸ್, ೧೯೦೬ರಲ್ಲಿ ಲೇಡಿಹೆರಿಂಗ್ ಹ್ಯಾಮ್ ಅವರು ಚಿತ್ರಕಾರರ ತಂಡದೊಂದಿಗೆ ಅಜಂತಾಗೆ ಹೋಗಿ ಕೃತಿಗಳನ್ನು ನಕಲು ತೆಗೆದಾಗ ಮತ್ತೆ ಕರ್ನಾಟಕ ಚಿತ್ರಕಲೆ ತಲೆ ಎತ್ತುವಂತಾಯಿತು".[೨೧] ನಿವೇದಿತ ಭಾರತೀಯ ಚಿತ್ರಕಲೆಗೆ ಹೊಸ ದೃಷ್ಟಿ ಕೊಟ್ಟವರಲ್ಲಿ ಪ್ರಥಮರು. ೧೯ನೆಯ ಶತಮಾನದ ಕೊನೆಯ ವೇಳೆಗೆ ಸುಪ್ರಸಿದ್ಧ ಭಾರತೀಯ ಕಲಾವಿದನಾದ ರಾಜಾ ರವಿವರ್ಮನು ಪಾಶ್ಚಿಮಾತ್ಯ ಶೈಲಿಯಲ್ಲಿ ಭಾರತೀಯ ಕಲೆಯನ್ನು ಪುನಃ ಪ್ರತಿಷ್ಠಾಪಿಸಲು ಪ್ರಯತ್ನಿಸಿದನು. "ರವಿವರ್ಮನು ಸುಪ್ರಸಿದ್ಧ ಯೂರೋಪಿಯನ್ ಕಲಾವಿದನಾದ ಥಿಯೋಡೂರ್ ಜೆನ್ಸನ್ ಎಂಬವನಿಂದ ತೈಲವರ್ಣದ ಅಭ್ಯಾಸ ಮಾಡಿದನು".[೨೨] ಪರಂಪರಾನುಗತ ಪೌರಾಣಿಕ ವಿಷಯಗಳು ಮತ್ತು ಭಾರತೀಯ ಜನಜೀವನಗಳನ್ನು ತೈಲವರ್ಣಗಳಲ್ಲಿ ಚಿತ್ರಿಸುವುದೇ ರವಿವರ್ಮನ ಮುಖ್ಯ ಧ್ಯೇಯವಾಗಿತ್ತು. ಈ ದಿಶೆಯಲ್ಲಿ ರವಿವರ್ಮನು ಅದ್ಭುತವಾದ ಸಾಧನೆಯನ್ನು ಮಾಡಿದನಾದರೂ "ಭಾರತೀಯತೆಗೆ ಯೂರೋಪೀಯತೆಯ ರೂಪ ಕೊಟ್ಟಿದ್ದರಿಂದ ಈ ಕಲಾಕೃತಿಗಳು ಗೌರವಾರ್ಹವಾದುವಲ್ಲ"[೨೩] ಎಂಬ ವಿಮರ್ಶಕರ ಟೀಕೆಗೆ ಗುರಿಯಾದವಷ್ಟೇ ಅಲ್ಲ, ಭಾರತೀಯ ಯಾವ ಕಲಾವಿದನಿಗೂ ರವಿವರ್ಮನ ಶೈಲಿಯನ್ನು ಅನುಸರಿಸಲು ಸ್ಫೂರ್ತಿಯನ್ನು ಕೊಡಲಿಲ್ಲ.

೧೯ನೆಯ ಶತಮಾನದ ಕೊನೆಯ ಎರಡು ದಶಕಗಳ ಅವಧಿಯಲ್ಲಿ ಮದ್ರಾಸಿನ ಕಲಾ ಶಾಲೆಯಲ್ಲಿ ಶಿಕ್ಷಕನಾಗಿದ್ದ ಈ.ಬಿ. ಹ್ಯಾವೆಲ್‌ನು "ಪಾಶ್ಚಿಮಾತ್ಯ ಕಲಾಶೈಲಿಗೆ ಭಾರತದಲ್ಲಿ ಸ್ಥಾನವಿಲ್ಲ; ಭಾರತೀಯ ಪಾರಂಪರಿಕ ಕಲಾ ಶೈಲಿಯನ್ನೇ ಪುನರುಜ್ಜೀವನಗೊಳಿಸಬೇಕು"[೨೪] ಎಂಬ ನಿರ್ಣಯಕ್ಕೆ ಬಂದನು. ಹ್ಯಾವೆಲ್ ಮದ್ರಾಸ್‌ನ್ನು ಬಿಟ್ಟು ಕಲ್ಕತ್‌ಗೆ ಬಂದು ತನ್ನ ಅನಸಿಕೆಯಂತೆ ಪ್ರಯೋಗಗಳಲ್ಲಿ ತೊಡಗಿದನು. ಹ್ಯಾವೆಲ್‌ನ ಪ್ರಾಮಾಣಿಕ ಪ್ರಯತ್ನವು ಭಾರತೀಯ ಕಲಾವಿದರ ಕಣ್ಣು ತೆರಸಿತು; ತಮ್ಮ ಪ್ರಾಚೀನ ಭವ್ಯ ಪರಂಪರೆಯತ್ತ ಹೊರಳುವಂತೆ ಮಾಡಿತು. ನಂತರ ನಂದಲಾಲ ಬೋಸ್, ಅವನೀಂದ್ರನಾಥ ಠಾಗೋರ, ಜಾಮಿನಿರಾಯ್, ಅನಿತಕುಮಾರ ಹಾಲ್ದಾರ, ರಾಯಚೌದರಿ, ಪ್ರಮೋದ್ ಮುಖರ್ಜಿ, ಫಣಿಕ್ಕರ, ನಂತರದ ಸಮಕಾಲೀನರಲ್ಲಿ, ಎಂ.ಎಫ್.

ಹುಸೇನ, ಕೆ.ಕೆ. ಹೆಬ್ಬಾರ್, ಎನ್.ಎಸ್. ಬೇಂದ್ರೆ, ಶಂಕರ ಪಳನಿಕರ, ಅಲಮೇಲಕರ, ಕೆ.ಜಿ. ಸುಬ್ರಮಣ್ಯಂ, ಪಿ.ಟಿ. ರೆಡ್ಡಿ, ತೈಯಬ ಮೆಹ್ತಾ, ಲಕ್ಷಣಗೌಡ, ಆದಿಮೂಲಮ್, ಸುಲ್ತಾನಲಿ, ಸನತಕರ, ಗಾಯತೊಂಡೆ, ಸುನಿಲ್‌ದಾಸ್, ಬಿಕಾಸ್ ಭಟ್ಟಾಚಾರ್ಯ, ಭೂಟಾ ಮತ್ತು ಇತರರು ಹೆಸರಾಂತರಾದವರು. ಈ ಎಲ್ಲಾ ಕಲಾವಿದರಲ್ಲಿ ಹೊಸ ವಿಚಾರಗಳ ಧಾರೆ, ಆರೋಗ್ಯಕರ ರೀತಿಯ ಬದಲಾವಣೆ ಹೊಸ ಹೊಸ ಆವಿಷ್ಕಾರಗಳನ್ನು ಹೊಸ ರೀತಿ, ಶೈಲಿ, ಪ್ರಕಾರಗಳನ್ನು ಕಾಣಬಹುದು.

ಚಿತ್ರಕಲೆಯಲ್ಲಿ ಕಾಲಾನುಕ್ರಮದಲ್ಲಿ ಸಾಂಪ್ರದಾಯಿಕತೆ, ಭಾವಪ್ರಧಾನತೆ, ಭಾವಚಿತ್ರ ರಚನೆ, ಹುಡುಗು ಕಲೆ, ರಾಗಮಾಲಾ ಚಿತ್ರಗಳು ಪೌರಾಣಿಕ ಕಥಾವಸ್ತು ರೇಖಿ ಹಾಗೂ ತೈಲವರ್ಣಗಳು, ನಿಸರ್ಗದೃಶ್ಯ, ಜಲವರ್ಣ, ರೇಖಾಚಿತ್ರಗಳು, ವ್ಯಂಗ್ಯ ಚಿತ್ರಗಳು, ನವ್ಯ ಇತ್ಯಾದಿ ಅನೇಕ ಪ್ರಕಾರಗಳು ಹುಟ್ಟಿಕೊಂಡು ನೂರಾರು ಚಿತ್ರಕಲಾವಿದರು ಬೆಳಕಿಗೆ ಬಂದರು. ಇವರೊಡನೆ ಕಲಾ ವಿಮರ್ಶಕರೂ ರಚನಾತ್ಮಕ ರೀತಿಯಲ್ಲಿ ಪ್ರೋತ್ಸಾಹಿಸಿದರು. ನಂತರ ನೂತನ ಕಲೆ ವ್ಯಕ್ತಿ ನಿಷ್ಠವಾಗಿ ಕ್ಯೂಬಿಸಂ, ಡಾಡಾಯಿಸಂ, ಪೂಚರಿಸಂ, ಇಂಪ್ರೆಷನಿಸಂ, ಕೋಲಾಜ್ ಇತ್ಯಾದಿ ಪಂಥಗಳೂ ಹುಟ್ಟಿಕೊಂಡು ಲೋಕ ಪ್ರಸಿದ್ಧವಾಯಿತು. ಇದು ಕರ್ನಾಟಕ ಚರಿತ್ರಕಲೆಯ ಮೇಲೆ ಪ್ರಭಾವ ಬೀರಿತು.

ಯೂರೋಪಿಯನ್ ಕಲೆಯನ್ನು ಭಾರತದಲ್ಲಿ ಜನಪ್ರಿಯಗೊಳಿಸಲು ಬ್ರಿಟಿಷರು ತಮ್ಮ ಸೈನ್ಯಾಧಿಕಾರಿಗಳು ಹಾಗೂ ಕಲಾವಿದರೂ ಆಗಿದ್ದ ಡಬ್ಲ್ಯೂ.ಎಚ್. ಡೇನಿಯಲ್ ಸಹೋದರರೊಂದಿಗೆ ವಿಲಿಯಂ ಹಾರ್ಜಸ್, ಗ್ರಿಂಡ್ಲೆ ಮುಂತಾದ ಐರೋಪ್ಯ ಕಲಾವಿದರನ್ನು ಭಾರತಕ್ಕೆ ಕರೆತಂದರು. ಈ ಕಲಾವಿದರುಗಳು ಸ್ಥಳೀಯ ರಾಜ-ಮಹಾರಾಜರುಗಳ, ಬ್ರಿಟಿಷ್ ಅಧಿಕಾರಿಗಳ ಭಾವಚಿತ್ರಗಳನ್ನು ಚಿತ್ರಿಸುವುದರೊಂದಿಗೆ ಭಾರತದಲ್ಲಿನ ಐತಿಹಾಸಿಕ ಸ್ಮಾರಕಗಳನ್ನು, ಪ್ರಕೃತಿ-ಭೂದೃಶ್ಯಗಳನ್ನು, ಭಾರತೀಯರ ಉಡುಗೆ-ತೊಡುಗೆಗಳನ್ನು, ರೇಖಾಚಿತ್ರ ಹಾಗೂ ತೈಲವರ್ಣ ಚಿತ್ರಗಳಲ್ಲಿ ಚಿತ್ರಿಸಿರುವರು. ಈ ಚಿತ್ರಗಳನ್ನು ಯೂರೋಪ್‌ನಲ್ಲಿ ಬಹು ಜನಪ್ರಿಯವಾಗಿದ್ದ ವಿಕ್ಟೋರಿಯನ್ ಇಲ್ಲವೆ ರೊಮ್ಯಾಂಟಿಕ್ ಶೈಲಿಯಲ್ಲಿ(ವಾಸ್ತವಿಕ ಚಿತ್ರಣಕ್ಕೆ ಹತ್ತಿರವಾದ) ರಚಿಸಿ ಭಾರತೀಯರಲ್ಲಿ ವಿಸ್ಮಯವನ್ನುಂಟು ಮಾಡಿದರು. ಅದುವರೆಗೂ ಈ ರೀತಿಯ ಚಿತ್ರಗಳನ್ನು ಕಂಡರಿಯದ ಭಾರತೀಯರು ಈ ವಿನೂತನ ಚಿತ್ರಣ ಶೈಲಿಗೆ ಮಾರು ಹೋದರು. ಇದರಿಂದಾಗಿ ಪಾಶ್ಚಾತ್ಯ ಕಲೆ, ಸಂಸ್ಕೃತಿಯು ಭಾರತದುದ್ದಕ್ಕೂ ಹರಡಿತು. ಈ ಎಲ್ಲಾ ಲಕ್ಷಣಗಳೊಂದಿಗೆ ಐರೋಪ್ಯ ಚಿತ್ರಕಲೆಯು ಭಾರತದಲ್ಲಿ ಬೆಳವಣಿಗೆಯನ್ನು ಕಂಡುಕೊಂಡಿತು. ಬಟ್ಟೆ ಮಾಧ್ಯಮದಲ್ಲಿ (ಕ್ಯಾನ್ವಾಸ್ ಮೇಲೆ) ತೈಲವರ್ಣಗಳನ್ನು ಬಳಸಿ, ಕೃತಿ ರಚಿಸತೊಡಗಿದರು. ಕುಂಚಗಳ ವಿನೂತನ ಬಳಕೆಯಿಂದ, ಹೊಸ ಹೊಸ ಕಲಾ ಪರಿಕರಗಳಿಂದ, ರೂಪದರ್ಶಿಗಳನ್ನು, ವಸ್ತುಗಳನ್ನು, ಪ್ರಕೃತಿಯನ್ನು ಎದುರಿಗಿಟ್ಟು ಕೃತಿ ರಚನೆಯಲ್ಲಿ ತೊಡಗಿದ್ದರಿಂದ ಚಿತ್ರಕಲೆಯ ಚಿತ್ರಣವೇ ಸಂಪೂರ್ಣ ಬದಲಾಯಿತು.

ಹಂಪಿಯು ವಿದೇಶಿ ಪ್ರವಾಸಿಗರನ್ನು ಆಕರ್ಷಿಸಿತ್ತು. ಡೋಮಿಂಗೋ ಪಾಯೆಸ್, ಅಬ್ದುಲ್ ರಜಾಕ್ ಮುಂತಾದವರು ವಿಜಯನಗರ ವೈಭವದೊಂದಿಗೆ ಚಿತ್ರಕಲೆಯ ಬಗ್ಗೆ ಸಾಕಷ್ಟು ಸಂಗತಿಗಳನ್ನು ಹೇಳಿದ್ದಾರೆ. ವಿಜಯನಗರದ ಇನ್ನೊಂದು ಶಾಖೆಯಾಗಿ ಚಂದ್ರಗಿರಿಯಲ್ಲಿ ಎರಡನೇ ವೆಂಕಟನು, ಕ್ರೈಸ್ತನು ಚಿತ್ರಕಲೆ ಹಾಗೂ ಕಲಾವಿದರಿಗೆ ಅಕ್ಬರನಷ್ಟೇ ಆಸಕ್ತಿ ತೋರಿಸಿ ಪ್ರೋತ್ಸಾಹಿಸಿದ. "ಪೋರ್ಚುಗಲ್‌ನ ಫಾದರ್ ಡಿ.ಸ. ಹಾಗೂ ಕಾಸಿಯೊ ಎಂಬುವರು ವೆಂಕಟನ ಆಸ್ಥಾನಕ್ಕೆ ಬಂದು ಕೆಲವು ಕ್ರೈಸ್ತ ಮತೀಯರ ಭಾವಚಿತ್ರಗಳನ್ನು ಕೊಟ್ಟಾಗ ಆತ ಅವುಗಳನ್ನು ಅಚ್ಚರಿಯಿಂದ ನೋಡಿದ ಮತ್ತು ಸಭಾಸದಸ್ಯರಿಗೂ ತೋರಿಸಿದ".[೨೫] ವೆಂಕಟನು ಮದ್ರಾಸ್ ಹಾಗೂ ಗೋವಾಗಳಿಂದಲೂ ಕಲಾವಿದರನ್ನು ಕರೆಸಿ ಅವರಿಂದಲೂ ಕ್ರೈಸ್ತ ಪರವಾದ ಚಿತ್ರಗಳನ್ನು ಬರೆಯಿಸಿಕೊಂಡ. ಕಲಾವಿದರಿಗೆ ಬಣ್ಣ ಇತ್ಯಾದಿಗಳನ್ನು ಕೊಳ್ಳಲು ಧನಸಹಾಯ ಮಾಡಿದ. ಅವರು ಬರೆದ ಚಿತ್ರಗಳನ್ನು ಸಭಾಸದನದಲ್ಲಿ ತೂಗು ಹಾಕಿದ್ದಲ್ಲದೆ ಖಾಸಗಿಯಾಗಿಯೂ ಇರಿಸಿಕೊಂಡಿದ್ದ. ಕಲಾವಿದರು ವೆಂಕಟನ ಭಾವಚಿತ್ರವನ್ನೂ ರಚಿಸಿ, ನೀಡಿದ್ದರು. ಹೀಗಾಗಿ ೧೭ನೆಯ ಶತಮಾನದ ಆರಂಭ ಕಾಲದಲ್ಲಿ ವಿದೇಶದಿಂದ ಬಂದ ಪ್ರವಾಸಿ ಹಾಗೂ ವ್ಯಾಪಾರಗಾರರಿಗಿಂತ ಧರ್ಮಪ್ರಸಾರಕರು ಕ್ರೈಸ್ತ ಧರ್ಮವನ್ನು ಭಾರತದಲ್ಲಿ ನೆಲೆ ನಿಲ್ಲಿಸುವುದರಲ್ಲಿ ಯಶಸ್ವಿಯಾದರು. ಅವರು ಧರ್ಮ ಪ್ರಸಾರಕ್ಕೆ ಕಂಡುಕೊಂಡ ಮಾರ್ಗ ಚಿತ್ರಕಲೆಯ ಮೂಲಕವಾಗಿತ್ತು. ಚಿತ್ರಿತ ಶಾಲಿ, ವಿಧಾನ, ಬಣ್ಣಗಾರಿಕೆ ಹಾಗೂ ವಸ್ತುಗಳು ಅಂದಿಗೆ ಆಧುನಿಕವೆಂದೆನಿಸಿದ್ದು, ದೇಶೀಯ ರಾಜರ ಮೂಲಕ ಬೇರೂರುವಂತಾದವು.

ಹೂವಿನಹಡಗಲಿ ತಾಲೂಕಿನ ಹಿರೇಕೊಳಚಿ ಗ್ರಾಮದಲ್ಲಿ ಪಿ. ವಿರುಪನಗೌಡ S/o ಕೊಟ್ರುಗೌಡ ಅವರ ಮನೆಯಲ್ಲಿ ಬ್ರಿಟಿಷ್ ಅಧಿಕಾರಿಗಳ ಭಾವಚಿತ್ರಗಳಿವೆ. ಇವು ಅವರ ಮನೆಯ ಪ್ರವೇಶ ದ್ವಾರದ ಮೇಲೆ ನೇತು ಹಾಕಲಾಗಿದೆ. ಅವುಗಳಲ್ಲಿ ಎಡ್ವರ್ಡ್ ಐದನೆಯ ಜಾರ್ಜ್ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಭಾವಚಿತ್ರಗಳು ಅದ್ಭುತವಾಗಿವೆ. ಇವುಗಳನ್ನು ರಾಜ ರವಿವರ್ಮ ರಚಿಸಿರುವುದು ಆ ಭಾವಚಿತ್ರಗಳು ಮೇಲೆ ಈತನ ಹೆಸರಿರುವುದು ಕಂಡುಬಂದಿದೆ.

ಹಗರಿಬೊಮ್ಮನಹಳ್ಳಿ ತಾಲೂಕಿನ ಬನ್ನಿಕಲ್ಲು ಎಂಬ ಗ್ರಾಮದಲ್ಲಿ ಶಿವಯೋಗಿ ತಂದೆ ಮಲ್ಲಿಕಾರ್ಜುನಪ್ಪ ಅವರ ಮನೆಯಲ್ಲಿ ಬ್ರಿಟಿಷ್ ಮತ್ತು ಸ್ವಾತಂತ್ರ್ಯ ಹೋರಾಟಗಾರರ ಭಾವಚಿತ್ರಗಳಿವೆ. ಇವು ಬ್ರಿಟಿಷ್ ಅಧಿಕಾರಿಗಳ ಭಾವಚಿತ್ರಗಳನ್ನು ರಚಿಸಿರುವುದು ರಾಜ ರವಿವರ್ಮ ಎಂದು ದೃಢಪಟ್ಟಿದೆ. ಇವರ ಮನೆಯು ಯೂರೋಪಿಯನ್ ಮಾದರಿಯಲ್ಲಿ ಕಟ್ಟಿರುವುದರಿಂದ ಗೋಡೆಯ ಮೇಲ್ಭಾಗದಲ್ಲಿ ಹೂಬಳ್ಳಿಯ ಚಿತ್ರಗಳನ್ನು ಅಲಂಕಾರ ಮಾಡಿರುವುದು ಕಂಡುಬಂದಿದೆ.

ಬ್ರಿಟಿಷರು ಬಳ್ಳಾರಿ ಜಿಲ್ಲೆಯಲ್ಲಿ ಆಳ್ವಿಕೆ ಮಾಡುವಂತಹ ಸಂದರ್ಭದಲ್ಲಿ ಆಡಳಿತ, ನ್ಯಾಯಾಲಯ, ಸಾರ್ವಜನಿಕ ಕಛೇರಿಗಳನ್ನು ಸ್ಥಾಪಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದರು. ಅಧಿಕಾರಿಗಳು ಕಾರ್ಯನಿರ್ವಹಿಸಿದ ನಂತರ ಅವರ ಸೇವೆಯನ್ನು ಮೆಚ್ಚಿ ಕಲಾವಿದರು ಅವರ

ಭಾವಚಿತ್ರಗಳನ್ನು ರಚಿಸುವುದು. ನಗರ ಪ್ರದೇಶಗಳಲ್ಲಿ ಅವರು ವಾಸವಾಗಿದ ಪ್ರದೇಶಕ್ಕೆ ಅವರ ಹೆಸರನ್ನು ಇಟ್ಟು, ಅಲ್ಲಿ ಅವರ ಮೂರ್ತಿಯನ್ನು ಪ್ರತಿಷ್ಠಾಪಿಸುವ ಪರಂಪರೆ ಬೆಳೆಯಿತು. ಉದಾ:- ಬಳ್ಳಾರಿ ನಗರದಲ್ಲಿ ಬ್ರೂಸ್‌ಪೇಟೆ, ಸತ್ಯನಾರಾಯಣಪೇಟೆ ಮತ್ತು ಕೌಲ್‌ಬಜಾರ್.

**ಗಾಜಿನ ಚಿತ್ರಕಲೆ**

ಗಾಜಿನ ಚಿತ್ರಕಲೆಯು ಚಿತ್ರಕಲಾ ಪ್ರಕಾರಗಳಲ್ಲಿ ಒಂದು. ಈ ಚಿತ್ರಕಲೆ ಅತ್ಯಾಧುನಿಕವಾಗಿ ಇಂದು ಶ್ರೀಮಂತರ ಮನೆ, ಅರಮನೆ ಮುಂತಾದವುಗಳಿಗೆ ತುಂಬಾ ವಿನ್ಯಾಸತ್ಮಕವಾಗಿ ರಚನೆಯಾಗುತ್ತಿವೆ. ಗಾಜಿನ ಮೇಲೆ ಚಿತ್ರಗಳನ್ನು ರಚಿಸುವ ಕಲಾತಂತ್ರ ಭಾರತಕ್ಕೆ ಪಾಶ್ಚಾತ್ಯ ಕಲಾವಿದರಿಂದ ಪರಿಚಯವಾಯಿತು. ಐರೋಪ್ಯ ದೇಶಗಳಲ್ಲಿ ಬಹುಜನ ಪ್ರಿಯವಾಗಿದ್ದ ಈ ಕಲೆ ಸಾಕಷ್ಟು ಪ್ರಚಾರದಲ್ಲಿ. ಚರ್ಚುಗಳ ಕಿಟಕಿಗಳನ್ನು ಅಂದಗೊಳಿಸುವುದಕ್ಕಾಗಿ ವರ್ಣದ ಗಾಜುಗಳನ್ನು ಸಂಯೋಜಿಸಲಾಗುತ್ತಿತ್ತು. 'ಯುಗೋಸ್ಲಾಮಿಯಾ, ಟ್ರಾನ್ಸಿಲೇವಿಯಾ, ಜಿಕೋಸ್ಲೋರೆಯಾ ಮತ್ತು ಜರ್ಮನಿಗಳಲ್ಲಿ ಗಾಜಿನ ಚಿತ್ರಕಲೆ ಜನಪ್ರಿಯ ಕಲೆಯಾಗಿ ಬೆಳೆದಿತ್ತು'.[೨೬] ಮುಖ್ಯವಾಗಿ ಟ್ರಾನ್ಸಿಲೇವಿಯಾ ಇದಕ್ಕೆ ಪ್ರಮುಖ ಕೇಂದ್ರವೆನಿಸಿತ್ತು. ಗಾಜಿನ ಚಿತ್ರಕಲೆಯನ್ನು ಏಷ್ಯಾ ದೇಶಗಳಿಗೆ ಐರೋಪ್ಯ ದೇಶಗಳಿಂದ ಚೀನಾ ದೇಶದ ಕಲಾವಿದರು ಪರಿಚಯಿಸಿದರು. 'ಐರೋಪ್ಯ ದೇಶಗಳೊಡನೆ ಚೀನಾದ ವ್ಯಾಪಾರಿಗಳು ಸಮುದ್ರಯಾನ ವ್ಯಾಪಾರ ಸಂಪರ್ಕ ಇಟ್ಟುಕೊಂಡಿದ್ದ ಚೀನಾದ ವ್ಯಾಪಾರಿಗಳು ಗಾಜಿನ ಚಿತ್ರಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು'.[೨೭] ಇದರೊಂದಿಗೆ ಚೀನಾದ ಬಂದರುಗಳಲ್ಲಿ ಈ ಚಿತ್ರಕಲೆ ಪ್ರಾರಂಭಗೊಂಡಿತು. ಐರೋಪ್ಯರಿಂದ ಈ ಕಲೆಯ ತಾಂತ್ರಿಕತೆಯನ್ನು ಪಡೆದ ಚೀನಾ ದೇಶದ ಕಲಾವಿದರು ತಮ್ಮ ದೇಶದಲ್ಲಿ ಕಲಾಕೃತಿಗಳನ್ನು ತಯಾರಿಸಿ ಐರೋಪ್ಯ ದೇಶಗಳಿಗೆ ರಫ್ತು ಮಾಡಲಾರಂಭಿಸಿದರು. ಚೀನಾದ ನಂತರ ಭಾರದಲ್ಲೂ ಐರೋಪ್ಯರ ವ್ಯಾಪಾರ ಸಂಪರ್ಕದಿಂದಾಗಿ ಗಾಜಿನ ಚಿತ್ರಕಲೆಯು ಪರಿಚಯವಾಯಿತು. ವಿದೇಶಿ ರಾಷ್ಟ್ರಗಳ ವ್ಯಾಪಾರ ಸಂಪರ್ಕ ಸೇತುವೆಯಂತಿದ್ದ ಭಾರತದ ಕರಾವಳಿ ನಾಡಿನಲ್ಲಿ ಚೀನಾ ಹಾಗೂ ಐರೋಪ್ಯ ಕಲಾವಿದರು ಇಲ್ಲಿಯ ಸಂಸ್ಥಾನಿಕರ ಆಶ್ರಯ ಪಡೆದು ಈ ಗಾಜಿನ ಚಿತ್ರಕಲೆಯನ್ನು ಪರಿಚಯಿಸಿದರು.

ಭಾರತದಲ್ಲಿ ಮಹಾರಾಷ್ಟ್ರ, ಪುಣೆ, ಬಾಂಬೆ, ಸತಾರಾ, ಸೋಲ್ಲಾಪುರ, ಗೋವಾ ಇತ್ಯಾದಿ ನಗರಗಳಲ್ಲಿ ಮೊದಲು ಪರಿಚಯವಾಗಿ ಆನಂತರ ಇತರ ನಗರಗಳ ಕಲಾವಿದರು ಈ ಕಲೆಯನ್ನು ಅನುಸರಿಸಿದರು. ಗಾಜಿನ ಚಿತ್ರಕಲೆಯನ್ನು ಪ್ರೋತ್ಸಾಹಿಸಿ, ಬೆಳೆಸಿದ ಕಾರಣಕ್ಕಾಗಿ ಈ ನಗರಗಳು ಪ್ರಮುಖ ಕೇಂದ್ರಗಳಾಗಿದ್ದವು. ಇದನ್ನು ರಾಜ-ಮಹಾರಾಜರಲ್ಲದೆ, ಶ್ರೀಮಂತ ವರ್ಗದ ಜನರು ತಮ್ಮ ಮನೆಯ ಅಂದಕ್ಕಾಗಿ ಗಾಜಿನ ಚಿತ್ರಗಳನ್ನು ಬಳಸತೊಡಗಿದರು. ಇದು ಶೀಘ್ರವೇ ಒಂದು ಜನಪ್ರಿಯ ಕಲಾ ಮಾಧ್ಯಮವಾಗಿ ಬೆಳೆಯತೊಡಗಿತು. ಮೊದಮೊದಲು ಪ್ರಾಕೃತಿಕ ದೃಶ್ಯಗಳ ಚಿತ್ರಗಳನ್ನು ಮಾತ್ರ ಈ ಮಾಧ್ಯಮದಲ್ಲಿ ಚಿತ್ರಿಸಲಾಗುತ್ತಿದ್ದು, ನಂತರ ಧಾರ್ಮಿಕ ಕಥಾ ವಸ್ತುಗಳನ್ನು ಗಾಜಿನ ಚಿತ್ರಕಲೆಯಲ್ಲಿ ಬಳಸಲಾಯಿತು. ಗಾಜಿಗೆ ಚಿನ್ನದ

ಮುಲಾಮನ್ನು ಲೇಪಿಸಿ ಪ್ರಕಾಶದಿಂದ ಮಿನುಗುವಂತೆ ಮಾಡಬಹುದು. ಇದರಿಂದ ಉಜ್ವಲ ವರ್ಣಗಳ ಭಿತ್ತಿಚಿತ್ರಗಳ ರಚನೆ ಸಾಧ್ಯವಾಯಿತು. ಆ ಕಾಲಕ್ಕೆ ಚರ್ಚ್‌ಗಳ ಆಂತರಿಕ ವೈಶಾಲ್ಯ, ಗೋಡೆಗಳ ವಿಸ್ತಾರ, ಉನ್ನತಿ ಮತ್ತು ಮುಚ್ಚಿಗೆಗಳ ಗಾತ್ರ ಹೆಚ್ಚುತ್ತ ಹೋದಂತೆ ನೂರಾರು ಜನರು ಸೇರುವ ಮಂದಿರಗಳಿಗೆ ಬೆಳಕನ್ನು ಒದಗಿಸಲೇಬೇಕಾದ ಹೊಸ ಪ್ರಮೇಯ ಕಾಣಿಸತೊಡಗಿತು. ಇದರಿಂದ ಚರ್ಚ್‌ಗಳ ವಿಶಾಲವಾದ ಒಳಅಂಕಣವನ್ನು ಮತ್ತು ಪೂಜಾ ವೇದಿಕೆಯನ್ನು ಬೆಳಗಿಸಲು ಸೂಕ್ತವಾದ ಬೆಳಕನ್ನು ನೀಡಲು ಚರ್ಚ್ ಗೋಡೆಗಳಲ್ಲಿ ದೊಡ್ಡ ಪ್ರಮಾಣದ ಕಿಟಕಿಗಳನ್ನು ಆ ಸಲುವಾಗಿಯೇ ವಾಸ್ತುಶೈಲಿಗೆ ಪೂರಕವಾದ ರೀತಿಯಲ್ಲಿ ಇರಿಸತೊಡಗಿದರು. ಈ ಕಿಟಕಿಗಳು ಮಂದವಾದ ಬಣ್ಣದ ಗಾಜಿನ ಮೂಲಕ ಹೊರಗಣ ಬೆಳಕನ್ನು ಚರ್ಚ್ ಸಭಾಂಗಣವನ್ನು ಒಳಸೂಚಿ, ಒಳ ಆವರಣವೇನೆಲ್ಲಾ ಬಣ್ಣದ ಗಾಜಿನ ಮೂಲಕ ಬೆಳಕು ಒಳ ಚೆಲ್ಲಿ, ಅಲ್ಲಿನ ಸಂಕಲನ ಚಿತ್ರಗಳು ಉಜ್ವಲ ಪ್ರಕಾಶದಿಂದ ಕಾಣಿಸಲು ಸಹಾಯ ಮಾಡುತ್ತವೆ. ಮಂದ ವರ್ಣದ ಗಾಜಿನ ಮೂಲಕ ತೂರಿ ಬರುವ ಕ್ರೈಸ್ತನ ಶುಭಾರ್ಶೀವಾದದ ಬೆಳಕು. ಈ ಬಣ್ಣ ಗಾಜಿನ ಕಿಟಕಿಗಳನ್ನು ಗಾಥಿಕ್ ವಾಸ್ತು ರಚನೆಯ ಅವಿಭಾಜ್ಯ ಅಂಗಗಳು ಎಂಬುದನ್ನು ಸಾಬೀತುಪಡಿಸಿದೆ.

ಬಳ್ಳಾರಿ ಜಿಲ್ಲೆಯಲ್ಲಿರುವ ಚರ್ಚ್‌ಗಳ ಮುಂಬಾಗಿಲಿನ್ನು ತ್ರಿಕೋನದಲ್ಲಿ ಮಂದವಾದ ಬಣ್ಣದ ಗಾಜಿನ ಪ್ಲೇಟುಗಳನ್ನು ಬಳಸಿ ಜ್ಯಾಮಿತಿತಾಕಾರದ ದೊಡ್ಡ ಹೂವನ್ನು ರಚಿಸಿದ್ದಾರೆ. ಈ ಹೂವನ್ನೇ 'ರೋಸ್ ವಿಂಡೋ'(Rose Window) ಎಂದು ಕರೆದಿದ್ದು. ಕ್ರೈಸ್ತ ದೇವಾಲಯಗಳ ಗೋಡೆಗಳಲ್ಲಿ ಕಂಡು ಬರುವ ಕಿಟಕಿ ಹಾಗೂ ಬಾಗಿಲುಗಳು ತ್ರಿಕೋನಾಕಾರದಲ್ಲಿದ್ದು, ಅವುಗಳಿಗೆ ಹಸಿರು, ನೀಲಿ, ಕೆಂಪು ಇತ್ಯಾದಿಗಳ ಬಣ್ಣದಿಂದ ಕೂಡಿದ ಗಾಜುಗಳನ್ನು ಅಳವಡಿಸಿರುವುದನ್ನು ಗಮನಿಸಲಾಗಿದೆ.

### ೪.೩. ಭಿತ್ತಿಚಿತ್ರ ಕಲೆ

ಭಿತ್ತಿ ಚಿತ್ರಕಲೆ ಎಂದರೆ, ಗೋಡೆಗಳ ಮೇಲೆ ಚಿತ್ರ ರಚನೆ ಮಾಡುವುದೇ ಆಗಿದೆ. ಇದು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಈ ಕಲೆ ರೂಢಿಯಲ್ಲಿದೆ. ಅದು ಸ್ವಾಭಾವಿಕ ಗುಹೆ, ಶಿಲೆ, ಬಯಲು ಬಂಡೆಗಳ ಮೇಲೆ ಮತ್ತು ಮಾನವ ನಿರ್ಮಿತವಾದ ಗುಹೆ, ದೇವಾಲಯ, ಮನೆ, ಮಠ, ಮಸೀದಿ, ಚರ್ಚುಗಳ ಮುಂತಾದ ಕಟ್ಟಡಗಳ ಗೋಡೆ, ಮೇಲ್ಛಾವಣಿ, ಜರಿಲೆ, ತೊಲೆಕಂಬ, ಕಿಟಕಿಗಳು, ಕಮಾನುಗಳು ಹೀಗೆ ವಸ್ತುವಿನ ಯಾವುದೇ ಭಾಗದಲ್ಲಿ ಚಿತ್ರರಚಿಸಿ ಅವುಗಳನ್ನು ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಪರಿಗಣಿಸಲಾಗುವುದು. ಭಿತ್ತಿ ಚಿತ್ರಕಲೆಯ ಪ್ರಾಚೀನತೆಯನ್ನು ಕುರಿತು ನಿಖರವಾದ ಕಾಲಸೂಚಿ ಹೇಳುವುದು ಅಸಾಧ್ಯ ವಾದುದಾದರೂ, ಮಾನವ ಪ್ರಪಂಚಕ್ಕೆ ಕಾಲಿಟ್ಟ ನಂತರ ನಿತ್ಯದ ಬದುಕಿಗೆ ಬೇಕಾಗುವ ಹಾಗೂ ಅವನ ಭಾವನೆಗಳನ್ನು ವ್ಯಕ್ತಪಡಿಸಲು ಚಿತ್ರಗಳನ್ನು ಮಾಧ್ಯಮವಾಗಿ ಯಾವಾಗ ಬಳಸಿಕೊಂಡನೋ ಆವಾಗಿನಿಂದಲೇ ಈ ಕಲೆಯ ಕಾಲವೆಂದು ಗುರುತಿಸಬೇಕಾಗುತ್ತದೆ. ಚಿತ್ರಕಲೆಯ

ಬಾಳಿಕೆ ದೃಷ್ಟಿಯಿಂದಲೂ ಅದು ಆಕರ್ಷಣೀಯವಲ್ಲ. ಆ ಕಾಲದ ಕಲಾಭಿಮಾನಿಗಳು ಗೋಡೆಯ ಮೇಲೆ ಕೆಲವು ವರ್ಷ ಮಾತ್ರ ಉಳಿದು ಅಳಿದು ಹೋಗುವ ಚಿತ್ರಕ್ಕಿಂತ ಅದರ ಸ್ಥಾನದಲ್ಲಿ ಸದೃಢವಾಗಿ, ಸ್ಪಷ್ಟವಾಗಿ ಹಾಗೂ ಎರಡು ಆಯಾಮದ ವಿಶಿಷ್ಟತೆಯಿಂದ ಕೂಡಿದ ಶಿಲ್ಪ ಮತ್ತು ಭಿತ್ತಿಶಿಲ್ಪಗಳ ರಚನೆಯ ಕಡೆಗೆ ಆಕರ್ಷಿಕರಾದರು. ಇದರಿಂದ ಸಹಜವಾಗಿಯೇ ಭಿತ್ತಿರೂಹುಗಳು ಹೆಚ್ಚು ಹೆಚ್ಚು ಪ್ರವರ್ಧನಮಾನಕ್ಕೆ ಬಂದವು. ಸಾವಿರಾರು ವರ್ಷಗಳ ಹಿಂದಿನ ಗುಹಾಂತರ ದೇವಾಲಯಗಳಲ್ಲಿ ಚಿತ್ರ ಮಾಧ್ಯಮದ ಭಿತ್ತಿಚಿತ್ರಗಳು ಕೇವಲ ಸಂತ, ಮಹಾತ್ಮರ, ಅನುಭಾವಿಗಳ ಅಭಿವ್ಯಕ್ತಿಗೆ ಆಪ್ತವಾದ ಸರಳಕೃತಿಗಳಾದವು. ಶಿಲ್ಪ ಮಾಧ್ಯಮದ ಭಿತ್ತಿ ರೂಹುಗಳು ರಾಜ-ಮಹಾರಾಜರ ಹೆಮ್ಮೆಯ ವೈಭವದ, ಆಡಂಬರದ, ಪ್ರತಿಷ್ಠೆಯ ಸಂಕೇತಗಳಂತೆ ಆದವು. ಈ ರೂಪಾಂತರ ಮಾಧ್ಯಮ ಯಶಸ್ವಿಯಾಗಿ ಜನಪ್ರಿಯ ಸ್ಥಾನ ಪಡೆಯಿತು. ಐಹೊಳೆ, ಬಾದಾಮಿ, ಪಟ್ಟದಕಲ್ಲು, ಬೇಲೂರು, ಹಳೇಬೀಡು, ಸೋಮನಾಥಪುರ ಹಂಪಿ ಮೊದಲಾದ ಕಡೆಗಳಲ್ಲಿ ಕಂಡು ಬಂದ ಭಿತ್ತಿರೂಹುಗಳನ್ನು ಉದಾಹರಿಸಬಹುದು.

೧೮-೧೯ನೆಯ ಶತಮಾನದ ವೇಳೆಗೆ ಬ್ರಿಟಿಷ್ ಕಂಪನಿ ಸರ್ಕಾರದ ಆಗಮನದೊಂದಿಗೆ ಸಾಂಪ್ರದಾಯಿಕ ನೆಲೆಯ ಭಾರತೀಯ ಭಿತ್ತಿಚಿತ್ರ ಕಲೆಯಲ್ಲಿ ಐರೋಪ್ಯ ಶೈಲಿಯ ಲಕ್ಷಣಗಳು ಕಾಣಿಸಿಕೊಳ್ಳಲಾರಂಭಿಸಿದವು. ಕರ್ನಾಟಕದ ಪೂರ್ವ ರೋಮ್ ಎಂದೇ ಕರೆಯಲ್ಪಡುವ ಮಂಗಳೂರಿನಲ್ಲಿ ಮೊದಲು ಕ್ರೈಸ್ತ ಧರ್ಮದ ಕಾರ್ಯ ಚಟುವಟಿಕೆಗಳು ಆರಂಭಗೊಂಡಿದ್ದ ಕಾರಣಕ್ಕಾಗಿ, ಅಲ್ಲಿನ ಕ್ರೈಸ್ತ ದೇವಾಲಯಗಳಲ್ಲಿ ಭಿತ್ತಿಚಿತ್ತದ ಪ್ರಭಾವ ಹೆಚ್ಚು ಬೆಳವಣಿಗೆಯಾಗಿರುವುದು ಕಂಡುಬಂದಿದೆ. 'ಯೂರೋಪಿನಿಂದ ೧೮೯೯ರಲ್ಲಿ ಮಂಗಳೂರಿಗೆ ಬಂದ ಸಹೋದರ ಆ್ಯಂಟೋನಿಮೋಶಿನ್ ಅಲ್ಲಿಯ ಸೇಂಟ್ ಅಲೋಷಿಯಸ್ ಚರ್ಚ್‌ನಲ್ಲಿ(೧೯೦೨-೪ರ ಅವಧಿಯಲ್ಲಿ) ನೂರಾರು ಚಿತ್ರಗಳನ್ನು ಕ್ಯಾನ್‌ವಾಸ್ ಮೇಲೆ ರಚಿಸಿದ. ಅವನ್ನು ಮೇಲ್ಛಾವಣಿಗೆ ಹೊದ್ದಿಸಿರುವನಲ್ಲದೆ ಪಕ್ಕದ ಭಿತ್ತಿಯಲ್ಲೂ ರಚಿಸಿದ್ದಾನೆ. ಪ್ರಾರ್ಥನಾ ಮಂದಿರವಲ್ಲದೆ ಊಟದ ಮನೆಯಲ್ಲೂ ಕ್ರೈಸ್ತ ಪರವಾದ ಅನೇಕ ಚಿತ್ರಗಳನ್ನು ಕಾಣಬಹುದು. ಬಂಟ್ವಾಳ ಬಳಿಯ ಚರ್ಚ್ ಒಂದರಲ್ಲೂ ಈತನೇ ರಚಿಸಿದ ಕ್ರೈಸ್ತ ಧರ್ಮದ ಹಲವಾರು ಭಿತ್ತಿಚಿತ್ರಗಳಿವೆ'.[೨೮]

ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುವ ಕ್ಯಾಥೋಲಿಕ್ ಕ್ರೈಸ್ತ ದೇವಾಲಯಗಳಲ್ಲಿ ಭಿತ್ತಿಚಿತ್ರ, ಫಲಕ ಚಿತ್ರಗಳು, ಬಣ್ಣದ ಗಾಜಿನ ಕಿಟಕಿ ಚಿತ್ರಗಳಿವೆ. ಇವು ಯೇಸುವಿನ ಮಾದರಿ ಜೀವನವನ್ನು ತೋರಿ, ಕ್ರೈಸ್ತ ಭಕ್ತರ ದಿನನಿತ್ಯದ ಜೀವನದ ಜಂಜಾಟಗಳಿಂದ ಮನಸ್ಸನ್ನು ಹೇಗೆ ಹಗುರ ಹಾಗೂ ಹಸನಗೊಳಿಸಬೇಕೆಂಬ ದಾರಿ ತೋರುವ ಚಿತ್ರಗಳಾಗಿವೆ. ಯೇಸು ಮಾನವನಾಗಿ, ಪವಾಡ ಪುರುಷನಾಗಿ, ಜನರ ದೈವವಾಗಿ ಬೆಳೆದ ಸಂಸ್ಕೃತಿಯನ್ನು ತೋರುತ್ತದೆ. ಅಂತೆಯೇ ಚಿತ್ರಗಳಲ್ಲಿ ಯೇಸುವಿನ ಜನನ, ಯೇಸುನನ್ನು ಲಾಲಿಸಿ-ಪಾಲಿಸಿ, ಹಾಲುಣಿಸುತ್ತಿರುವ ತಾಯಿ ವರ್ಜಿನ್(ಮೇರಿ), ಹುಟ್ಟಿದ ಪವಾಡ ಪುರುಷನಿಗೆ ಸತ್ಕರಿಸುತ್ತಿರುವುದು, ಜೆರೂಸಲೆಮ್ ನಗರಕ್ಕೆ ಯೇಸುವಿನ ಆಗಮನ, ಜೆರೂಸಲೆಮ್ ನಗರದಲ್ಲಿ ಅವನು ಮಾಡಿದ ಪವಾಡಗಳು, ಸತ್ತ

ವ್ಯಕ್ತಿಯನ್ನು ಬದುಕಿಸಿದ್ದು, ಯೇಸುವನನ್ನು ಶಿಲುಬೆಗೇರಿಸಿದ್ದ, ಯೇಸುವನ್ನು ಶಿಲುಬೆಯಿಂದಿಳಿಸಿದ್ದು, ಯೇಸುವಿನ ಕೊನೆಯ ಭೋಜನ, ಯೇಸುವಿನ ಪುನರುತ್ಥಾನ ಇತ್ಯಾದಿ ಅಂಶಗಳನ್ನೊಳಗೊಂಡ ಭಿತ್ತಿಚಿತ್ರಗಳನ್ನು ರಚಿಸಲ್ಪಟ್ಟಿರುವುದು ಕಂಡುಬಂದಿದೆ. ಆದರೆ, ಪ್ರಾಟೆಸ್ಟೆಂಟ್ ಕ್ರೈಸ್ತ ದೇವಾಲಯಗಳಲ್ಲಿ ಈ ಮೇಲಿನ ಯಾವ ಭಿತ್ತಿಚಿತ್ರಗಳು ಕಂಡುಬರುವುದಿಲ್ಲ. ಕಾರಣ ಅವರಿಗೆ ಯೇಸುವಿನ ಮೇಲೆ ಭಕ್ತಿ ಇದ್ದಷ್ಟು, ಬೇರೆ ಯಾವುದೇ ಚಿತ್ರಗಳ ಮೇಲೆ ಕಂಡುಬರುವುದಿಲ್ಲ. ಚರ್ಚ್‌ಗಳ ಒಳಾಂಕಣದಲ್ಲಿ ರಚಿಸಲ್ಪಟ್ಟ ಭಿತ್ತಿಚಿತ್ರಗಳನ್ನು ಮೂಲ ವರ್ಣಗಳಾದ ಕೆಂಪು, ನೀಲಿ, ಹಳದಿ ವರ್ಣಗಳೊಂದಿಗೆ ಮಿಶ್ರವರ್ಣಗಳನ್ನೂ ಭಿತ್ತಿಚಿತ್ರ ರಚನೆಗಾಗಿ ಬಳಸಿರುವುದನ್ನು ಗಮನಿಸಲಾಗಿದೆ.

ಹೊಸಪೇಟೆ ಪಟ್ಟಣದಲ್ಲಿ ಕ್ರಿಸ್ತರಾಜ ಸಭೆಯ ಬಲಿಪೀಠದ ಮೆಲ್ಭಾವಣಿಯಲ್ಲಿ ಕಲಾತ್ಮಕ ವಿನ್ಯಾಸದ ಮೀನಿನ ಚಿತ್ರವಿದೆ. ಇದು ಗಾರೆಯಿಂದ ರಚಿಸಲ್ಪಟ್ಟಿದೆ.

ಆಲೂರು ತಾಲೂಕು ಪಟ್ಟಣದಲ್ಲಿ ತೆಲುಗು ಪ್ರಾಥಮಿಕ ಶಾಲಾ ಕೊಠಡಿಯ ಒಳಭಾಗದ ಭಿತ್ತಿಯಲ್ಲಿ ಕ್ರೈಸ್ತ್‌ಮಿಷನರಿಯ ಭಿತ್ತಿಚಿತ್ರವಿದೆ. ಈ ಚಿತ್ರದಲ್ಲಿ ಕ್ರೈಸ್ತ ಪಾದ್ರಿ ಮತ್ತು ಆತನ ಹೆಂಡತಿಯ ಚಿತ್ರವನ್ನು ಗಾರೆಯಿಂದ ಗೋಡೆಗೆ ರಚಿಸಲ್ಪಟ್ಟಿದೆ. ಇದು ನೀಲಿ, ಹಳದಿ ಬಣ್ಣದಿಂದ ಕೂಡಿದೆ. ಚಿತ್ರದಲ್ಲಿ ಕ್ರೈಸ್ತ್ ಪಾದ್ರಿಯು ಕಪ್ಪುವರ್ಣದ ಕೋಟನ್ನು ಧರಿಸಿದ್ದು, ತಲೆಗೆ ಬಿಳಿಯ ಟೋಪ್ಪಿಗೆಯನ್ನು ಹಾಕಿಕೊಂಡಿದ್ದಾನೆ. ಅದರ ಮೇಲೆ ಯೇಸುವಿನ ಶಿಲುಬೆಯಿದೆ. ಈತನ ಪಕ್ಕದಲ್ಲಿ ಆತನ ಮಡದಿಯು ನಿಂತಿದೆ. ಈ ದೃಶ್ಯವು ಸುಂದರವಾಗಿ ಮೂಡಿಬಂದಿದೆ.

## ೪.೪. ಮೂರ್ತಿಶಿಲ್ಪ ಹಾಗೂ ಕಲಾಕೃತಿಗಳು

ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳು ಕರ್ನಾಟಕದ ಕಲಾ ಇತಿಹಾಸದ ವೈಶಿಷ್ಟ್ಯಕ್ಕೆ ಸಾಕ್ಷಿಗಳು. ಈ ಎರಡು ಕಲೆಗಳು ಅವಿನಾಭಾವ ಸಂಬಂಧದಿಂದ ಬೆಳೆದುಬಂದುವು. ವಾಸ್ತುಶಿಲ್ಪ ಪ್ರಮುಖವಾಗಿ ಧಾರ್ಮಿಕ ಕಟ್ಟಡಗಳ ನಿರ್ಮಾಣದ ಘಟ್ಟವನ್ನು ತಲುಪಿದಾಗ, ಆ ಕಟ್ಟಡಗಳಲ್ಲಿ ಪ್ರತಿಷ್ಠಾಪಿಸುವ ಮೂರ್ತಿಗಳ ನಿರ್ಮಾಣದ ಶಿಲ್ಪಕಲೆ ಅದಕ್ಕೆ ಅನಿವಾರ್ಯವಾದ ಒಂದು ಅಂಗವಾಗಿ ಪರಿಣಮಿಸಿತು. ವಾಸ್ತುಶಿಲ್ಪ ದೇವರುಗಳಿಗೆ ಆಲಯವನ್ನು ಕಟ್ಟಿದರೆ, ಮೂರ್ತಿಶಿಲ್ಪ ಆ ದೇವರುಗಳ ಕಲ್ಪನೆಗೆ ಸಾಂಕೇತಿಕವಾದ ವ್ಯಕ್ತಿ ಸ್ವರೂಪವನ್ನು ಕೊಡಲು ಪ್ರಯತ್ನಿಸಿತು. ಅಂದರೆ, ಮುಖ್ಯವಾಗಿ ಧಾರ್ಮಿಕ ಶ್ರದ್ಧೆಯೇ ಶಿಲ್ಪಕ್ಕೆ ಮೂಲಭೂತ ಪ್ರಚೋದನೆಯಾಗಿ ಪರಿಣಮಿಸಿತೆನ್ನಬಹುದು. ಕಲೆಗೂ, ಧರ್ಮಕ್ಕೂ ಒಂದು ಸಾವಯವ ಸಂಬಂಧವನ್ನು ಕರ್ನಾಟಕದ ಸಂಸ್ಕೃತಿ ಅಳವಡಿಸಿ ಕೊಂಡಿತೆಂಬುದಕ್ಕೆ ಸಂಗೀತ, ಚಿತ್ರ, ನೃತ್ಯ ಮೊದಲಾದ ಇತರ ಕಲೆಗಳಂತೆ ಮೂರ್ತಿಶಿಲ್ಪವೂ ಒಂದೆನಿಸಿದೆ.

ಮೂರ್ತಿಶಿಲ್ಪ ಎಂದು ಶಬ್ದವು IConographyಯ ಅರ್ಥದಲ್ಲಿ ಸಾಮಾನ್ಯವಾಗಿ ದೇವದೇವತಾ ಮೂರ್ತಿಗಳಿಗೆ ಬಳಸುವುದು ರೂಢಿಯಲ್ಲಿದೆ. ಶಿಲ್ಪ ಎಂದರೆ, ಮೂರು ಆಯಾಮಗಳ ಆಕೃತಿ. ಕಲ್ಲು, ಮರ, ಕಂಚು ಮುಂತಾದ ಮಾಧ್ಯಮಗಳಿಂದ ಮಾಡಿದ ಆಕೃತಿ. ಶಿಲ್ಪ ಮೂಲತಃ

ಕಲೆಯ ಮನಸ್ಸಿನಿಂದ ಹುಟ್ಟಿ ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದಿದೆ. ಅದೇ ಹೆಚ್ಚಾಗಿ ಭಕ್ತಿಯನ್ನು ಉದ್ದೀಪನಗೊಳಿಸುತ್ತದೆ. ಈ ಶಿಲ್ಪವು ಒಂದು ಮೂರ್ತಿಯದಾದರೆ ಅದು ಮೂರ್ತಿಶಿಲ್ಪವಾಗುತ್ತದೆ. ಆಧುನಿಕ ಶಿಲ್ಪದ ಕೃತಿ ರಚನೆಯಲ್ಲಿ ವೈಯಕ್ತಿಕ ಕನಸು, ಅನುಭೂತಿ, ವಿಚಾರಗಳನ್ನು ಪ್ರತಿಪಾದಿಸುವುದು, ಹಾಗೇ ರೂಪ, ಆಕಾರ, ಚಲನಾನುಭವ, ಒರಟು-ನಯ, ಬೆಳಕು-ನೆರಳಿನಾಟ, ಭಾವನೆಗಳು ಹೀಗೆ ತಮಗೆ ತೃಪ್ತಿಯಾಗುವವರೆಗೂ ರಚಿಸಿ ಅದಕ್ಕೆ ತಕ್ಕ ವಾತಾವರಣ ನಿರ್ಮಿಸುವುದು ಮುಂತಾದವನ್ನು ಕಾಣಬಹುದು. ಶಿಲ್ಪಗಳಲ್ಲಿಯೂ ಬಾಹ್ಯ ವಾಸ್ತವತೆಗಿಂತ ಆಂತರಿಕ ರೂಪದ ಅಭಿವ್ಯಕ್ತಿಗೆ ಮಹತ್ವ ನೀಡಲಾಯಿತು.

೧೭ನೇ ಶತಮಾನದಲ್ಲಿ ಭಾರತಕ್ಕೆ ಬಂದ ಬ್ರಿಟಿಷರು ದೇಶವನ್ನು ಹಂತ ಹಂತವಾಗಿ ಆಕ್ರಮಿಸಿದರು. ವ್ಯಾಪಾರದ ಉದ್ದೇಶದಿಂದ ಬಂದವರು ಧಾರ್ಮಿಕ, ಸಾಂಸ್ಕೃತಿಕ ವಲಯಗಳ ಮೇಲೂ ಪ್ರಭಾವ ಬೀರಿದರು. ಸಾಂಪ್ರದಾಯಿಕ ಕಲೆಗಳನ್ನು ಪೋಷಿಸುತ್ತಿದ್ದ ರಾಜಮನೆತನಗಳು ಅಧಿಕಾರ ಕಲೆದುಕೊಂಡವು. ಪಾರಂಪರಿಕ ಕಲೆ ಮತ್ತು ಸಂಸ್ಕೃತಿಗಳ ಮೇಲೆ ವಿನಾಶಕಾರಿ ಪರಿಣಾಮವಾಯಿತು. ಪಾಶ್ಚಾತ್ಯ ಕಲೆ ಸಂಸ್ಕೃತಿಯ ಪ್ರಚಾರದಿಂದಾಗಿ ಅಲ್ಲಿನ ಪದ್ಧತಿಗಳು ರೂಢಿಗೆ ಬಂದುವು. ಆಗ ಸಾಂಪ್ರದಾಯಿಕ ಶಿಲ್ಪ ಮತ್ತಿತರ ಕಲೆಗಳು ಪ್ರತ್ಯೇಕ ಗುಂಪಾಗಿ ಉಳಿದವು. ಇವುಗಳಿಗೆ 'ಕುಶಲಕಲೆಯ' ಹಣೆಪಟ್ಟಿ ಹಚ್ಚಲಾಯಿತು. ಶಿಲ್ಪಿಗಳನ್ನು ಕುಶಲಕರ್ಮಿಗಳೆಂದು ಕರೆಯಲಾಯಿತು. ಅವರ ಅದ್ಭುತ ಕಲ್ಪನೆ, ಸೌಂದರ್ಯ ಪ್ರಜ್ಞೆ, ಸೃಜನಶೀಲತೆಯನ್ನು ಗುರುತಿಸಲಾರದಾದರು. ಹೀಗೆ ನಮ್ಮ ಸಂಸ್ಕೃತಿ, ಶಿಲ್ಪಕಲೆಗಳ ಬಗ್ಗೆ ತಾರತಮ್ಯ ಮಾಡಿದ ಬ್ರಿಟಿಷರು ತಮ್ಮ ಕಲೆ ಮತ್ತು ಸಂಸ್ಕೃತಿಯನ್ನು ಪ್ರಚಾರ ಮಾಡಿ ಮೇಲೆತ್ತುವಲ್ಲಿ ಯಶಸ್ವಿಯಾದರು. ಮೂಲತಃ ಈ ಉದ್ದೇಶದಿಂದಲೇ ಬ್ರಿಟಿಷರು ನಮ್ಮ ಯುವ ಪೀಳಿಗೆಗೆ ಪಾಶ್ಚಾತ್ಯ ಕಲಾ ಶೈಲಿಗಳನ್ನು ಅಭ್ಯಸಿಸಲು ಅನುಕೂಲವಾಗುವಂತೆ ಮುಂಬಾಯಿ, ಕಲ್ಕತ್ತಾ, ಮದ್ರಾಸ್, ಲಕ್ನೋ ನಗರಗಳಲ್ಲಿ ಕಲಾ ಶಾಲೆಗಳನ್ನು ತೆರೆದರು. ಅಕಾಡೆಮಿಕ್ ಶೈಲಿ, ಕ್ಲಾಸಿಕ್‌ಶೈಲಿ, ಗಾಥಿಕ್ ಶೈಲಿ ಹೀಗೆ ಕಾಲದಿಂದ ಕಾಲಕ್ಕೆ ಬದಲಾದ ಪಾಶ್ಚಾತ್ಯ ಶೈಲಿಗಳನ್ನು ಗಮನಿಸಿದ ಭಾರತೀಯ ಶಿಲ್ಪ ಕಲಾವಿದರಲ್ಲಿ ಹಲವರು ನವ್ಯ ಶಿಲ್ಪ ಕಲೆಯತ್ತ ಒಲಿದು ಅದರಲ್ಲಿ ತೊಡಗಿದರು. ಕೆಲವು ಶಿಲ್ಪಿಗಳು ಪಾರಂಪರಿಕ ಭಾರತೀಯ ಶಿಲ್ಪಕಲೆಯನ್ನೇ ಮುಂದುವರೆಸಿಕೊಂಡು ಬಂದರು. ಕೈಗಾರಿಕಾ ಕ್ರಾಂತಿ, ವೈಜ್ಞಾನಿಕ ಪ್ರಗತಿಯ ಪರಿಣಾಮವಾಗಿ ಜನರಲ್ಲಿ ವೈಚಾರಿಕ ಜಾಗೃತಿ ಉಂಟಾಗಿ ಹೊಸ ಚಿಂತನೆಗಳಿಗೆ ಅವಕಾಶವಾಯಿತು. ಸಾಂಪ್ರದಾಯಿಕ ಮೌಲ್ಯಗಳು ಕುಸಿದುವು. ಈ ಎಲ್ಲ ಬದಲಾವಣೆಗಳ ಪರಿಣಾಮ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪಕಲೆಗಳ ಮೇಲೂ ಆಯಿತು. ಇದೇ ನವ್ಯ ಕಲೆಗೆ ನಾಂದಿಯಾಯಿತು. 'ದೃಶ್ಯಕಲೆಗಳಿಗೆ ಹೊಸತನವನ್ನು ನವ್ಯಕಲೆಗೆ ಚಾಲನೆ ಸಿಕ್ಕಿತು'. ಅದು ಶಿಲ್ಪಕಲೆಯ ಮೇಲೂ ಪ್ರಭಾವ ಬೀರಿತು. ಹೆಸರಾಂತ ಶಿಲ್ಪಿ ರೊಡಿನ್ ತನ್ನ ವಿಶಿಷ್ಟ ಶೈಲಿಯಿಂದ ನವ್ಯ ಶಿಲ್ಪಕ್ಕೆ ನಾಂದಿ ಹಾಡಿದ. ಇವರನ್ನು ಇಂಪ್ರೆಷನಿಸ್ಟ್ ಶಿಲ್ಪಿಗಳೆಂದು ಗುರುತಿಸಿದರು. ಸೆಜಾನ್‌ನ ಕಲಾ ಚಿಂತನೆಗಳನ್ನು ಅನುಸರಿಸಿದ ಪಿಕಾಸೊ,

ಬ್ರಾಂಕುಸಿ, ಹೆನ್ರಿ ಮಾಥೀಸ್, ಆರ್ಚ್‌ಪೆಂಕೊ ಮತ್ತು ಡೇಗಾ ಮುಂತಾದವರು ಶಿಲ್ಪರಚನೆಯಲ್ಲೂ ತೊಡಗಿದರು'.[೨೯] ನವ್ಯ ಶಿಲ್ಪ ಉಗಮವಾಯಿತು.

ವಸಾಹತುಶಾಹಿ ಆಳ್ವಿಕೆಯ ಸಂದರ್ಭದ ವಾಸ್ತುಕಲೆಯಲ್ಲಿ ನೋಡುವಂತಹ ಅನುಕರಣಶೀಲತೆಯನ್ನು ಶಿಲ್ಪಕಲೆಯಲ್ಲಿ ಕನ್ನಡನಾಡು ಹೆಚ್ಚು ಕಂಡಿಲ್ಲವೆನ್ನಬಹುದು. ಹೀಗಾಗಿ ಐರೋಪ್ಯ ಶೈಲಿಯ ಶಿಲ್ಪಗಳು ಈ ನಾಡಿನಲ್ಲಿ ಹೇಳಿಕೊಳ್ಳುವಷ್ಟಿಲ್ಲ. ಕ್ರೈಸ್ತ ದೇವಾಲಯಗಳಲ್ಲಿ, ಪಾದ್ರಿಗಳ ವಸತಿಗೃಹಗಳಲ್ಲಿ, ಪ್ರತಿಷ್ಠಿತ ಕ್ರಿಶ್ಚಿಯನ್ನರ ಮನೆಗಳಲ್ಲಿ ಕಾಣುವ ಧಾರ್ಮಿಕ ಮೂರ್ತಿಶಿಲ್ಪ ಕೃತಿಗಳನ್ನು ಮೊದಲು ಹೆಸರಿಸಬಹುದಾದರೂ ಈ ಶೈಲಿಯ ಶಿಲ್ಪಗಳು ನಾಡನ್ನು ಪ್ರವೇಶಿಸುವುದಕ್ಕಿಂತ ಬಹಳ ಹಿಂದಿಯೇ. ಅಂದರೆ, ಕ್ರಿಸ್ತ ಶಕಾರಂಭದಲ್ಲಿ ಕೆಲವೆಡೆ ಸಿಕ್ಕ ರೋಮನ್ ನಾಣ್ಯ ಪದಕಗಳ ಮೇಲೆ ಕಂಡುಬರುವ ಚಿಕ್ಕ ಚಿತ್ರಶಿಲ್ಪಗಳನ್ನೂ ಮರೆಯುವಂತಿಲ್ಲ. ಆ ಕಾಲದ ರೋಮನ್, ಅಂಪೋರಾ, ಥಾಲಿ, ಮಡಿಕೆಗಳನ್ನು ಹೆಸರಿಸಬಹುದು. ಇವುಗಳ ಪ್ರಭಾವ ಸಮಕಾಲೀನ ಚೂಟು ಶಾತವಾಹನ ಕಲೆಯಲ್ಲಿ ತುಸು ಕಂಡು ಬರುವುದಾದರೂ ಹೇಳಿಕೊಳ್ಳುವಷ್ಟಿಲ್ಲ. ಬ್ರಿಟಿಷ್ ಕಾಲದ ಕರ್ನಾಟಕದಲ್ಲಿದ್ದ ಐರೋಪ್ಯ ಶೈಲಿಯ ಕಟ್ಟಡಗಳಲ್ಲಿ ಮುಖ್ಯವಾಗಿ ಕಂಬದ ತುದಿ, ಗೋಡೆಯ ದಿಂಡುಗಳ ಮೇಲೆ ಗಾರೆಯಲ್ಲಿ ಚಿತ್ರಿಸಿರುವ ಹೂಬಳ್ಳಿ, ಜ್ಯಾಮಿತಿ ವಿನ್ಯಾಸಗಳು ಐರೋಪ್ಯ ಶೈಲಿಯ ಪರಿಶುದ್ಧತೆಯನ್ನಾಗಲೀ, ಸೊಬಗನ್ನಾಗಲೀ, ಮರೆಯುವುದಿಲ್ಲ. ಈ ಶಿಲ್ಪಾನುಕರಣೆಗಳನ್ನು ನಮ್ಮ ಸ್ಥಳೀಯ ಶಿಲ್ಪಿಗಳೂ, ಗಾರೆ ಕೆಲಸದವರೂ ಅನುಕರಿಸಿದ್ದರಷ್ಟೇ. ಮೈಸೂರಿನ ಕೃಷ್ಣ ರಾಜೇಂದ್ರ ಆಸ್ಪತ್ರೆ ಕಟ್ಟಡದಲ್ಲಿ ಶಿಲ್ಪಿಸಿರುವ ರೆಕ್ಕೆಗಳಿರುವ ಸ್ತ್ರೀ-ವಿಗ್ರಹಗಳನ್ನಿಲ್ಲಿ ಉದಾಹರಿಸಬಹುದು. ಅವುಗಳ ಶೈಲಿಯಲ್ಲಿ ದೇಶೀಯ ಸೊಗಸು ಕಾಣದಿರದು. ಕರ್ನಾಟಕದಲ್ಲಿರುವ ಕೆಲವು ಸಮಕಾಲೀನ ಬೃಹತ್ ಶಿಲ್ಪಗಳನ್ನು, ಯೂರೋಪಿಯನ್ ಶಿಲ್ಪಗಳೇ ಕಂಡರಿಸಿದ್ದು ಕಂಡು ಬರುತ್ತದೆ. ಅವುಗಳಲ್ಲಿ ಮಾತ್ರ ಐರೋಪ್ಯ ಶೈಲಿ ಸಹಜವಾಗಿದೆ. ಬ್ರಿಟಿಷ್ ಪ್ರತಿಮೆ(ಬೆಂಗಳೂರು), ಮೈಸೂರಿನ ರೆಸಿಡೆಂಟ್ ಆಗಿದ್ದ 'ಜೇಮ್ಸ್ ಡೇವಿಡ್ಸನ್ ಗೋರ್ಡನ್ನನ ಪ್ರತಿಮೆ'[೩೦](ಅಠಾರಾ ಕಛೇರಿಯ ಮುಂಗಡ ಇದೆ) ಉಲ್ಲೇಖನೀಯ. ಮೈಸೂರಿನ ಸ್ವಾಚ್ಯೂ ಚೌಕದ ಚಾಮರಾಜ ಒಡೆಯರ ಪ್ರತಿಮೆಯನ್ನು ಖ್ಯಾತ ಇಂಗ್ಲಿಷ್ ಶಿಲ್ಪಿ ಅನ್‌ಸ್ಲೋಪೋರ್ಡ್ ಶಿಲ್ಪಿಸಿದ್ದು ಐರೋಪ್ಯ ಶೈಲಿಯ ಶಿಲ್ಪಕಲೆಗೆ ಒಳ್ಳೆಯ ಉದಾಹರಣೆಯಾಗಿದೆ. ಮೈಸೂರಿನ ಅರಮನೆ, ಜಗನ್ಮೋಹನ ಚಿತ್ರಶಾಲೆ, ಬೆಂಗಳೂರು ವಸ್ತುಸಂಗ್ರಹಾಲಯ ಮುಂತಾದೆಡೆಗಳಲ್ಲಿರುವ ಕೆಲವು ಐರೋಪ್ಯ ಶೈಲಿಯ ಶಿಲ್ಪ, ಕಲಾಕೃತಿಗಳನ್ನು ನೋಡಬಹುದು.

ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ ಜಿಲ್ಲೆಗೆ ಪ್ರಥಮ ಕಲೆಕ್ಟರ್ ಆಗಿ ಕಾರ್ಯನಿರ್ವಹಿಸಿದ ಸರ್. ಥಾಮಸ್ ಮನ್ರೋ ಕರ್ನೂಲು ಜಿಲ್ಲೆಯ ಪತ್ತಿಕೊಂಡ ತಾಲೂಕು ಪಟ್ಟಣದ ಆಂಜನೇಯ ದೇವಸ್ಥಾನದ ಪಕ್ಕದಲ್ಲಿ "ಮನ್ರೋ ತೋಟ್ಲು" ಎಂದು ಕರೆಯಲ್ಪಡುವ ಸ್ಥಳದಲ್ಲಿ ತಂಗಿದ್ದು, ಅಲ್ಲಿ ಅವರು ಬರಗಾಲದ ಸಂದರ್ಭದಲ್ಲಿ ಕುಡಿಯುವ ನೀರಿಗಾಗಿ, ಒಂದು ಬಾವಿ, ನೀರಾವರಿಗಾಗಿ, ಕಾಲುವೆಗಳು, ರಸ್ತೆ-ಸಾರಿಗೆ, ಕಂದಾಯ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ಜಾರಿಗೊಳಿಸಿದ್ದನು.

ಇಲ್ಲಿ ಥಾಮಸ್ ಮನ್ರೋ ಕಾರ್ಯನಿರ್ವಹಿಸಿದ ನೆನಪಿಗಾಗಿ ಪತ್ತಿಕೊಂಡದ ರೈತರು ತಾಲೂಕು ಕಂದಾಯ ಕಚೇರಿಯ ಮುಂಭಾಗದ ಬಾಗಿಲಿನ ಎಡಭಾಗದ ಗೋಡೆಯಲ್ಲಿ ಮನ್ರೋ ಅವರ ಮೂರ್ತಿಶಿಲ್ಪವನ್ನು ಕೆತ್ತಿಸಿ, ಗೋಡೆಗೆ ಅಳವಡಿಸಿರುವುದು ಕಂಡುಬಂದಿದೆ. ಈ ಶಿಲ್ಪದ ಕೆಳಭಾಗದಲ್ಲಿ ತಾಮ್ರದ ಪಟ್ಟಿಕೆಯಲ್ಲಿ ನಾಲ್ಕು ಸಾಲು ಇಂಗ್ಲಿಷ್ ಲಿಪಿ ಮತ್ತು ಮೂರು ಸಾಲು ತೆಲುಗು ಲಿಪಿಯನ್ನು ಕೊರೆದಿರುವುದನ್ನು ಗಮನಿಸಲಾಗಿದೆ.

೧೯೪೦ರಲ್ಲಿ ಮದ್ರಾಸ್ ಸರ್ಕಾರ ತುಂಗಭದ್ರಾ ಯೋಜನೆಯನ್ನು ಕೈಗೆತ್ತಿಕೊಂಡಿತು. ಆಗಿನ ಮುಖ್ಯ ಇಂಜನಿಯರ್ ತಿರುಮಲೆ ಅಯ್ಯಂಗಾರ್ ನೇತೃತ್ವದಲ್ಲಿ ಒಂದು ವಸ್ತುನಿಷ್ಠ ಕಾರ್ಯ ಯೋಜನಾ ವರದಿ ತಯಾರಿಸಲು ನೇಮಿಸಲಾಯಿತು. ಆದರೆ, ಈ ಪ್ರದೇಶವು ಹೈದರಾಬಾದಿನ ನಿಜಾಮನ ವ್ಯಾಪ್ತಿಯಲ್ಲಿದ್ದ ಕಾರಣಕ್ಕಾಗಿ ನಿಜಾಮರ ಸರ್ಕಾರ ಸಿ.ಸಿ. ದಲಾಲ್ ಎಂಬ ಇಂಜಿನಿಯರ್‌ನ್ನು ನೇಮಿಸಿ ಪ್ರತ್ಯೇಕ ವರದಿ ಸಿದ್ಧಪಡಿಸಿ, ಸಲ್ಲಿಸಿತ್ತು. ಈ ಎರಡೂ ವರದಿಗಳನ್ನು ಅಳೆದು ತೂಗಿ ನೋಡಿದ ಬ್ರಿಟಿಷ್ ಸರ್ಕಾರ ೧೯೪೨ರಲ್ಲಿ ತಿರುಮಲೆ ಅಯ್ಯಂಗಾರ್ ನೀಡಿದ ವರದಿಯೇ ಅತ್ಯಂತ ಪ್ರಾಶಸ್ತ್ಯವಾದುದು ಎಂದು ನಿರ್ಧರಿಸಿ, ಈಗಿನ ಹೊಸಪೇಟೆ ಹತ್ತಿರ ಆಗ ಇದ್ದ ಮಲ್ಲಾಪುರದ ಬಳಿ ೧೩೩ ಟಿಎಂಸಿ ಸಂಗ್ರಹ ಸಾಮರ್ಥ್ಯದ ಅಣೆಕಟ್ಟು ನಿರ್ಮಾಣ ಆರಂಭಿಸಿದ್ದರು. ಅದು ೧೯೫೩ರಲ್ಲಿ ಪೂರ್ಣಗೊಂಡು ಕಾಲುವೆಗಳಿಗೆ ನೀರು ಹರಿಸಲಾಯಿತು. ಬಳ್ಳಾರಿ, ರಾಯಚೂರು, ಅನಂತಪುರ, ಕರ್ನೂಲು, ಮೆಹಬೂಬ್ ನಗರದ ಸುಮಾರು ೧೬ ಲಕ್ಷ ಎಕರೆ ಜಮೀನಲ್ಲಿ ಭತ್ತ, ಕಬ್ಬು, ಬಾಳೆ ಬೆಳೆಯಲಾಗುತ್ತಿದೆ. ಇದರಿಂದ ಅನೇಕ ಸಕ್ಕರೆ ಕಾರ್ಖಾನೆಗಳು, ಅಕ್ಕಿ ಗಿರಣಿಗಳು, ವಿವಿಧ ಕೈಗಾರಿಕೋದ್ಯಮಗಳು ಬೆಳವಣಿಗೆ ಯಾದವು. ಈ ಸಮೃದ್ಧಿಗೆ ಕಾರಣಕರ್ತರಾದ ತಿರುಮಲೆ ಅಯ್ಯಂಗಾರ್ ಅವರ ಪ್ರತಿಮೆಯನ್ನು ಕೆಲ ರೈತರು ಸೇರಿ ಅಣೆಕಟ್ಟಿನ ಬಲದಂಡೆಯಲ್ಲಿ ನಿರ್ಮಿಸಿದ್ದಾರೆ. ಟಿ.ಬಿ. ಡ್ಯಾಮ್ ಜನವಸತಿ ಪ್ರದೇಶದಲ್ಲಿ ನಿರ್ಮಿಸಿದ ಸಮುದಾಯ ಭವನಕ್ಕೆ ತಿರುಮಲೆ ಅಯ್ಯಂಗಾರ್ ಹಾಲ್ ಎಂದು ಹೆಸರಿಸಲಾಗಿದೆ.

**ಕಲಾಕೃತಿಗಳು** : ಕರ್ನಾಟಕ ಕಲಾ ಪರಂಪರೆಯಲ್ಲಿ ವಾಸ್ತು ಮತ್ತು ಶಿಲ್ಪಕ್ಕೆ ಪ್ರಮುಖ ಸ್ಥಾನವಿದೆ. ವಾಸ್ತು ಶಿಲ್ಪ, ಚಿತ್ರ ಮುಂತಾದ ಕಲಾ ಪ್ರಕಾರಗಳು ನಮ್ಮ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿವೆ. ಪ್ರತಿಮೆಗಳು ಮತ್ತು ಉಬ್ಬುಶಿಲ್ಪಗಳಿಂದ ದೇವಮಂದಿರವನ್ನು ಸುಂದರ ಗೊಳಿಸುವುದು ಪ್ರಾಥಮಿಕವಾಗಿ ಶಿಲ್ಪಿಯ ಕೆಲಸವಾಗಿತ್ತು; ಮನೆಯಲ್ಲಿ ಧಾರ್ಮಿಕ ಭಾವನೆಯನ್ನು ಬೆಳೆಸುವುದಕ್ಕಾಗಿ ವಿಗ್ರಹಗಳು ಅಥವಾ ಮೂರ್ತಿಗಳನ್ನು ಮಾಡಬೇಕಾಗಿತ್ತು; ಅದಾದ ಮೇಲೆ, ಸಹಾಯ ಮತ್ತು ಸಂಪತ್ತು ಉಳಿದರೆ, ಲೌಕಿಕ ವ್ಯಕ್ತಿಗಳ ಪ್ರತಿರೂಪವನ್ನು ಕೆತ್ತುವುದು ಇಲ್ಲವೆ ಐಹಿಕ ವಸ್ತುಗಳನ್ನು ಸಿಂಗಾರಗೊಳಿಸುವುದಾಗಿತ್ತು. ಚರ್ಚಿನ ಶಿಲ್ಪಕಲೆಯಲ್ಲಿ ಕಲ್ಲು, ಅಮೃತಶಿಲೆ, ಹಾಲುಗಲ್ಲು, ಕಂದುಕುಂಚು ಇಂಥ ಯಾವುದೋ ಶಾಶ್ವತ ವಸ್ತು ಆಯ್ಕೆಯಾದ ಸಾಮಗ್ರಿ ಯಾಗಿರುತ್ತಿತ್ತು; ಇಲ್ಲಿಯೂ ಕ್ರಿಸ್ತನ ಜೀವನ ಹಾಗೂ ಬೈಬಲ್ ಸಂಗತಿಗಳೇ ಹೆಚ್ಚಿನ ಶಿಲ್ಪಗಳ

ವಸ್ತುಗಳಾಗಿವೆ. ಕ್ರೈಸ್ತ ಧಾರ್ಮಿಕ ಕಲೆಯಲ್ಲಿ ಇದ್ದಂತೆ ಪ್ರತಿಮೆಗಳನ್ನು ಬಣ್ಣದಿಂದ ಚಿತ್ರಿಸುತ್ತಿದ್ದರು. ಅವು ಸಾಮಾನ್ಯವಾಗಿ ಆದರ್ಶವಾಗಿರುವುದಕ್ಕಿಂತ ಹೆಚ್ಚಾಗಿ, ವಾಸ್ತವಿಕವಾಗಿರುತ್ತಿದ್ದವು. ಪ್ರತಿಮೆಯ ಮೂಲಕ ಸಂತನ ಇರವನ್ನು ಭಕ್ತಿ ಅನುಭವಿಸುತ್ತಿದ್ದ; ಈ ಉದ್ದೇಶ ಎಷ್ಟು ಚೆನ್ನಾಗಿ ಈಡೇರಿತೆಂದರೆ, ಹಳೆಯ ಮತಗಳ ಭಕ್ತನಂತೆ ಈ ಪ್ರತಿಮೆಗಳಿಂದ ಕ್ರೈಸ್ತ ಭಕ್ತ ಪವಾಡಗಳನ್ನು ನಿರೀಕ್ಷಿಸಿ, ಆಶೀರ್ವಾದಿಸಲು ಹಾಲುಗಲ್ಲಿನ ಕ್ರಿಸ್ತಮೂರ್ತಿಯ ತೋಳು ಚಲಿಸಿತು ಅಥವಾ ಮರದ ಗೊಂಬೆಯ ಮೇರಿ ಕನ್ನೆ ಎದೆ ಹಾಲು ನೀಡಿದಳು ಎಂದರೆ ಅವನು ಸ್ವಲ್ಪವೂ ಅನುಮಾನ ಪಡುತ್ತಿರಲಿಲ್ಲ'.[೯]

ಬಳ್ಳಾರಿ ಜಿಲ್ಲೆಯು ಚಿತ್ರಕಲೆಗೆ ಪ್ರೋತ್ಸಾಹ ನೀಡಿ ಅಪಾರ ಸಂಖ್ಯೆಯ ಕಲಾಕೃತಿಗಳನ್ನು ರಕ್ಷಿಸುವ ಕೆಲಸವೂ ನಡೆದಿದೆ. ನಗರದಲ್ಲಿರುವ ಸಂತ ಮೇರಿ ಚರ್ಚ್‌ನಲ್ಲಿ ಕೆಲವು ಕಲಾಕೃತಿಗಳನ್ನು ರಚಿಸಿ ಸಂರಕ್ಷಿಸಿರುವುದನ್ನು ಗಮನಿಸಲಾಗಿದೆ. ಇಲ್ಲಿ ಕಲಾಕೃತಿಗಳಿಗಾಗಿಯೇ ಪ್ರತ್ಯೇಕವಾದ ಆಧುನಿಕ ಕಲಾ ಗ್ಯಾಲರಿಯನ್ನು ನಿರ್ಮಿಸಲಾಗಿದೆ. ಅದರಲ್ಲಿ ಹೆಚ್ಚಿನ ವರ್ಣಚಿತ್ರಗಳು, ತೈಲ ಚಿತ್ರಗಳು, ಗೋಡೆಯ ಮೇಲೆ ಪ್ರದರ್ಶಿಸಲಾಗಿದೆ. ಈ ಕಲಾಕೃತಿಗಳು ಧಾರ್ಮಿಕ ಹಿನ್ನೆಲೆಯಲ್ಲಿ ರಚಿಸಲ್ಪಟ್ಟಿರುವ ಆಕೃತಿಗಳಾಗಿವೆ. ಕಲಾವಿದರ ಕಲಾಕೃತಿಗಳ ಪ್ರದರ್ಶನಕ್ಕೆ ಶಾಶ್ವತವಾದ ಒಂದು ವ್ಯವಸ್ಥೆಯನ್ನೇ ಕಲಾ ಪ್ರದರ್ಶನಾಲಯ ಅಥವಾ ಕಲಾ ಗ್ಯಾಲರಿ ಎಂದು ಸಾಮಾನ್ಯವಾಗಿ ಕರೆಯಲಾಗುತ್ತಿದೆ. ಇಲ್ಲಿ ಕಲಾ ಪ್ರದರ್ಶನದೊಂದಿಗೆ ಕಲಾಕೃತಿಯನ್ನು ನೋಡುವ, ವಿಮರ್ಶಿಸುವ, ಜೊತೆಯಲ್ಲಿ ಅನೇಕ ಕಲಾ ಶಿಬಿರ, ಕಲಾ ಪ್ರಾತ್ಯಕ್ಷಿಕೆಗಳನ್ನು, ವಿಚಾರ ಸಂಕಿರಣಗಳನ್ನು, ಸಂಗೀತ ಗಾಯನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದರಿಂದ ಚಿತ್ರಶಿಲ್ಪ, ಕಲಾಕ್ಷೇತ್ರದ ಬೆಳವಣಿಗೆಗೆ ಉತ್ತಮವಾದ ವೇದಿಕೆಯಾಗಿ ಕಲಾಗ್ಯಾಲರಿಗಳು ಇಲ್ಲಿ ಕೆಲಸ ಮಾಡುತ್ತಿದೆ.

**ಕೊನೆ ಟಿಪ್ಪಣಿಗಳು**

೧. ಕೃಷ್ಣಶೆಟ್ಟಿ ಚಿ.ಸು., ೨೦೦೮, ಕಲೆ ಎಂದರೇನು? ಎಂ.ಎಚ್. ಕೃಷ್ಣಯ್ಯ(ಸಂ), **ಕಲೆ ಮತ್ತು ರಸಾಸ್ವಾದನೆ,** ಪುಟ ೧೮.

೨. ಲಿಯೋ ಟಾಲ್ ಸ್ಟಾಯ್(ಮೂಲ), ಸಿ.ಪಿ. ಕೃಷ್ಣಕುಮಾರ್(ಅನು), ೨೦೧೩, **ಕಲೆ ಎಂದರೇನು?** ಪುಟ ೨೬.

೩. ಮಲ್ಲಿಕಾರ್ಜುನ ಸಿ. ಬಾಗೋಡಿ, ೨೦೦೯, **ಚಿತ್ರಕಲೆ,** ಪುಟ ೫೭.

೪. ಮರಿಶಾಮಾಚಾರ್ ಎನ್., ೨೦೦೯, **ಕಲಾದಿಗ್ಗಜರು,** ಪುಟ ೧೮೩.

೫. ಅದೇ, ಪುಟ ೧೯೨.

೬. ಉಪಾಧ್ಯ ಡಿ.ಎ., ೨೦೦೧, **ಪಾಶ್ಚಾತ್ಯ ದೃಶ್ಯಕಲೆಗಳು,** ಪುಟ ೩೩.

೭. ಅದೇ, ಪುಟ ೪೯.

೮. ಅದೇ, ಪುಟ ೪೯.

೯. ಅದೇ, ಪುಟ ೫೦.

೧೦. ಅದೇ, ಪುಟ ೫೧.

೧೧. ಅದೇ, ಪುಟ ೫೧.

೧೨. ಅದೇ, ಪುಟ ೫೩.

೧೩. ಅದೇ, ಪುಟ ೪೬.

೧೪. ಅಶೋಕ ಟಿ. ಅಕ್ಕಿ, ೧೯೮೭, **ಕಲಾ ಚರಿತ್ರೆ,** ಪುಟ ೫೬.

೧೫. ಕಾಳೆ ವಿ.ಟಿ., ೨೦೦೭, **ಚಿತ್ರಕಲಾ ದರ್ಪಣ,** ಪುಟ ೬೨.

೧೬. ಉಪಾಧ್ಯ ಎ., ೨೦೧೧, **ಪೂರ್ವೋಕ್ತ,** ಪುಟ ೭೧.

೧೭. ಅದೇ, ಪುಟ ೭೩ ಮತ್ತು ೭೪.

೧೮. ಎಚ್. ತಿಪ್ಪೇರುದ್ರಸ್ವಾಮಿ, ೨೦೦೧, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪುಟ ೬೫೪.

೧೯. ಅರುಣಿ ಎಸ್.ಕೆ., ೨೦೦೧, **ದಖನಿ ಚಿತ್ರಕಲೆ,** ಪುಟ ೧೧೭ ಮತ್ತು ೧೧೮.

೨೦. ಅದೇ, ಪುಟ ೧೧೯.

೨೧. ತಿಪ್ಪೇಸ್ವಾಮಿ ಪಿ.ಆರ್., ೧೯೮೫, **ಕರ್ನಾಟಕದಲ್ಲಿ ಚಿತ್ರಕಲೆ,** ಹೆಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಸಂ), **ಅವಲೋಕನ,** ಪುಟ ೩೩೪.

೨೨. ಕಾಳೆ ವಿ.ಟಿ., ೨೦೦೭, **ಪೂರ್ವೋಕ್ತ,** ಪುಟ ೧೦೨.

೨೩. ಅದೇ, ಪುಟ ೧೦೩.

೨೪. ಅದೇ, ಪುಟ ೧೦೩.

೨೫. ರಹಮತ್ ತರೀಕೆರೆ(ಸಂ), ೨೦೦೦, **ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ: ೩, ಧರ್ಮ,** ಪುಟ ೧೧೪.

೨೬. ಅರುಣಿ ಎಸ್.ಕೆ., ೨೦೦೧, **ಪೂರ್ವೋಕ್ತ,** ಪುಟ ೧೧೯.

೨೭. ಅದೇ, ಪುಟ ೧೧೯ ಮತ್ತು ೧೨೦.

೨೮. ರಹಮತ್ ತರೀಕೆರೆ(ಸಂ), ೨೦೦೦, **ಪೂರ್ವೋಕ್ತ,** ಪುಟ ೧೧೪.

೨೯. ವೆಂಕಟಾಚಲಪತಿ, ೨೦೧೦, **ಆಧುನಿಕ ಶಿಲ್ಪಕಲೆ,** ಎಂ.ಎಚ್. ಕೃಷ್ಣಯ್ಯ(ಸಂ), **ಕರ್ನಾಟಕ ಕಲಾದರ್ಶನ, ಸಂಪುಟ-ಒಂದು,** ಪುಟ ೨೫೩ ಮತ್ತು ೨೫೪.

೩೦. ರಘುನಾಥಭಟ್ ಎಚ್.ಆರ್., ೧೯೮೫, **ಐರೋಪ್ಯ ವಾಸ್ತುಶಿಲ್ಪ,** ಹೆಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, **ಅವಲೋಕನ,** ಪುಟ ೧೨೭.

೩೧. ವಿಲ್ ಡ್ಯೂರಾಂಟ್(ಮೂಲ), ಪ್ರಧಾನ ಗುರುದತ್ತ(ಅನು), (ಪ್ರ.ಸಂ.), ನಾಗರಿಕತೆಯ **ಕಥೆ-೪, ಧರ್ಮಶ್ರದ್ಧೆಯ ಯುಗ,** ಪುಟ ೧೧೫೦ ಮತ್ತು ೧೧೫೧.



## ಅಧ್ಯಾಯ : ಐದು

# ತಂತ್ರಜ್ಞರು ಮತ್ತು ಶ್ರಮಿಕರು

### ೫.೧. ತಂತ್ರಜ್ಞರು

ನಾಗರಿಕತೆಯು ಜನನವಾದದ್ದೇ ಯಂತ್ರ ಶಿಲ್ಪದಿಂದ ಎನ್ನಬಹುದು. ಅಷ್ಟೇ ಏಕೆ, ವಿಶ್ವದ ಮೊಟ್ಟಮೊದಲ ಮಾನವನೇ ಒಬ್ಬ ಎಂಜಿನಿಯರನಾಗಿದ್ದನೆಂದರೂ ತಪ್ಪಾಗದು. ಏಕೆಂದರೆ, ಮನುಷ್ಯರು ಅನಾಗರಿಕ ಸ್ಥಿತಿಯಿಂದ ನಾಗರಿಕ ಸ್ಥಿತಿಗೆ ಬರುವುದರೊಳಗಾಗಿಯೇ ನಿತ್ಯಜೀವನಕ್ಕೆ ಬೇಕಾದ ಅನೇಕ ಸಾಧನ, ಸಾಮಗ್ರಿಗಳನ್ನು ಕಂಡುಹಿಡಿದಿದ್ದರು. ತಮ್ಮ ವಾಸಕ್ಕಾಗಿ ಗುಡಿಸಲುಗಳನ್ನು ಕಟ್ಟಿದ್ದಾರೆ. ಗವಿಗಳನ್ನು ನಿರ್ಮಿಸಿದ್ದುಂಟು; ತೊಗಲಿನ ಗುಡಾರಗಳನ್ನೂ ಕಟ್ಟಿದ್ದುಂಟು. ತಮ್ಮ ಆಹಾರ ಸಂಪಾದನೆಗಾಗಿ - ಬಿಲ್ಲು, ಬಾಣ, ಕವಣೆ ಮೊದಲಾದ ಸಾಧನಗಳನ್ನು ನಿರ್ಮಿಸಿದ್ದಾನೆ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿ ಬರುವುದಕ್ಕೆ ಹಾದಿಗಳನ್ನು ಕಡಿದಿದ್ದಾರೆ. ದಾರಿಯಲ್ಲಿನ ಗಿಡ, ಮರ ಸವರಿದ್ದಾರೆ, ನೆಲ ಸರಿಪಡಿಸಿದ್ದಾರೆ. ದಾರಿಗೆ ಅಡ್ಡಬರುವ ಹಳ್ಳಗಳಿಗೆ ಚಿಕ್ಕ ಪುಟ್ಟ ಸೇತುವೆಗಳನ್ನು ನಿರ್ಮಿಸಿದ್ದಾರೆ. ಅವರು ಇಷ್ಟೆಲ್ಲ ಕೆಲಸಗಳನ್ನು ಮಾಡಿದ ಕಾಲದಲ್ಲಿ, ಪ್ರತ್ಯೇಕವಾಗಿ 'ಎಂಜಿನಿಯರಿಂಗ್' ಎಂಬ ವಿದ್ಯೆಯನ್ನೇನೂ ಕಲಿತವರಲ್ಲ. ಆದರೂ ಅನೇಕ ಪ್ರಯೋಗಗಳಿಂದ, ಅವರು ತಮ್ಮ ಸುತ್ತಲಿರುವ ವಸ್ತುಗಳ ವಿವಿಧ ಭೌತಗುಣಗಳನ್ನು ತಿಳಿದುಕೊಂಡಿದ್ದರು. ಚಲನೆಗಳನ್ನು ಕಂಡು, ಪರಿಶೀಲಿಸಿ, ಅದರ ಅನೇಕ ಲಕ್ಷಣಗಳನ್ನು ತಿಳಿದುಕೊಂಡಿದ್ದಾರೆ. ಹೀಗೆ ತಾವು ಪಡೆದ ಅನುಭವಗಳಿಂದ ಗಾಲಿ(Wheel)ಯಂತಹ ಒಂದು ಯಂತ್ರ ಸಾಧನವನ್ನು, ತಿರುಗಣೆ(Screw), ಇಳುಕಲ್ಲು(Inclined Plane), ಸನ್ನೆ(Lever), ಕಪ್ಪಿ(Pulley) ಮೊದಲಾದ ಇತರ ಯಂತ್ರ ಸಾಧನಗಳನ್ನು ರಚಿಸಿದರು, ಬಳಸಿದರು. ಕಾಲನಂತರದಲ್ಲಿ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಲು ಶಕ್ತರಾದರು. ಬಾವಿ ತೋಡಿದರು, ಕೆರೆಗಳನ್ನು ಕಟ್ಟಿದರು, ಒಡ್ಡುಗಳನ್ನು ನಿರ್ಮಿಸಿದರು, ಕಾಲುವೆಗಳನ್ನು ಕಡಿದರು, ಇಟ್ಟಿಗೆಯನ್ನು ಸುಟ್ಟರು, ಮರಗಳನ್ನು ಕಡಿದು, ಕೆತ್ತಿದರು; ಅವುಗಳಿಂದ ಮನೆಗಳನ್ನು ಕಟ್ಟಿದರು; ಕ್ರಿ.ಪೂ.ದಿಂದಲೇ ದೊಡ್ಡ ದೇವಾಲಯಗಳನ್ನು, ಅರಮನೆಗಳನ್ನೂ, ಕೋಟೆಗಳನ್ನೂ ರಚಿಸಿ ತಮ್ಮ ಸಮಕಾಲೀನರನ್ನು ಬೆರಗುಗೊಳಿಸಿದ್ದುಂಟು. ಉದಾ:- ಈಜಿಪ್ಟಿನ ಪಿರಮಿಡ್ಡುಗಳಾಗಲೀ, ಚೀನಾ ದೇಶದ ಮಹಾಗೋಡೆ ಯಾಗಲೀ, ಅಲ್ಲಿಯ ಪುರಾತನ ಕಾಲುವೆಗಳಾಗಲೀ, ನಮಗೆ ಅಂದಿನ ನಾಗರಿಕತೆಯ ಮಟ್ಟವನ್ನು

ತೋರಿಸುತ್ತದೆ. ರೋಮನ್ನರು ಕಟ್ಟಿಸಿದ ಹೆದ್ದಾರಿಗಳೂ ಮೇಲ್ಗಾಲುವೆ ಅವರ ದಕ್ಷತೆ, ಬುದ್ಧಿವಂತಿಕೆಗಳಿಗೆ ಇಂದಿಗೂ ಸಾಕ್ಷ್ಯಗಳಾಗಿವೆ. ಭಾರತದ ಹರಪ್ಪ, ಮೆಹೆಂಜೋದಾರೋ ಮುಂತಾದೆಡೆಗಳಲ್ಲಿ ದೊರೆತಿರುವ ಅವಶೇಷಗಳೂ ಭಾರತೀಯರ ವಾಸ್ತುಶಿಲ್ಪ, ನಗರ ನಿರ್ಮಾಣ ಕಲೆಗೆ ಸಾಕ್ಷ್ಯಗಳಾಗಿವೆ. ಪ್ರಸ್ತುತ ನಾವೂ ಅವರು ಸಾಧಿಸಿದ ಅದ್ಭುತ ವಾಸ್ತುವಿನ್ಯಾಸ ರಚನೆಗಳನ್ನು ಕಂಡು ಬೆರಗುಗೊಳ್ಳುತ್ತಿದ್ದೇವೆ. ಇದಕ್ಕೆ ಕಾರಣ ಈ ದಾಖಲೆಗಳೆಲ್ಲ ಹೆಚ್ಚಾಗಿ ಎಂಜಿನಿಯರಿಂಗ್‌ಗೇ ಸಂಬಂಧಿಸಿದ್ದು ಅಥವಾ ವಾಸ್ತುವಿನ್ಯಾಸ ರಚನಾ ತಂತ್ರಗಳಿಂದಾದ್ದು. ಗೃಹನಿರ್ಮಾಣ, ರಸ್ತೆ, ಸೇತುವೆ, ಒಡ್ಡು, ನಗರ ಯೋಜನೆ, ನೀರಾವರಿ ಮುಂತಾದವು ಪ್ರಾಚೀನ ಭಾರತೀಯರಿಗೆ ಬಹುಮಟ್ಟಿಗೆ ತಿಳಿದಿದ್ದಿತೆಂಬುದು ವೇದ. ಪುರಾಣ ಇತಿಹಾಸ ಗ್ರಂಥಗಳಿಂದಲೂ ತಿಳಿದುಬರುತ್ತದೆ.

ಪ್ರತಿಮೆಗಳನ್ನು ನಿರ್ಮಿಸುವಂಥ ಕಲೆಯನ್ನು ಶಿಲ್ಪ ಎಂದು ಕರೆಯುತ್ತಾರೆ. ವಾಸಕ್ಕೆ ಯೋಗ್ಯವಾದ ಮಂದಿರಗಳನ್ನು ವಾಸ್ತುಗಳು ಎಂದು ಕರೆಯುವ ವಾಡಿಕೆಯಿದೆ. ಅಂಥ ನಿರ್ಮಾಣ ಮಾಡುವವರನ್ನು ವಾಸ್ತುಶಿಲ್ಪಿ ಎನ್ನುತ್ತಾರೆ. ಉದಾ: ಕರ್ನಾಟಕದಲ್ಲಿ ನಿರ್ಮಾಣಗೊಂಡ ಯಾವುದೇ ಪುರಾತನ ದೇವಾಲಯವನ್ನು ಕಂಡರೂ, ಅದನ್ನು ಯಾರು ನಿರ್ಮಿಸಿದ್ದಾರೆ ಎಂದು ಅಲ್ಲಿನ ಸ್ಥಳೀಯರನ್ನು ಕೇಳಿದರೆ, ಈ ದೇಗುಲವನ್ನು ಜಕಣಾಚಾರಿ ಎಂಬ ಶಿಲ್ಪಿಯಿಂದ ನಿರ್ಮಾಣಗೊಂಡಿದೆ ಎಂಬ ಅಭಿಪ್ರಾಯವಿದೆ. ಆದರೆ, ಆಧುನಿಕ ಕಾಲಾವಧಿಯಲ್ಲಿ ಒಂದು ನಿಶ್ಚಿತ ಸ್ಥಳದಲ್ಲಿ, ನೆಲದ ಮೇಲೆ ವಿವಿಧ ಸಾಮಗ್ರಿಗಳಿಂದ ಕಟ್ಟುವುದರಿಂದ ಅವುಗಳಿಗೆ 'ಕಟ್ಟಡ' ಎಂಬ ಸಾಮಾನ್ಯ ಹೆಸರೂ ಸಲ್ಲುತ್ತದೆ. ಒಂದು ದೇಗುಲವನ್ನೋ, ಮನೆಯನ್ನೋ, ನಮ್ಮ ಕೆಲಸಗಳಿಗಾಗಿ ಬಳಸುವ ಇನ್ನಾವುದೇ ಕಟ್ಟಡವನ್ನೋ ನಾವು ಎರಡು ದೃಷ್ಟಿಗಳಿಂದ ಕಾಣುವುದು ಸಾಧ್ಯ. ನಾವು ಆ ಕಟ್ಟಡವನ್ನು ಯಾವ ಉದ್ದೇಶಕ್ಕಾಗಿ ನಿರ್ಮಿಸುತ್ತೇವೋ, ಆ ಪ್ರಯೋಜನವನ್ನು ಸಾಧಿಸುವುದು ಒಂದು ದೃಷ್ಟಿ. ಕೇವಲ ಅದೊಂದೇ ದೃಷ್ಟಿಯಿಂದ ಕೆಲಸ ಮಾಡುವವರನ್ನು 'ಎಂಜಿನಿಯರ್' ಎಂದು ಕರೆಯುವುದುಂಟು. ಅಂಥ ಕೆಲಸ ಮಾಡಿಸುವವನಲ್ಲಿ, ಆ ಕಟ್ಟಡಗಳಿಗೆ ಸಂಬಂಧಪಟ್ಟ ಆಯ, ಅಳತೆಗಳ ಜ್ಞಾನವಿರಬೇಕು; ಅದಕ್ಕೆ ಬಳಸುವ ಸಾಮಗ್ರಿಗಳ ಎಂದರೆ, ಇಟ್ಟಿಗೆ, ಕಲ್ಲು, ಮರ, ಕಬ್ಬಿಣ, ಸಿಮೆಂಟ್, ಹುರಳು ಮೊದಲಾದ ವಸ್ತುಗಳ ಪರಿಚಯವೂ ಇರಬೇಕು. ಅಂಥ ಒಬ್ಬ ಎಂಜಿನಿಯರ್‌ನು ಬಡಗಿಗಳ, ಕಮ್ಮಾರರ ಸಹಾಯದಿಂದ ತಾನು ಉದ್ದೇಶಿಸುವ ಕಟ್ಟಡಕ್ಕೆ ಬೇಕಾದ ವಿವಿಧ ಕೆಲಸಗಳನ್ನು ಮಾಡಿಸಿಕೊಳ್ಳುವುದು. ಆತನ ಜವಾಬ್ದಾರಿಯಾಗಿರುತ್ತದೆ. ನಾವು ಇನ್ನೊಂದು ದೃಷ್ಟಿಯಿದೆ ಎಂದು ಹೇಳಿದೆವಲ್ಲ; ಅದು ಕೇವಲ ಪ್ರಯೋಜನವೊಂದರ ದೃಷ್ಟಿಯಲ್ಲ; ಬದಲು ಸೌಂದರ್ಯದ್ದು. ಒಂದು ನಿವಾಸದ ಮನೆಯೋ, ಅಂಗಡಿಯೋ, ಶಾಲೆಯೋ, ಸಿನಿಮಾ ಮಂದಿರವೋ, ಅದರೊಳಕ್ಕೆ ಸೇರುವ ಜನಗಳಿಗೆ ಹಿತಕರವಾಗಿರುವಂತೆ ರೂಪಿಸುವ ಕೆಲಸ ಒಂದಾದರೆ, ಅದೇ ಕಟ್ಟಡ, ನೋಡುವವರ ಕಣ್ಣಿಗೆ ಹೇಗೆ ಕಾಣಿಸಬೇಕು? ಅದರ ಆಕಾರವು ಹೇಗಿರಬೇಕು? ಸುಂದರವಾಗಿ ಕಾಣಿಸಬೇಕಾದರೆ ಅದರ ಗೋಡೆ, ಕಿಟಕಿ, ಬಾಗಿಲು, ಕಂಬಿ ಮೊದಲಾದುವುಗಳು ಹೇಗೆ ಒಂದನ್ನೊಂದು

ಪರಸ್ಪರ ಹೊಂದಿ ಕಾಣಿಸಬೇಕು? ಅವುಗಳ ಬಣ್ಣ ಹೇಗಿರಬೇಕು? ಎಂಬ ವಿಚಾರಗಳನ್ನು ಯೋಚಿಸುವ ದೃಷ್ಟಿಯೊಂದಿದೆ. ಅದೇ ಸೌಂದರ್ಯ ದೃಷ್ಟಿ. ಅಂಥ ದೃಷ್ಟಿಯಿಂದ ಒಂದು ಕಟ್ಟಡ ತೃಪ್ತಿಕವಾಗಿ ಕಾಣಿಸಿದರೆ ಮಾತ್ರವೇ ಅದನ್ನು ವಾಸ್ತುರಚನೆ ಎನ್ನುತ್ತಾರೆ. ಉತ್ತಮ 'ವಾಸ್ತುಕೃತಿ' ಎನ್ನಿಸಬೇಕಾದರೆ, ಪ್ರಯೋಜನದ ಜತೆಯಲ್ಲಿ ಸೌಂದರ್ಯ ದೃಷ್ಟಿಯೂ ಬೆರೆತಿರಬೇಕಾಗುತ್ತದೆ. ಈ ಬಗೆಯಲ್ಲಿ ಕಟ್ಟಡ ರಚನೆ ಮಾಡಬಲ್ಲವನನ್ನು ವಾಸ್ತುಶಿಲ್ಪಿ ಎಂದು ಹೇಳಬಹುದು. ಉದಾ: ಇಟಲಿಯ ರೋಮನ್ ಎಂಜಿನಿಯರ್ ಆಗಿದ್ದ 'ವಿಟ್ರೂವಿಯಸ್' ಎಂಬುವವರು ಗ್ರೀಕರ ವಾಸ್ತುರಚನೆಗಳನ್ನು ನೋಡಿ, ಅವುಗಳ ವಿಶೇಷ ಸೌಂದರ್ಯ ದೃಷ್ಟಿಯೂ ಬೆಳೆಸಿಕೊಂಡಿದ್ದರಿಂದ ತನ್ನ ಕಾಲಾವಧಿಯಲ್ಲಿ ಕಟ್ಟಿದ ಅರಮನೆಗಳು, ಹಾದಿಬೀದಿಗಳು, ದೇವಾಲಯಗಳು, ಸೇತುವೆಗಳು, ನೀರಾವರಿ, ನಿವಾಸಗಳ ನಿರ್ಮಾಣದ ಕೆಲಸ ಇಂದಿನ ತನಕವೂ ಸಾಕಷ್ಟು ಉಳಿದಿವೆಯಾದುದರಿಂದ ಪುರಾತನ ರೋಮನ್ ಇಂಜಿನಿಯರುಗಳ ಸಾಹಸವನ್ನು ಕಂಡು ನಾವು ಆಶ್ಚರ್ಯಪಡುತ್ತೇವೆ.

ಎಂಜಿನಿಯರ್ ಎಂದರೇನು? ಎಂಜಿನಿಯರ್ ಎಂಬ ಆಂಗ್ಲ ಪದದ ಅರ್ಥ- 'ಕಲ್ಪನೆ ಮಾಡು, ರಚಿಸು, ಆಗಿಸು, ಸಾಧಿಸು'[೧] ಎಂದರ್ಥ. ಸಾಮಾನ್ಯವಾಗಿ ಈ ಪದವನ್ನು ಕನ್ನಡ ಭಾಷೆಯಲ್ಲಿ ಇದ್ದಕ್ಕಿದ್ದಂತೆಯೇ ಬಳಸುತ್ತಿದ್ದಾರೆ. ಯಂತ್ರ ಶಕ್ತಿಯನ್ನು ಒದಗಿಸಬಲ್ಲ ಒಂದು ಸಾಧನವನ್ನು ನಾವು 'ಎಂಜಿನ್' ಎಂದು ಕರೆಯುತ್ತೇವೆ. ಅದನ್ನು ನಿರ್ಮಿಸುವವನು, ಸರಿಪಡಿಸುವವನು ಎಂಜಿನಿಯರ್ ಎನಿಸಿಕೊಂಡ. ಕಾಲನಂತರದಲ್ಲಿ ಇದೇ ಹೆಸರನ್ನು ಯಂತ್ರ ಸಾಧನಗಳ ತಂತ್ರಜ್ಞರಿಗೂ ಉಪಯೋಗಿಸತೊಡಗಿದರು. ಶಕ್ತ್ಯುತ್ಪನ್ನ ಯಂತ್ರಗಳಿಗೆ ಸಂಬಂಧಪಟ್ಟ ಕಾಮಗಾರಿಗಳನ್ನು ಎಂಜಿನಿಯರಿಂಗ್ ಎಂದು ಕರೆಯುವಂತೆಯೇ, ಇತರ ಅನೇಕ ವಿವಿಧ ನಿರ್ಮಾಣ ಕಾಮಗಾರಿಗಳನ್ನು ಕೂಡ ಎಂಜಿನಿಯರಿಂಗ್ ಎಂಬ ಪದದಿಂದ ಕರೆಯುತ್ತಿದ್ದಾರೆ. ಇಂದು ಕೇವಲ ಯಂತ್ರಗಳಿಗಷ್ಟೇ ಆ ಶಬ್ದವನ್ನು ಉಪಯೋಗಿಸುತ್ತಲಿಲ್ಲ; ಬದಲು, ನಾಗರಿಕ ಜೀವನಕ್ಕೆ ಬೇಕಾಗುವ ಕಟ್ಟಡಗಳ ರಚನೆ, ರಸ್ತೆಗಳ ನಿರ್ಮಾಣ, ಸೇತುವೆಗಳ ನಿರ್ಮಾಣ, ಒಡ್ಡು, ನೀರಾವರಿ, ಕಾಲುವೆಗಳ ನಿರ್ಮಾಣ ಇಂಥವೆಲ್ಲವನ್ನು ಎಂಜಿನಿಯರಿಂಗ್ ಎಂದು ಕರೆಯುತ್ತಾರೆ. ಯುದ್ಧಕ್ಕೆ ಸಂಬಂಧಪಟ್ಟ ಶಸ್ತ್ರಾಸ್ತ್ರಗಳ ರಚನೆಯನ್ನು, ಯುದ್ಧ ಕಾಲದಲ್ಲಿ ನಿರ್ಮಿಸುವ ಸೇತುವೆ ಮೊದಲಾದ ಕಾಮಗಾರಿಗಳನ್ನು 'ಮಿಲಿಟರಿ ಎಂಜಿನಿಯರಿಂಗ್' ಎಂದು ಕರೆಯುತ್ತಾರೆ. ಮನುಷ್ಯನ ನಿತ್ಯ ಜೀವನದ ಅವಶ್ಯಕತೆಗಳಿಗೆ ಒದಗುವ ಕಟ್ಟಡಗಳ ನಿರ್ಮಾಣವನ್ನು 'ಸಿವಿಲ್ ಎಂಜಿನಿಯರಿಂಗ್' ಎಂಬುದಾಗಿ ಕರೆಯುತ್ತಾರೆ.

ರಸ್ತೆ, ರೈಲ್ವೆ, ಸುರಂಗ, ಸೇತುವೆ, ಒಡ್ಡು, ವಾಸ್ತುರಚನೆ - ಇಂಥವುಗಳೆಲ್ಲವೂ 'ಸಿವಿಲ್ ಎಂಜಿನಿಯರಿಂಗ್' ಎಂಬ ಅರ್ಥಕ್ಕೆ ಒಳಗಾಗುತ್ತವೆ. ಇಂಥ ಕೆಲಸಗಳನ್ನು ನಿರ್ವಹಿಸುವ ಇಲಾಖೆಯನ್ನು 'ಎಂಜಿನಿಯರಿಂಗ್ ಇಲಾಖೆ' ಇಲ್ಲವೆ 'ಮರಾತ್ ಇಲಾಖೆ' ಎಂದು ಕರೆಯು ವುದುಂಟು. ಕಟ್ಟಡ, ಸೇತುವೆ, ನೌಕಾನಿಲ್ದಾಣ, ಒಡ್ಡು ಮೊದಲಾದವುಗಳು ಯಾವುದಾದರೂ

ಒಂದು ಸ್ಥಳದಲ್ಲಿ ಕಟ್ಟಲ್ಪಡುವ ರಚನೆಗಳಷ್ಟೆ. ಅವು ಇದ್ದಲ್ಲಿಂದ ಕದಲುವಂಥವಲ್ಲ. ಇದಕ್ಕೆ ಪ್ರತಿಯಾಗಿ, ಯಂತ್ರಗಳಿಗೆ ಸಂಬಂಧಪಟ್ಟ ಹಲವು ಸಾಧನಗಳಲ್ಲಿ ಯಂತ್ರ ಭಾಗಗಳು ಚಲಿಸುವುದನ್ನು ಕಾಣುತ್ತೇವೆ. ಹಾಗಾಗಿ ಯಾಂತ್ರಿಕ ಚಲನೆಗಳಿಗೆ ಸಂಬಂಧಪಟ್ಟ ತಂತ್ರಶಾಸ್ತ್ರವನ್ನು 'ಮೆಕೇನಿಕಲ್ ಎಂಜಿನಿಯರಿಂಗ್' ಎಂಬ ಮಾತಿನಿಂದ ಕರೆಯುತ್ತಾರೆ. ಯಂತ್ರಶಕ್ತಿಯನ್ನು ವಿದ್ಯುತ್ತನ್ನಾಗಿ ಪರಿವರ್ತಿಸುವ ಸಾಧನಗಳಿಗೆ ಸಂಬಂಧಪಟ್ಟ ಕಾಮಗಾರಿಗಳನ್ನು 'ಇಲೆಕ್ಟ್ರಿಕಲ್ ಎಂಜಿನಿಯರಿಂಗ್' ಎಂದು ಕರೆಯುತ್ತಾರೆ. ಹೀಗೆ ವಿಜ್ಞಾನದ ವಿವಿಧ ಮುಖಗಳು ಬೆಳೆದುಬಂದಿರುವ ಈ ಕಾಲಾವಧಿಯಲ್ಲಿ ಅವುಗಳ ಜ್ಞಾನವನ್ನು ವಿವಿಧ ತೆರನ ರಚನೆ, ಉತ್ಪನ್ನಗಳಿಗೆ ಬಳಸತೊಡಗಿದಂತೆ 'ಎಂಜಿನಿಯರಿಂಗ್' ಎಂಬ ಪದವು ಇನ್ನಷ್ಟು ವಿಸ್ತಾರವಾದ ಅರ್ಥವ್ಯಾಪ್ತಿಯನ್ನು ಪಡೆಯತೊಡಗಿತು.

ಪ್ರಸ್ತುತ ಎಂಜಿನಿಯರಿಂಗ್ ಸಹಾಯವಿಲ್ಲದೆ ಯಾವ ಕೆಲಸವೂ ನಡೆಯದು. ಅದ್ಭುತ ಯಂತ್ರ ಸಾಧನೆಗಳಿಂದ ಅತಿವೇಗದಲ್ಲಿ ಬಹುಮಹಡಿಯ ಕಟ್ಟಡಗಳನ್ನು ನಿರ್ಮಿಸುವುದಲ್ಲದೆ, ಮಾನವನನ್ನು ದೂರದ ಗ್ರಹಗಳಿಗೂ ಒಯ್ಯಲು ನೆರವಾಗುತ್ತಿರುವುದು ಎಂಜಿನಿಯರಿಂಗ್ ಶುದ್ಧ ವಿಜ್ಞಾನ(Pure Science)ದಿಂದ ಪ್ರಕೃತಿಯ ಬಗೆಗೆ ತಿಳಿವಳಿಕೆ ಹೆಚ್ಚಾದಂತೆಲ್ಲ ಆ ಶಕ್ತಿಗಳನ್ನು ಉಪಯೋಗಿಸಿಕೊಂಡು ಮಾನವನ ಸೌಕರ್ಯಗಳ ಅಭಿವೃದ್ಧಿ ಮಾಡಬೇಕಾದುದು ಯಂತ್ರಶಿಲ್ಪ-ಕುಶಲ ತಂತ್ರಜ್ಞರ ಕೆಲಸ. ಮಾನವನ ಇಂದಿನ ಬುದ್ಧಿಮತ್ತೆಯ ಫಲದಿಂದಾಗಿ ಈ ದಿಸೆಯಲ್ಲಿ ಇನ್ನೂ ಏನೇನು ಸೌಲಭ್ಯಗಳು ದೊರೆಯಬಹುದೋ ಯಾರಿಗೆ ಗೊತ್ತು?

'ಹದಿನೆಂಟನೆಯ ಶತಮಾನದ ಉತ್ತರಾರ್ಧದಿಂದ ಹಾಗೂ ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ಇಂಜಿನಿಯರುಗಳು ಭಾರತದ ಬೇರೆ ಬೇರೆ ನಗರಗಳಲ್ಲಿ ಅನೇಕ ಸಂಖ್ಯೆಯಲ್ಲಿ ಸಾರ್ವಜನಿಕ ಕಟ್ಟಡಗಳ ವಿನ್ಯಾಸ ತಯಾರಿಸಿ, ನಿರ್ಮಾಣ ಮಾಡಿದರು'.[೨] ಅವು ಸಾಮಾನ್ಯವಾಗಿ ಇಂಗ್ಲೆಂಡಿನಲ್ಲಿ ನಿರ್ಮಿಸಲಾಗಿದ್ದ ಸಮಕಾಲೀನ ಸಾಮೀಪ್ಯದ ಕಟ್ಟಡಗಳನ್ನನುಸರಿಸಿ ಭಾರತೀಯ ಪರಿಸ್ಥಿತಿಗೆ ಹೊಂದುವ, ಅಲಂಕಾರ ವಿನ್ಯಾಸ ರಚನಾ ವ್ಯವಸ್ಥೆಯಲ್ಲಿ ಬಹುಸುಂದರವಾಗಿ ಸಮ್ಮಿಶ್ರಿತಗೊಳಿಸಿ, ತುಸು ಮಾರ್ಪಾಟುಗಳೊಂದಿಗೆ ರೂಪಿತವಾಗಿದ್ದವು. 'ಅಂಥ ಕಟ್ಟಡಗಳಲ್ಲಿ ಕಲ್ಕತ್ತದ ಸೆಂಟ್ ಜಾನ್ಸ್ ಚರ್ಚ್(೧೭೮೭) ಹಾಗೂ ಗವರ್ನಮೆಂಟ್ ಹೌಸ್(೧೮೦೩)[೩] ಉಲ್ಲೇಖಾರ್ಹ. ಇವುಗಳಲ್ಲಿ ಮೊದಲನೆಯದು ಬೆಂಗಾಲ್ ಇಂಜಿನಿಯರ್ಸ್ ಗುಂಪಿನ ಲೆಫ್ಟಿನೆಂಟ್ ಆಗ್‌ನಿಂದ ವಿನ್ಯಾಸಗೊಳಿಸಲ್ಪಟ್ಟಿದ್ದು, ಪರ್ಸಿಬ್ರೌನ್ ಅವರ ಪ್ರಕಾರ ಅದು ವಾಲ್‌ಬ್ರೂಕ್‌ನಲ್ಲಿರುವ ಸೇಂಟ್ ಸ್ಟಿಫನ್ಸ್ ಚರ್ಚ್‌ನ ವಿನ್ಯಾಸವನ್ನಾಧರಿಸಿದೆ. 'ಕಲ್ಕತ್ತದ ಗವರ್ನ್‌ಮೆಂಟ್ ಹೌಸ್ ಕಟ್ಟಡವು ಲಾರ್ಡ್ ವೆಲ್ಲೆಸ್ಲಿಯ ಕಲ್ಪನೆಯ ಕೂಸು; ಅದರ ವಿನ್ಯಾಸವನ್ನು ಅದೇ ಇಂಜಿನಿಯರುಗಳ ಗುಂಪಿನ ಕ್ಯಾಪ್ಟನ್ ಚಾರ್ಲ್ಸ್ ವ್ಯಾಟ್ ತಯಾರಿಸಿದ್ದನು'.[೪] ಕಲ್ಕತಾ, ಬಾಂಬೆ, ಮದ್ರಾಸ್, ಹೈದರಾಬಾದ್ ಇತ್ಯಾದಿ ಪ್ರಾಂತಗಳಲ್ಲಿ ನಿರ್ಮಿಸಿದ ಪ್ರತಿಯೊಂದರ ಕಟ್ಟಡದಲ್ಲಿಯೂ ಮೂಲ ಕಲ್ಪನೆಯು ಪಶ್ಚಿಮದಿಂದ ಎರವಲು ಪಡೆದದ್ದು; ಅನೇಕ ಮೂಲಗಳಿಂದ ಅದನ್ನು ಸೆಳೆದಿರುವಂತೆ ತೋರುತ್ತದೆ. ಇಲ್ಲಿಯ ಮುಖ್ಯ ಕಟ್ಟಡಗಳ ಸ್ತಂಭಗಳಿಂದೊಡಗೂಡಿದ ವಿಶಾಲ ಮುಮ್ಮುಖಗಳು

ಸ್ಪಷ್ಟವಾಗಿ ಪ್ರಾಮಾಣೀಕರಿಸುವಂತೆ ಇದೊಂದು ಪ್ರಧಾನವಾಗಿ ಅಭಿಜಾತ(ಪಾಶ್ಚಾತ್ಯ) ಶೈಲಿಯ ಚಹರೆ ಹೊತ್ತ ಕಟ್ಟಡಗಳ ವಿಶಾಲ ಸಂಕೀರ್ಣ. ಇದರಲ್ಲಿ ಭಾರತೀಯ ಹಾಗೂ ಇತರ ಮೂಲಗಳಿಂದಾಯ್ದ ಅನೇಕ ಅಂಶಗಳನ್ನೂ ಲಕ್ಷಣಗಳನ್ನೂ ಪರಿಚಯಿಸಲಾಗಿದೆ. ಕೆಲವು ಹೊಸ ಲಕ್ಷಣಗಳು ಹುಟ್ಟಿಕೊಂಡಿವೆ. ಎಲ್ಲವನ್ನೂ ಸೊಬಗಿನ ಸದಭಿರುಚಿಯೊಂದಿಗೆ, ಸರಿಯಾದ ತಿಳಿವಳಿಕೆಯೊಂದಿಗೆ ಅನ್ವಯಿಸಲಾಗಿದೆ; ಇದರಿಂದ ಪ್ರತಿಯೊಂದು ಕಟ್ಟಡ ಮತ್ತು ಪ್ರತಿಯೊಂದು ಸಂಕೀರ್ಣ ಯಾವುದೇ ಕ್ಷೋಭೆಗೊಳಿಸುವ ಅಥವಾ ಅಸಮಂಜಸ ಅಂಶವಿಲ್ಲದೆ ಸುಸಂಬದ್ಧತೆಯ ಪರಿಣಾಮ ಬೀರುವುದೆಂದು ಹೇಳಬಹುದು. ಈ ಶತಮಾನದ ಅಂಥ ಆನಂದದಾಯಕ ಕಟ್ಟಡಗಳು ಪಾಶ್ಚಾತ್ಯ ಲೋಕದಿಂದ ನಿಷ್ಪತ್ತಿಯಾಗಿದ್ದರೂ ಸಹ, ಹೇಗೆ ಪಾಶ್ಚಾತ್ಯ ವಿನ್ಯಾಸಗಳನ್ನು ಭಾರತೀಯ ವಾತಾವರಣಕ್ಕೆ ಸುಸಂಘಟಿತವಾಗಿ ಬೆಸೆದು ಭಾರತೀಯ ಭಾವನೆ ಅಳವಡಿಸ ಬಹುದೆಂಬುದನ್ನು ಸಮರ್ಥ ರೀತಿಯಿಂದ ಪ್ರಕಟಿಸುತ್ತವೆ. ಅವು ಭಾರತೀಯ ವಾಸ್ತುರಚನಾ ಆಶಯಗಳಿಗೆ ಹೊಸ ದಾರಿಯನ್ನು ತೆರೆಯುತ್ತವೆ.

ದೇವಾಲಯಗಳು ಧಾರ್ಮಿಕ ಮತ್ತು ಆಧ್ಯಾತ್ಮಿಕ ಕೇಂದ್ರಗಳು. ಅವುಗಳನ್ನು ಸಾಮಾಜಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳನ್ನಾಗಿ ವಿನ್ಯಾಸಗೊಳಿಸಿದವರು ಯಾರು? ಸಾಮಾನ್ಯವಾಗಿ ದೇವಾಲಯಗಳನ್ನು ವಿನ್ಯಾಸಗೊಳಿಸಿದ ಮತ್ತು ಸುಂದರಗೊಳಿಸಿದ ವಿಶ್ವಕರ್ಮ ಶ್ರಮಿಕ ವರ್ಗಗಳ ಪಾತ್ರ ಮಹತ್ವದ್ದು ಎಂದು ಎಲ್ಲರಿಗೂ ತಿಳಿದಿರುವ ಸಂಗತಿ. ಆದರೆ, ಇದರ ಹಿಂದೆ, ತಳಸಮುದಾಯದ ಅಥವಾ ಕೂಲಿ ಕಾರ್ಮಿಕರ ಪಾತ್ರವೂ ಇದೆ ಎಂಬುದನ್ನು ಮರೆಯುವ ಹಾಗಿಲ್ಲ. ನಮ್ಮ ದೇಶಿ ವಾಸ್ತುಶಿಲ್ಪಿಗಳ ತಂತ್ರಜ್ಞಾನದ ಪ್ರಭಾವದಿಂದ ಇಲ್ಲಿನ ವಾಸ್ತುಶಿಲ್ಪವು ಸರ್ವಶ್ರೇಷ್ಠವಾದುದ್ದು. ಆದರೆ, ಭಾರತಕ್ಕೆ ಬ್ರಿಟಿಷರು ಬಂದ ನಂತರ ನಾವು ಅವರ ಪ್ರಭಾವಕ್ಕೆ ಒಳಗಾಗಿ, ಬೇರೆ ದೇಶಗಳ ಕಟ್ಟಡ-ವಿನ್ಯಾಸಗಳನ್ನು ಅನುಸರಣೆ ಮಾಡಿದ್ದೇವೆ, ಮಾಡುತ್ತಿದ್ದೇವೆ.

ಭಾರತಕ್ಕೆ ಕ್ರೈಸ್ತ ಮಿಷನರಿಗಳು ಪ್ರವೇಶಿಸಿದ ನಂತರ ಕ್ರೈಸ್ತ ಧರ್ಮದ ಪ್ರಸಾರಕ್ಕಾಗಿ ಅವರು ಮೊದಲು ಪ್ರಾರ್ಥನಾ ಮಂದಿರಗಳನ್ನು ಸ್ಥಾಪಿಸಿಕೊಂಡರು. ಆರಂಭಿಕ 'ಪ್ರಾರ್ಥನಾ ಮಂದಿರ ಅಥವಾ ಕ್ರೈಸ್ತ ದೇವಾಲಯಗಳನ್ನು ವಿನ್ಯಾಸಗೊಳಿಸಿದವರು ಪೂಜಾರಿಗಳು ಅಥವಾ ಸಂನ್ಯಾಸಿಗಳೇ ವಾಸ್ತುಶಿಲ್ಪಿಗಳಾಗಿದ್ದರು'.[೫] ಏಕೆಂದರೆ, ಭಾರತಕ್ಕೆ ಬರುತ್ತಿದ್ದ ಕ್ರೈಸ್ತ ಮಿಷನರಿಗಳು ಒಂದು ನಿರ್ದಿಷ್ಟ ಪ್ರದೇಶಕ್ಕೆ ಬರುತ್ತಿದ್ದರು. ಸಮಸ್ತ ಹಕ್ಕುಗಳೊಂದಿಗೆ ನೆಲವನ್ನು ಪಡೆದುಕೊಳ್ಳುತ್ತಿದ್ದರು. ಆ ಮೇಲೆ ಒಂದು ಸಾಮಾನ್ಯವಾದ ಯೋಜನೆಯನ್ನು ರೂಪಿಸಿಕೊಂಡು, ಅಲ್ಲಿದ್ದ ಕ್ರೈಸ್ತರ ಹಾಗೂ ಕುಶಲಕರ್ಮಿಗಳ ನೆರವಿನಿಂದ ಒಂದು ಅಡಿಗಲ್ಲು ಹಾಕಿದ್ದಲ್ಲದೆ, ಅದಕ್ಕೆ ಸಾಮಗ್ರಿಗಳು, ತಾಂತ್ರಿಕ ನೆರವೂ, ದುಡಿಮೆಯೂ ಬೇಕಾಗುತ್ತಿತ್ತು. ಇದನ್ನು ಅಗತ್ಯವಾದ ಕೌಶಲ್ಯಗಳಿದ್ದ ಕ್ರೈಸ್ತರೇ ಪೂರೈಸುತ್ತಿದ್ದರೆಂದು ತೋರುತ್ತದೆ. ಈ ವ್ಯವಸ್ಥೆಯು ೧೦೫೦ಕ್ಕೆ ಮುಂಚೆ ಪಾದ್ರಿಗಳಿಗೆ ಅದು ಸಾಮಾನ್ಯವಾಗಿತ್ತು. ಅದರಲ್ಲಿಯೂ ವಿಶೇಷವಾಗಿ ಕ್ಲೂನಿಯಾಕ್ ಪಂಥದ ಸಂನ್ಯಾಸಿಗಳಿಗೆ ಕಟ್ಟಡವನ್ನು ವಿನ್ಯಾಸಗೊಳಿಸುವ ಒಂದು ಯೋಜನೆಯನ್ನು ರೂಪಿಸಿ, ನೀಲ ನಕ್ಷೆಯನ್ನು

ತಯಾರಿಸಿ, ಅದರ ಮೇಲ್ವಿಚಾರಣೆಯನ್ನು ಮಾಡುವುದು ಸಾಮಾನ್ಯವಾಗಿತ್ತು. ಆದರೆ, '೧೦೫೦ರ ಅನಂತರದ ದೊಡ್ಡ ಕತೀಡ್ರಲ್‌ಗಳಿಗೆ ಸಂನ್ಯಾಸಿಗಳೂ ಅಥವಾ ಪಾದ್ರಿಗಳೂ ಆಗಿರದ ವೃತ್ತಿಪರ ವಾಸ್ತುಶಿಲ್ಪಿಗಳನ್ನು ಕೆಲಸದಲ್ಲಿ ತೊಡಗಿಸಿಕೊಳ್ಳುವುದು ಅವಶ್ಯಕವಾಗಿ ಕಂಡಿತು'.[೬] ೧೩ನೆಯ ಶತಮಾನದಲ್ಲಿ ಸಂಪತ್ತು ಬೃಹತ್ ಸೌಧಗಳನ್ನು, ತಜ್ಞತೆಯನ್ನು ಅನುಮತಿಸಿದಂತೆ, ಮಹಾನಿರ್ಮಾತೃವು ದೈಹಿಕವಾಗಿ ಕೆಲಸವನ್ನು ಹಂಚಿಕೊಳ್ಳುವುದನ್ನು ನಿಲ್ಲಿಸಿದ. ಆದರೆ, ವಿನ್ಯಾಸಗಳನ್ನು ಮತ್ತು ಸ್ಪರ್ಧಾತ್ಮಕ ಅಂದಾಜು ಪಟ್ಟಿಯನ್ನು ಒಪ್ಪಿಸುವುದು, ಗುತ್ತಿಗೆಯನ್ನು ಒಪ್ಪಿಕೊಳ್ಳುವುದು, ಆಸ್ತಿವಾರ ಯೋಜನೆ ಹಾಗೂ ಕಾರ್ಯರೂಪದ ಚಿತ್ರಗಳನ್ನು ಮಾಡುವುದು, ಅದಕ್ಕೆ ಬೇಕಾದ ಸಾಮಗ್ರಿಗಳನ್ನು ದೊರಕಿಸಿಕೊಳ್ಳುವುದು, ಕಲಾವಿದರನ್ನು ಕುಶಲಕರ್ಮಿಗಳನ್ನು ಬಾಡಿಗೆಗೆ ಹಣ ಕೊಟ್ಟು ಕರೆ ತರುವುದು ಹಾಗೂ ಮೊದಲಿನಿಂದ ಕೊನೆಯವರೆಗೂ ಕಟ್ಟಡದ ನಿರ್ಮಾಣದ ಮೇಲ್ವಿಚಾರಣೆ ಮಾಡುವುದು ಇಷ್ಟೂ ಕೆಲಸಗಳನ್ನು ಮಾಡತೊಡಗಿದರು.

೧೭ ಮತ್ತು ೧೮ನೆಯ ಶತಮಾನದಲ್ಲಿ ಗೋವೆಯಲ್ಲಿ ಅನೇಕ ಕ್ರೈಸ್ತ ಶಿಲ್ಪಿಗಳಿದ್ದರು'.[೭] ಅವರನ್ನು ಜೆಸ್ಯೂಟರು ಪ್ರೋತ್ಸಾಹಿಸಿದರು. ಕ್ರೈಸ್ತ ಕಸಬುದಾರರು ಪರಸ್ಪರ ಸ್ನೇಹದಿಂದ್ದರು. ಅವರಲ್ಲಿ ಧರ್ಮದ ಆಧಾರದ ಯಾವುದೇ ವೈರತ್ವವಾಗಲಿ, ಶತ್ರುತ್ವವಾಗಲಿ ಇರಲಿಲ್ಲ. ಆದರೆ, 'ಇವರು ಗೋವಾದ ಮುನಿಸಿಪಾಲಿಟಿಯ ವತಿಯಿಂದ ಪರವಾನಗಿಯನ್ನು ಪಡೆದು ಕೆಲವು ಕ್ರೈಸ್ತ ದೇವಾಲಯಗಳನ್ನು ನಿರ್ಮಿಸಿದ್ದಾರೆ'.[೮] ಹಾಗೆಯೇ ಮಂಗಳೂರಿನಲ್ಲಿ ಮಿಲಾಗ್ರಿಸ್ ಚರ್ಚ್ ಕಟ್ಟಡವನ್ನು ಕ್ರಿ.ಶ. ೧೮೮೮ರಲ್ಲಿ 'ಆಗಸ್ಟೋ ಡಿ. ಅಮಂತಿ ಎಸ್.ಜೆ.' ಎಂಬ ಕ್ರೈಸ್ತ ವಾಸ್ತುಶಿಲ್ಪಿಯಿಂದ ವಿನ್ಯಾಸಗೊಂಡಿದೆ. ಬಳ್ಳಾರಿ ಜಿಲ್ಲೆಯಲ್ಲಿ ನಿರ್ಮಾಣಗೊಂಡ ಕ್ರೈಸ್ತ ದೇವಾಲಯ ಗಳಲ್ಲಿ ಇಂತಹ ಉಲ್ಲೇಖಗಳು ಎಲ್ಲಿಯೂ ಸಿಗುವುದಿಲ್ಲ. ಆದರೆ, ಯಾರ ಸ್ಮರಣೆಯ ನೆನಪಿಗಾಗಿ ನಿರ್ಮಿಸಲಾಗಿದೆ ಎಂಬ ಉಲ್ಲೇಖಗಳು ದೊರೆತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ಕ್ರೈಸ್ತಮಿಷನರಿಗಳು ಕೇವಲ ಧರ್ಮ ಪ್ರಸಾರಕರಾಗಿದೆ. ಕೃಷಿಕರಾಗಿ, ನ್ಯಾಯಮೂರ್ತಿಗಳಾಗಿ, ಸಮಾಜ ಸೇವಕರಾಗಿ, ವೈದ್ಯರಾಗಿ, ಕಲಾವಿದರಾಗಿ, ವಾಸ್ತುಶಿಲ್ಪಿಗಳಾಗಿ ಕಾರ್ಯನಿರ್ವಹಿಸಿದ್ದಾರೆ. ಕ್ರೈಸ್ತ ವಾಸ್ತುಶಿಲ್ಪಗಳು ತಮ್ಮ ಸೇವೆಯನ್ನು ಕಾರ್ಯನಿರ್ವಹಿಸುತ್ತಿದ್ದ ಕಾಲಾವಧಿಯಲ್ಲಿ ಕ್ರೈಸ್ತ ಪೂಜಾ ವಸ್ತುಗಳನ್ನು ತಯಾರಿಸಲು ಹಿಂದೂ ಕಲಾವಿದರನ್ನು ನೇಮಿಸಿಕೊಳ್ಳುವುದನ್ನು ಆರಂಭದಲ್ಲಿ ಪ್ರಾಂತೀಯ ಚರ್ಚ್ ಮಂಡಳಿಗಲು ಕಟ್ಟುನಿಟ್ಟಾಗಿ ನಿಷೇಧಿಸಿದರೂ ಕಾಲ ನಂತರದಲ್ಲಿ ಧಾರ್ಮಿಕ ಪಂಡಗಳು ತಮ್ಮ ಕ್ರೈಸ್ತ ದೇವಾಲಯಗಳ ಪೂಜಾ ವೇದಿಕೆಗಳನ್ನು, ಅಲಂಕರಿಸಲು ಅವರನ್ನೇ ಇಷ್ಟಪಡುತ್ತಿದ್ದರು. ಪ್ರಸ್ತುತ ದೇವಾಲಯಗಳ ನಿರ್ಮಾಣಕ್ಕೆ ಪ್ರಾಂತೀಯ ಆಡಳಿತದ ಕೇಂದ್ರ ವಲಯದಿಂದ ಅನುಮತಿ ಪಡೆದು, ಅದರ ನಿರ್ಮಾಣಕ್ಕೆ ಟೆಂಡರ್‌ನ್ನು ಕರೆದು ಗುತ್ತಿಗೆ ನೀಡಲಾಗುತ್ತಿದೆ. ಇದರಿಂದ ಯಾವುದೇ ಜಾತಿ-ಭೇದವಿಲ್ಲದೆ, ಎಲ್ಲಾ ಕುಶಲಕರ್ಮಿಗಳಿಂದ ದೇವಾಲಯಗಳನ್ನು, ಪೂಜಾ ಸಾಮಗ್ರಿಗಳನ್ನು ವಿನ್ಯಾಸಗೊಳಿಸುತ್ತಿದ್ದಾರೆ.

ಎಂಜಿನಿಯರಿಂಗ್ ಕೆಲವು ವಸ್ತುಗಳನ್ನು ಲಂಡನ್ ಮೂಲಕವೇ ಹೆಚ್ಚಾಗಿ ಪಡೆಯಲಾಗುತ್ತಿದ್ದುದರಿಂದ ೧೮೮೨-೮೩ ಹಾಗೂ ೧೮೯೮-೯೯ರ ಅವಧಿಯಲ್ಲಿ ೪೩೭ ಲಕ್ಷ ರೂಪಾಯಿ ಮೌಲ್ಯದ ಕಟ್ಟಡ ನಿರ್ಮಾಣಕ್ಕೆ ಬೇಕಾದ ಮತ್ತು ಇತರ ಎಂಜಿನಿಯರಿಂಗ್ ಸಾಮಗ್ರಿಗಳು, ಉಪಕರಣಗಳು, ಯಂತ್ರಗಳು ನೇರವಾಗಿ ಲಂಡನ್ ಮೂಲಕ ತರಿಸಲ್ಪಟ್ಟವು'.[೯] ಈ ಯಂತ್ರಗಳಿಂದ ಸ್ಥಳೀಯವಾಗಿ ದೊರೆಯುವ ಕಟ್ಟಡ ಸಾಮಗ್ರಿಗಳನ್ನು ತಯಾರಿಸಿಕೊಂಡು, ಸ್ಥಳೀಯ ಶ್ರಮಿಕರೊಂದಿಗೆ ತಮ್ಮದೇ ಆದ ತಾಂತ್ರಿಕ ಕೌಶಲ್ಯದಿಂದ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ಅವು ಈ ಕೆಳಗಿನಂತಿವೆ.

**ಸ್ಥಳದ ಆಯ್ಕೆ :** ಬಳ್ಳಾರಿ ಜಿಲ್ಲೆಯಲ್ಲಿ ಬ್ರಿಟಿಷರು ಕಟ್ಟಡಗಳನ್ನು ಕಟ್ಟಿಸುವಂತ ಸಂದರ್ಭದಲ್ಲಿ ಎರಡು ಬಗೆಯ ಸ್ಥಳವನ್ನು ಆಯ್ಕೆ ಮಾಡಿಕೊಂಡಿರುವುದು ವಿಶೇಷತೆ ಕಂಡುಬಂದಿದೆ. ಇವರು ಕಟ್ಟಡಗಳನ್ನು ಕಟ್ಟುವಾಗ ಅವು ದೃಢವಾಗಿ, ಉತ್ತಮ ಸ್ಥಿತಿಯಲ್ಲಿರಬೇಕು, ಅವರಿಗೆ ಪ್ರಯೋಜನಕಾರಿಯಾಗಿರಬೇಕು, ಆಹ್ಲಾದಕರ ವಾತಾವರಣ ಹೊಂದಿರಬೇಕು ಎಂಬ ದೃಷ್ಟಿಯಿಂದ ಈ ಬಗೆಯ ಸ್ಥಳಗಳನ್ನು ಆಯ್ಕೆ ಮಾಡಿಕೊಂಡಿರುವುದು ಕಂಡುಬಂದಿದೆ.

ಒಂದು ಗಿರಿ-ಬೆಟ್ಟ ಸ್ಥಳ : ಜಿಲ್ಲೆಯು ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಸಂಭವಿಸಿದ ಭೀಕರ ಬರಗಾಲ-ಕ್ಷಾಮಗಳು ಮತ್ತು ಸುಡು ಬೇಸಿಗೆಯ ಸ್ಥಳವಾಗಿದ್ದರಿಂದ ಬ್ರಿಟಿಷರು ಸಂಡೂರು ತಾಲೂಕು ವ್ಯಾಪ್ತಿಯಲ್ಲಿರುವ ರಾಮಘಡ ಅಥವಾ ರಾಮನಮಲೈ ಬೆಟ್ಟದ ಆಯಾಕಟ್ಟಿನ ಸ್ಥಳದಲ್ಲಿ ಸೇನಾ ತುಕಡಿಯ ಬೇಸಿಗೆಯ ವಸತಿಗಾಗಿ ಹಾಗೂ ಅಧಿಕಾರಿಗಳ ವಿಶ್ರಾಂತಿಗಾಗಿ ಕಟ್ಟಡಗಳನ್ನು ನಿರ್ಮಿಸಿಕೊಂಡಿರುವುದು ದೃಢಪಟ್ಟಿದೆ. ಎರಡು : ಸಮತಟ್ಟಾದ ಸ್ಥಳಗಳು : ವಸಾಹತುಶಾಹಿ ಆಳ್ವಿಕೆಯ ಅವಧಿಯಲ್ಲಿ ಬ್ರಿಟಿಷರು ಬಳ್ಳಾರಿ ಕಂಟೋನ್ಮೆಂಟ್, ಸಿರುಗುಪ್ಪ, ಹೊಸಪೇಟೆ, ಹಡಗಲಿ, ಹರಪನಹಳ್ಳಿ, ಕೂಡ್ಲಿಗಿ, ರಾಯದುರ್ಗ, ಆಲೂರು ಮತ್ತು ಆದೋನಿ ತಾಲೂಕುಗಳಲ್ಲಿ ಆಡಳಿತ ನಡೆಸಿಕೊಂಡು ಹೋಗಲು ಮತ್ತು ಸೈನಿಕ ಕಾರ್ಯಾಚರಣೆಗೆ ಅನುಕೂಲವಾಗುವಂತಹ ಕಟ್ಟಡಗಳನ್ನು ಬಯಲು ಹಾಗೂ ಸಮತಟ್ಟಾದ ಪ್ರದೇಶಗಳಲ್ಲಿ ನಿರ್ಮಿಸಿಕೊಂಡಿರುವುದು ಕಂಡುಬಂದಿದೆ. ಇವರು ಕಟ್ಟಿಸಿರುವ ಕಟ್ಟಡಗಳಲ್ಲಿ ವಿಶಾಲವಾದ ಕೊಠಡಿಗಳು, ರಕ್ಷಣಾಗೋಡೆ, ದೊಡ್ಡ ದೊಡ್ಡ ಕಿಟಕಿಗಳು, ಕಮಾನುಗಳು, ಹೆಚ್ಚು ಕಬ್ಬಿಣ ಮತ್ತು ಗಾರೆಯನ್ನು ಬಳಸಿರುವುದು. ಮಂಗಳೂರು ಹೆಂಚು, ಕಟ್ಟಡಗಳ ಮುಂಭಾಗದಲ್ಲಿ ವಿಶಾಲ ಮೈದಾನ ಇರುವುದು ಕಾಣಿಸುತ್ತದೆ. ಇಂತಹ ಲಕ್ಷಣಗಳಿಂದ ಕೂಡಿದ ಕಟ್ಟಡವನ್ನು ನೋಡಿದ ಪ್ರತಿಯೊಬ್ಬ ಜನಸಾಮಾನ್ಯನೂ ಇದು ಬ್ರಿಟಿಷ್‌ರ ಕಟ್ಟಡವೆಂದೇ ಹೇಳುವುದರಲ್ಲಿ ಸಂದೇಹವೇ ಇಲ್ಲ.

**ತಳನಕ್ಷೆ :** ಬಳ್ಳಾರಿ ಜಿಲ್ಲೆಯಲ್ಲಿ ಬ್ರಿಟಿಷರು ನಿರ್ಮಿಸಿರುವ ಕಟ್ಟಡಗಳನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಿದ ಪ್ರಕಾರ ಯಾವುದೇ ಭಾರತೀಯ ವಾಸ್ತು ಪ್ರಕಾರ ಕಟ್ಟಿಲ್ಲದೆ ಇರುವುದು ಕಂಡುಬಂದಿದೆ. ಆದರೆ, ಕಟ್ಟಡಗಳನ್ನು ಸಮತಟ್ಟಾದ ಸ್ಥಳದಲ್ಲಿ ಎಂಜಿನಿಯರ್‌ಗಳು ತಮ್ಮ ಆಡಳಿತದ ಅನುಕೂಲಕ್ಕೆ

ತಕ್ಕಂತೆ ಹೆಚ್ಚು ಕಟ್ಟಡಗಳನ್ನು ಚಚ್ಚೌಕವಾಗಿ ಅಗಲ ಕಡಿಮೆ ಇದ್ದು, ಉದ್ದ ಹೆಚ್ಚು ಅಥವಾ ಉದ್ದ ಕಡಿಮೆ ಇದ್ದು, ಅಗಲ ಹೆಚ್ಚಾಗಿರುವ ಹಾಗೆ ತಳವಿನ್ಯಾಸಗಳನ್ನು ರಚಿಸಿದ್ದಾರೆ. ಇದರ ಜೊತೆಗೆ ಜಿಲ್ಲೆಯಲ್ಲಿ ನಿರ್ಮಾಣಗೊಂಡಿರುವ ಧಾರ್ಮಿಕ ಕಟ್ಟಡಗಳನ್ನು ಯೇಸುವಿನ ಶಿಲುಬೆಯಾಕಾರದಲ್ಲಿ ನಿರ್ಮಿಸಿಕೊಂಡಿರುವುದು ಕಂಡುಬಂದಿದೆ.

**ಕಲ್ಲು :** ಮಾನವನಿಗೆ ಅತ್ಯಂತ ಪ್ರಾಚೀನ ಕಾಲದಿಂದಲೂ ಉಪಯೋಗಕ್ಕೆ ಒದಗುತ್ತಿರುವ ವಸ್ತು ಕಲ್ಲು. ಗುಡಿಸಲುಗಳಿಂದ ಮನೆಗಳ ನಿರ್ಮಾಣವಾದಾಗ ಪ್ರಾಯಶಃ ಮೊಟ್ಟಮೊದಲು ಉಪಯೋಗಕ್ಕೆ ಒದಗಿದ ವಸ್ತುವೇ ಕಲ್ಲು. ಬಂಡೆಗಳನ್ನು ಒಡೆದು ಬೇಕಾದ ರೂಪದಲ್ಲಿ ಕಟ್ಟಡಗಳಿಗೆ ಒದಗಿಸುವ ಕಲೆ ಅತ್ಯಂತ ಪ್ರಾಚೀನ ಕಾಲದಿಂದಲೂ ತಿಳಿದಿದ್ದ ವಿಷಯ. ಆದರೆ, ಆಧುನಿಕ ಕಾಲದಲ್ಲಿ ಸಿಮೆಂಟ್, ಕಾಂಕ್ರೀಟ್ ಮುಂತಾದ ವಸ್ತುಗಳ ಶೋಧನೆಯಾದ ಮೇಲೆ ಕಟ್ಟಡಕ್ಕಾಗಿ ಕಲ್ಲಿನ ಉಪಯೋಗ ತಗ್ಗುತ್ತಿದೆಯಾದರೂ ಸೌಂದರ್ಯ ಮತ್ತು ದೀರ್ಘಕಾಲದ ಬಾಳಿಕೆಯ ದೃಷ್ಟಿಯಿಂದ ಪ್ರಧಾನವಾಗಿ ಕಾಲದ ಬಾಳಿಕೆಯ ದೃಷ್ಟಿಯಿಂದ ಪ್ರಧಾನವಾಗಿ ಬಳಸಿದ್ದಾರೆ.

**ಕಬ್ಬಿಣ :** ಕಬ್ಬಿಣವನ್ನು ಕ್ರಿ.ಪೂ. ೧೫೦೦ ವರ್ಷಗಳಷ್ಟು ಹಿಂದೆಯೇ ತೆಗೆಯುತ್ತಿದ್ದರು. ಯುರೋಪಿನಲ್ಲಿ ಕಬ್ಬಿಣವು ಕಂಡುಬರುವುದಕ್ಕೆ ಎಷ್ಟೋ ಮುಂಚಿತವಾಗಿಯೇ ಕಬ್ಬಿಣವನ್ನು ಹದಗೊಳಿಸುವ ಮತ್ತು ಎರಕ ಹೊಯ್ಯುವ ಕಲೆ ಭಾರತದಲ್ಲಿ ಅಭಿವೃದ್ಧಿಕೊಂಡಿತ್ತು. ಉದಾಹರಣೆ: ವಿಕ್ರಮಾದಿತ್ಯನು ದೆಹಲಿಯಲ್ಲಿ ಸ್ಥಾಪಿಸಿರುವ ಕಬ್ಬಿಣದ ಸ್ತಂಭವು ಹದಿನೈದು ಶತಮಾನಗಳ ಆನಂತರ ಇಂದಿಗೂ ಕಳೆಗುಂದದೆ ಹಾಗೆಯೇ ನಿಂತಿದೆ. ಈ ಲೋಹದ ಗುಣಮಟ್ಟ ಅಥವಾ ತುಕ್ಕು ಇಲ್ಲವೆ ಶಿಥಿಲತೆಯುಂಟಾಗದಂತೆ ಅದಕ್ಕೆ ಮಾಡಿರುವ ಸಂಸ್ಕರಣೆಯ ಕ್ರಮವು ಇಂದಿಗೂ ಆಧುನಿಕ ಲೋಹಶಾಸ್ತ್ರ ವಿಜ್ಞಾನಿಗಳಿಗೆ ಒಂದು ರಹಸ್ಯವಾಗಿದೆ. ಐರೋಪ್ಯರ ಆಕ್ರಮಣಕ್ಕೆ ಮುನ್ನ ಸಣ್ಣ ಇದ್ದಿಲ ಕುಲುಮೆಗಳಲ್ಲಿ ಕಬ್ಬಿಣದ ಅದಿರನ್ನು ಕರಗಿಸುವುದು ಭಾರತದ ಪ್ರಧಾನ ಉದ್ಯಮಗಳಲ್ಲಿ ಒಂದಾಗಿತ್ತು. ಕೈಗಾರಿಕಾ ಕ್ರಾಂತಿಯು ಈ ಪ್ರಕ್ರಿಯೆಯಗಳನ್ನು ಇನ್ನೂ ಹೆಚ್ಚು ಅಗ್ಗವಾಗಿ ಇನ್ನೂ ದೊಡ್ಡ ಪ್ರಮಾಣದಲ್ಲಿ ಮಾಡುವುದು ಹೇಗೆ ಎಂದು ಯೂರೋಪಿಗೆ ತೋರಿಸಿಕೊಟ್ಟಿತು. ಈ ಸ್ಪರ್ಧೆಯಲ್ಲಿ ಭಾರತದ ಉದ್ಯಮವು ಕೊನೆಯುಸಿರೆಳೆಯಿತು. ಏಕೆಂದರೆ, ಯುರೋಪಿನ ತಂತ್ರಜ್ಞನದಿಂದ ಬೃಹತ್ ಕೈಗಾರಿಕೆಗಳು ಸ್ಥಾಪನೆಯಾದವು. ಹೊಸಪೇಟೆ, ಬಳ್ಳಾರಿ, ಸಂಡೂರು, ಪಾಪಿನಾಯಕನಹಳ್ಳಿ, ರಾಮದುರ್ಗ, ಜಂಬುನಾಥಹಳ್ಳಿ ಮುಂತಾದೆಡೆಗಳಲ್ಲಿ ಹೇರಳವಾಗಿ ಕಬ್ಬಿಣದ ಅದಿರು ದೊರೆಯುತ್ತಿದ್ದರಿಂದ ಕಟ್ಟಡಗಳಿಗೆ ಹೆಚ್ಚಾಗಿ ಬಳಸಿರುವುದನ್ನು ಗಮನಿಸಲಾಗಿದೆ.

**ಸಿಮೆಂಟ್:** 'ಕ್ರಿ.ಶ. ೧೮೨೪ರಲ್ಲಿ ಇಂಗ್ಲೆಂಡಿನ ಜೋಸೆಫ್ ಆಸ್ಪಡಿನ್ ಎಂಬುವನು ಪೋರ್ಟ್‌ಲ್ಯಾಂಡ್ ಸಿಮೆಂಟು'[೧೦] ಎಂಬ ವಸ್ತುವನ್ನು ತಯಾರಿಸಿದನು. ಅಂದಿನಿಂದ ಅದು ಹೆಚ್ಚು ಜನಪ್ರಿಯತೆಯನ್ನು ಗಳಿಸಿದ್ದರಿಂದ ಬ್ರಿಟಿಷರು ಹೇರಳವಾಗಿ ಬಳಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ವಾಡಿ, ಶಹಾಬಾದು, ಅಮ್ಮಸಂದ್ರ, ಬಳ್ಳಾರಿಯಲ್ಲಿ ಇದರ ಕಾರ್ಖಾನೆಗಳಿವೆ.

ಸಿಮೆಂಟಿನ ಆವಿಷ್ಕಾರವಾದಾಗಿನಿಂದ ಕಾಂಕ್ರೀಟಿನ ಉಪಯೋಗವನ್ನು ಬ್ರಿಟಿಷರು ಕಟ್ಟಡಗಳಿಗೆ ಅಪಾರವಾಗಿ ಬಳಕೆ ಮಾಡಿಕೊಂಡಿದ್ದಾರೆ.

**ಕಾಂಕ್ರೀಟು:** ಸಿಮೆಂಟಿಗೆ ಮರಗಳನ್ನೂ ನೀರನ್ನೂ ಸೇರಿಸಿ ಕಲಿಸಿದಾಗ ಸಿಮೆಂಟಿನ ಗಾರೆಯು ಸಿದ್ಧವಾಗುತ್ತದೆ. ಸಿಮೆಂಟಿನ ಗಾರೆಗೆ ಜಲ್ಲಿಯನ್ನು ಬೆರೆಸಿದಾಗ, ಕಾಂಕ್ರೀಟು ಸಿದ್ಧವಾಗುತ್ತದೆ. ಇದರ ಹೆಚ್ಚು ಮಹತ್ವಪೂರ್ಣ ಬೆಳವಣಿಗೆಯೆಂದರೆ, ಮೋನಿಯರ್ ೧೮೬೮ರಷ್ಟು ಹಿಂದೆಯೇ ಬಳಕೆಗೆ ತಂದಿದ್ದ. ಉಕ್ಕಿನ ಚೌಕಟ್ಟು ಅಥವಾ ತಂತಿಗಳನ್ನು ಒಳಗೆ ಹುದುಗಿಸಿ ಭದ್ರಪಡಿಸಿದ ಜಲ್ಲಿಯ ಗಾರೆ ಅರ್ಥಾತ್ ರೀ ಇನ್‌ಪೋರ್ಸ್ಡ್ ಕಾಂಕ್ರೀಟ್ ತಂತ್ರಜ್ಞಾನ. ಇದರಲ್ಲಿ ಕಾಂಕ್ರೀಟ್‌ನ ರಾಶಿ ಮತ್ತು ವ್ಯಾಪಕ ಬಲದ ಗುಣವನ್ನು ಹಿಗ್ಗಿಸಬಲ್ಲಕರ್ಷಕ ಸಾಮರ್ಥ್ಯ ಉಳ್ಳ ಉಕ್ಕಿನೊಂದಿಗೆ ವಿವೇಚನೆಯಿಂದ ಜೊತೆಗೂಡಿಸಲಾಗಿರುತ್ತದೆ. ಇದರ ಮುಂದಿನ ಹೆಜ್ಜೆ ೧೯೨೮ರಲ್ಲಿ ಫ್ರೈಸಿನೆಟ್ ಉಕ್ಕನ್ನು ಕರ್ಷಣಕ್ಕೊಳಪಡಿಸಿ ಸೃಷ್ಟಿಸಿದ ಪೂರ್ವ-ಒತ್ತಡಕ್ಕೊಳಪಟ್ಟ ಕಾಂಕ್ರೀಟ್. ಬ್ರಿಟಿಷರು ಜಿಲ್ಲೆಯಲ್ಲಿ ಕಾಂಕ್ರೀಟ್‌ನ್ನು ಬಳಸಿ, ಕಟ್ಟಡಗಳನ್ನು, ರಸ್ತೆಗಳನ್ನು ಮತ್ತು ಅಣೆಕಟ್ಟುಗಳನ್ನು ನಿರ್ಮಿಸಿದ್ದಾರೆ.

**ಹೆಂಚು:** ಮಂಗಳೂರಿನ "ಜೆಪ್ಪು ಎನ್ನುವಲ್ಲಿ ೧೮೬೫ರಲ್ಲಿ ಹೆಂಚು ಕಾರ್ಖಾನೆಯನ್ನು ಸ್ಥಾಪಿಸಿ, ಅದಕ್ಕೆ ಮಂಗಳೂರು ಹೆಂಚು"[೧೧] ಎಂಬುದಾಗಿ ಹೆಸರಿಸಲಾಯಿತು. ಮಂಗಳೂರು ಹೆಂಚುಗಳು ನಾಡಹೆಂಚುಗಳಿಗಿಂತ ಉತ್ತಮವಾದವು. ಹೆಚ್ಚು ಕಡಿಮೆ ಚಪ್ಪಟೆಯಾಕಾರದಲ್ಲಿರುವ ಈ ಹೆಂಚುಗಳಲ್ಲಿ ಒಂದಕ್ಕೊಂದು ಬಿಗಿಯಾಗಿ ಹಿಡಿದುಕೊಳ್ಳಲು ಮತ್ತು ಮೇಲೆ ಬಿದ್ದ ಮಳೆಯ ನೀರು ಹಿರಿದು ಹೋಗಲು ಮತ್ತು ಮೇಲೆ ಬಿದ್ದ ಮಳೆಯ ನೀರು ಹಿರಿದು ಹೋಗಲು ಬೇಕಾಗುವ ಸೌಲಭ್ಯಗಳಿರುವುದರಿಂದ ಕಟ್ಟಡಗಳಿಗೆ ಹೇರಳವಾಗಿ ಬಳಸಿದ್ದಾರೆ.

**ಸುಣ್ಣ:** ಕಟ್ಟಡಗಳನ್ನು ಕಟ್ಟುವಾಗ ಉಪಯೋಗಿಸುವ ಕಲ್ಲು ಇಟ್ಟಿಗೆ ಮುಂತಾದ ಜಡವಾದ ನಿಶ್ಚಲವಾದ ವಸ್ತುಗಳನ್ನು ಸೇರಿಸಿ ಕಟ್ಟಡವನ್ನು ಘನವಸ್ತುವಾಗಿ ಮಾಡಿದರೆ ಮಾತ್ರ ಅದಕ್ಕೆ ಶಕ್ತಿಯೂ ಬಾಳಿಕೆಯೂ ಬರುತ್ತದೆಯೆಂಬುದು ಸ್ವಯಂಸಿದ್ಧವಷ್ಟೆ. ಇದಕ್ಕೆ ಯಾವುದಾದರೊಂದು ಬಗೆಯ ಅಂಟು ಪದಾರ್ಥ ಬೇಕಾಗುತ್ತದೆ. ಅದೇ ಸುಣ್ಣದ ಗಾರೆ. ಹರಪನಹಳ್ಳಿ, ಹಡಗಲಿ, ಸೋಗಿ, ಇಟ್ಟಗಿ, ಅಯ್ಯನಹಳ್ಳಿ, ಅಲ್ಲಿಪುರ, ಕುಮ್ಮನಕೆರೆ, ಕೊಟ್ಟೂರು, ಮರಿಯಮ್ಮನಹಳ್ಳಿ ಇತ್ಯಾದಿ ಸ್ಥಳಗಳಲ್ಲಿ ಸುಣ್ಣವನ್ನು ಹೆಚ್ಚು ತಯಾರಿಸುತ್ತಿದ್ದರಿಂದ ಕಟ್ಟಡಗಳಿಗೆ ಈ ಸ್ಥಳಗಳಿಂದ ಸರಬರಾಜು ಆಗುತ್ತಿತ್ತು ಎಂಬ ಅಭಿಪ್ರಾಯವನ್ನು ಸುಣ್ಣ ಸುಡುವವರ ಹಾಗೂ ಮಾರುವವರಿಂದ ಪಡೆಯಲಾಗಿದೆ.

**ಇಟ್ಟಿಗೆ:** ಆಧುನಿಕ ಕಾಲದಲ್ಲಿ ಕಟ್ಟಡಗಳ ನಿರ್ಮಾಣಕ್ಕೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗವಾಗುತ್ತಿರುವ ವಸ್ತು ಎಂದರೆ ಇಟ್ಟಿಗೆ. ಇದನ್ನು ಬ್ರಿಟಿಷರು ಹೇರಳವಾಗಿ ಬಳಸಿಕೊಂಡ ಕಟ್ಟಡಗಳನ್ನು ನಿರ್ಮಿಸಿರುವುದು ಕಂಡುಬಂದಿದೆ.

**ಚೌಬೀನೆ:** ನಿಸರ್ಗದಲ್ಲಿ ಮರಗಳು ಹೇರಳವಾಗಿ ಬೆಳೆಯುತ್ತವೆ. ಆದರೆ, ಎಲ್ಲಾ ಮರಗಲೂ ಇಂಜಿನಿಯರಿಂಗ್ ಉಪಯೋಗಕ್ಕೆ ಸೂಕ್ತವಾಗಿರುವುದಿಲ್ಲ. ಎಂಜಿನಿಯರಿಂಗ್ ಉಪಯೋಗವೆಂದರೆ, ಕಟ್ಟಡಗಳಲ್ಲಿ ಭಾರವನ್ನೂ, ಬಲಗಳನ್ನೂ ನಿಯಮಿಸಿದ ರೀತಿಯಲ್ಲಿ ಭರಿಸುವಂತಿರುವುದು ಮತ್ತು ಕಟ್ಟಡದ ಜೀವಿತಾವಧಿಯಲ್ಲಿ ಎಲ್ಲ ಸನ್ನಿವೇಶಗಳಲ್ಲೂ ಸಮರ್ಪಕವಾಗಿ ಸೇವೆ ಸಲ್ಲಿಸುವುದು. ಈ ಎಂಜಿನಿಯರಿಂಗ್ ಉಪಯೋಗಕ್ಕೆ ಯೋಗ್ಯವಾದ ಮರಗಳನ್ನು ಚೌಬೀನೆ ಮರಗಳೆನ್ನುವರು. ‘ಚೌಬೀನೆಯನ್ನು ಮರದ ಕಾಂಡ ಭಾಗದಿಂದ ಪಡೆಯುವರು. ಮರದ ಕೊಂಬೆಗಳನ್ನು ತರಿದು, ಬುಡದಲ್ಲಿ ಕಡಿದು, ನಂತರ ನೀಳವಾದ ಕಾಂಡ ಭಾಗವನ್ನು ‘ದಿಮ್ಮಿ’ ’[೧೨] ಎನ್ನುವರು. ಈ ದಿಮ್ಮಿಯನ್ನು ಆಧುನಿಕ ಯಂತ್ರಗಳಿಂದ ಕುಯ್ದು ನಿರ್ಮಾಣ ಕೆಲಸಗಳಿಗೆ ಬೇಕಾದ ತೊಲೆಕಂಬ, ಜಂತಿ, ಪಟ್ಟಿ, ಹಲಗೆ ಮುಂತಾದ ವಸ್ತುಗಳನ್ನು ಸಿದ್ಧಪಡಿಸುವರು. ಬ್ರಿಟಿಷರ ಕಾಲಾವಧಿಯಲ್ಲಿ ನಿರ್ಮಾಣಗೊಂಡಿ ಕಟ್ಟಡಗಳಲ್ಲಿ ಕಂಬ, ತೊಲೆ, ತಾರಸಿ, ಛಾವಣಿ, ನೆಲಗಟ್ಟು, ರೈಲು ಮಾರ್ಗದ ಸ್ಲೀಪರುಗಳು, ನಾಲೆಯ ತೂಬಿನ ಕದಗಳು ಮುಂತಾದವುಗಳಿಗೆ ಚೌಬೀನೆಯನ್ನು ಹೇರಳವಾಗಿ ಬಳಸಿದ್ದಾರೆ. ಇದರ ಜೊತೆಗೆ ಓಕ್, ಫೈನ್, ಮಹಾಗನಿ ಇತ್ಯಾದಿ ವಿವಿಧ ಮರಗಳನ್ನು ಬಳಸಿರುವುದು ಕಂಡುಬಂದಿದೆ.

### ೫.೨. ಶ್ರಮಿಕರು

ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯ ಪೂರ್ವದಲ್ಲಿ ಎರಡು ರೀತಿಯ ಶ್ರಮಿಕವರ್ಗವನ್ನು ಕಾಣಬಹುದು. ಯಾವುದೇ ಒಂದು ರಾಜ್ಯದಲ್ಲಿ ಅಥವಾ ರಾಜರ ಆಸ್ಥಾನಗಳಲ್ಲಿ ರಾಜಾಶ್ರಯ ಪಡೆದಿದ್ದ ಶ್ರಮಿಕವರ್ಗ. ಮತ್ತೊಂದು ಹಳ್ಳಿಗಳಲ್ಲಿನ ಶ್ರಮಿಕ ವರ್ಗ. ರಾಜ್ಯದ ರಾಜ್ಯಗಳಲ್ಲಿದ್ದ ಶ್ರಮಿಕವರ್ಗಗಳಿಗೆ ಶ್ರೀಮಂತರಿಂದ ಅಥವಾ ರಾಜರಿಂದ ರಾಜಾಶ್ರಯದ ಪೋಷಣೆ ದೊರೆಯುತ್ತಿತ್ತು. ಹಳ್ಳಿಗಳ ಶ್ರಮಿಕವರ್ಗವು ತಮ್ಮ ವೃತ್ತಿಯಿಂದ ಪೋಷಿತರಾಗಿದ್ದರು. ಪ್ರಾಚೀನ ಕಾಲದಿಂದಲೂ ಭಾರತದಲ್ಲಿ ವೃತ್ತಿ ಆಧಾರಿತ ಸಮುದಾಯಗಳಿದ್ದವು. ಅವುಗಳೆಂದರೆ, ಕಮ್ಮಾರರು, ಕುಂಬಾರರು, ಮರಗೆಲಸಗಾರರು, ಕಲ್ಲು ಕುಟ್ಟಿಗರು, ಚಮ್ಮಾರರು, ದಂತ ಕೆಲಸಗಾರರು, ಬುಟ್ಟಿ ಹೆಣೆಯುವವರು, ಬಣ್ಣ ಬಳಿಯುವವರು, ಶೃಂಗರಿಸುವವರು, ಅಗಸರು, ಬೆಸ್ತರು, ನಾವಿಕರು, ಬೇಟೆಗಾರರು, ಕವಾಡಿಗ, ಕಟುಕರು, ಮಿಠಾಯಿಗಾರರು, ಕ್ಷೌರಿಕರು, ಹೂವಾಡಿಗಾರರು, ಬಾಣಸಿಗರು ಇತ್ಯಾದಿ ತಳಸಮುದಾಯಗಳಿದ್ದವು. ಇಲ್ಲಿರುವ ಶ್ರಮಿಕವರ್ಗವು ಹೆಚ್ಚು ಸಂಪನ್ನರು ಮತ್ತು ಹೆಚ್ಚು ವೈಜ್ಞಾನಿಕವಾಗಿ ತಮ್ಮ ವೃತ್ತಿಯನ್ನು ನಿರ್ವಹಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದರು. ಹಾಗಾಗಿ ಇವರನ್ನು ಉತ್ಪಾದಿಸುತ್ತಿದ್ದ ವಸ್ತುಗಳಿಗೆ ಯುರೋಪಿನ ರಾಷ್ಟ್ರಗಳಲ್ಲಿ ಅಪಾರ ಬೇಡಿಕೆ ಇತ್ತು. ‘ಕ್ರಿ.ಪೂ. ಒಂದನೆಯ ಶತಮಾನದಿಂದ ಕ್ರಿ.ಶ. ಹದಿನೆಂಟನೆಯ ಶತಮಾನದವರೆಗೆ ಭಾರತದಲ್ಲಿ ಉತ್ಪಾದನೆಯಾಗುತ್ತಿದ್ದ ಹತ್ತಿ ಬಟ್ಟೆ ಪ್ರಪಂಚದ ಅದ್ಭುತಗಳಲ್ಲಿ ಒಂದಾಗಿತ್ತು’.[೧೩] ಬಳ್ಳಾರಿ ಜಿಲ್ಲೆಯಲ್ಲಿಯೂ ಹೇರಳವಾಗಿ ಹತ್ತಿಯನ್ನು ಬೆಳೆಯುತ್ತಿದ್ದರಿಂದ ಇಂಗ್ಲೆಂಡಿಗೆ ಅತಿ ಹೆಚ್ಚು ರಫ್ತಾಗುತ್ತಿತ್ತು.

ಈಸ್ಟ್ ಇಂಡಿಯಾ ಕಂಪನಿಯ ಆಕ್ರಮಣದ ನಂತರ ಭಾರತದಲ್ಲಿದ್ದ ಎರಡು ರೀತಿಯ ಕುಶಲಕರ್ಮಿಗಳು ವ್ಯವಸ್ಥಿತವಾದ ರೀತಿಯಲ್ಲಿ ನಾಶವಾದರು. ಇದಕ್ಕೆ ವಸಾಹತುಶಾಹಿಯ ಆರ್ಥಿಕ ನೀತಿಯೇ ಪ್ರಮುಖ ಕಾರಣವಾಗಿದೆ. ಹಾಗಾಗಿ ಡಿ.ಆರ್. ಗಾಡ್ಗೀಲ್ ಈ ರೀತಿ ಹೇಳುತ್ತಾರೆ. "ಬಹುಶಃ ಆರ್ಥಿಕ ಪಲ್ಲಟದ ಏಕೈಕ ನಾಟಕೀಯ ಘಟನೆಯೆಂದರೆ, ಪ್ರಾಚೀನ ಕರಕುಶಲತೆಯ ಪತನ" ಇದಕ್ಕೆ ಕಾರಣಗಳು, ಭಾರತೀಯ ಆಸ್ಥಾನಗಳ ಕಣ್ಮರೆ, ಬದಲಾವಣೆಯನ್ನು ತರುವ ಯೋಜಿತ ವಿದೇಶಿ ಆಳ್ವಿಕೆಯ ಸ್ಥಾಪನೆ ಮತ್ತು ಅದರ ಪ್ರಭಾವ, ಅತ್ಯಂತ ಮುಂದುವರೆದ ಕೈಗಾರಿಕೆಗಳ ಸ್ಪರ್ಧೆ ಎಂದಿದ್ದಾರೆ. ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದ, ಹಲವು ಕಾಯಿದೆ ಕಟ್ಟಳೆ ನಿರ್ಬಂಧಗಳಿಂದ ಮತ್ತು ಆಧುನಿಕ ತಂತ್ರಜ್ಞಾನದ ಪ್ರಭಾವದಿಂದ ಸಾಂಪ್ರದಾಯಕ ಕರಕುಶಲ ಕಲೆಗಳ ಮೇಲೆ ಭಾರಿ ಪೆಟ್ಟು ಬಿದ್ದಿತು. ಇದರಿಂದ ಕುಶಲಕರ್ಮಿಗಳ ಸ್ಥಿತಿಗತಿಗಳು ತತ್ತರಿಸಿ ಹೋದವು. ಹದಿನೆಂಟನೆಯ ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ನಗರಕೇಂದ್ರಿತ ಕೈಗಾರಿಕೆಗಳು ಯಂತ್ರಗಳಿಂದ ಉತ್ಪಾದಿಸಿದ ವಸ್ತುಗಳು ಹಳ್ಳಿಗಳ ಕಡೆಗೆ ಹರಿಯತೊಡಗಿದಂತೆ. ಉದಾ: ಮಂಗಳೂರು ಹೆಂಚು. ಆ ಕ್ಷಣದಿಂದಲೇ ಹಳ್ಳಿಗಳಲ್ಲಿದ್ದ ಸಾಂಪ್ರದಾಯಕ ಕುಶಲಕರ್ಮಿಗಳು ಅದರ ಗಾಢ ಪರಿಣಾಮಗಳನ್ನು ಅನುಭವಿಸಬೇಕಾಯಿತು. ಕುಶಲಕರ್ಮಿಗಳು ತಮ್ಮ ಕೈಗಳಿಂದ ಸಿದ್ಧಪಡಿಸಿ ಮಾರಾಟ ಮಾಡುವ ವಸ್ತುಗಳಿಗಿಂತ ಕೈಗಾರಿಕೆಗಳು ಉತ್ಪಾದಿಸಿದ ವಸ್ತುಗಳ ಬೆಲೆಗಳು ಕಡಿಮೆ ಇದ್ದುದರಿಂದ ಜನರು ಸಹಜವಾಗಿ ಅಗ್ಗದ ಬೆಲೆಯ ವಸ್ತುಗಳನ್ನೇ ಕೊಳ್ಳತೊಡಗಿದರು. ಇದಕ್ಕೆ ಬಹುಮುಖ್ಯ ಕಾರಣ, ಕರಕುಶಲ ಕಲೆಗಳಲ್ಲಿ ವ್ಯಕ್ತವಾಗುವ ಸೌಂದರ್ಯ, ವಿನ್ಯಾಸ, ತಾಂತ್ರಿಕ, ಕೌಶಲ್ಯ ಮತ್ತು ಸಾಂಪ್ರದಾಯಿಕ ಪ್ರಜ್ಞೆ ಮುಂತಾದ ಮೌಲ್ಯಗಳು ಹಾಗೂ ಗುಣಗಳು. ಜೊತೆಗೆ ಪದೇ ಪದೇ ಬಂದ ಬರ, ಕ್ಷಾಮಗಳು ಹಳ್ಳಿಯ ಗುಡಿ ಕೈಗಾರಿಕೆಗಳಿಗೆ ಕೊಡಲಿ ಪೆಟ್ಟು ನೀಡಿತು. ಏಕೆಂದರೆ, ಅವುಗಳಲ್ಲಿ ಹಿಂದುಳಿದ ತಂತ್ರಜ್ಞಾನದಿಂದ ಅವಾಗಿಯೇ ಅವನತಿಯತ್ತ ಸಾಗಿದವು. ಇದರಿಂದ ಶ್ರಮಿಕ ವರ್ಗವು ಕೂಲಿಕಾರ್ಮಿಕರಾಗಿ ಬದಲಾದರು ಹಾಗೂ ಕೆಲವೇ ಕುಶಲಕರ್ಮಿಗಳು ಮಾತ್ರವೇ ಕೆಲವು ಪ್ರದೇಶಗಳಲ್ಲಿ ಉಳಿದುಬಂದರು. ಉದಾ: ಇಟ್ಟಗಿ ಗ್ರಾಮದ ವಾಸಿಯಾದ ಹಂಸಾನಂದಚಾರ್ಯರ ವಂಶಸ್ಥರು.

ಆಧುನಿಕ ಉಪಕರಣಗಳಿಂದ ಶ್ರಮಿಕವರ್ಗದವರ ಎದೆ ಮೇಲೆ ಕಲ್ಲು ಚಪ್ಪಡಿ ಎಳೆದಂತಾಗಿ ರುವುದರಿಂದ ಇವರ ಬದುಕು ತ್ರಿಶಂಕು ಸ್ಥಿತಿಯಲ್ಲಿರುವುದು ಶೋಚನೀಯ. ಗೃಹೋಪಯೋಗಿ ಸಾಮಗ್ರಿಗಳಲ್ಲಿ ಬಹುಪಾಲು ಸ್ಟೀಲ್ ಹಾಗೂ ಪ್ಲಾಸ್ಟಿಕ್ ಸಾಮಗ್ರಿ ಆವರಿಸಿಕೊಂಡಿದ್ದ ಕಾರಣ ಶ್ರಮಿಕವರ್ಗ ತಯಾರಿಸುತ್ತಿದ್ದ ಸಾಮಗ್ರಿಗಳು ದಿನದಿಂದ ದಿನಕ್ಕೆ ಕಣ್ಮರೆಯಾದವು. ಹರಪನಹಳ್ಳಿ, ಹಡಗಲಿ, ಇಟ್ಟಗಿ, ರಾಯದುರ್ಗ, ಕೂಡ್ಲಿಗಿ, ಕೊಟ್ಟೂರು ಹಾಗೂ ಸುತ್ತಮುತ್ತಲಿನ ಶಿವಪುರ, ಬೌಡಾಪುರ, ಇಮ್ಮಡಾಪುರ ಮುಂತಾದ ಗ್ರಾಮಗಳಲ್ಲಿನ ನೇಕಾರರು, ಕುಂಬಾರರು, ಚಮ್ಮಾರರು, ಕಮ್ಮಾರರು ಇತ್ಯಾದಿ ಶ್ರಮಿಕವರ್ಗವು ತಲೆಮಾರುಗಳಿಂದ ತಮ್ಮ ಕುಲಕಸುಬನ್ನು ಮುಂದುವರಿಸಿ

ಕೊಂಡು ಬಂದಿದ್ದರೂ ಅವರ ಸ್ಥಿತಿ ಮಾತ್ರ ಆರಕ್ಕೇರಿಲ್ಲ ಮೂರಕ್ಕಿಳಿದಿಲ್ಲ. ಇದರಿಂದ ಎಷ್ಟೋ ಜನರು ನಗರಗಳಿಗೆ ವಲಸೆ ಬಂದು ಕೂಲಿ ಕಾರ್ಮಿಕರಾದರು.

ಬಳ್ಳಾರಿ ಜಿಲ್ಲೆಯ ಕೃಷಿಕರು ವ್ಯವಸಾಯವೇ ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡು ಒಳ್ಳೆ ಫಲವತ್ತಾದ ಭೂಮಿಯಲ್ಲಿ ಹತ್ತಿ, ಭತ್ತ, ಜೋಳ, ರಾಗಿ, ಕಬ್ಬು, ಸೂರ್ಯಕಾಂತಿ, ಶೇಂಗ ಇತ್ಯಾದಿ ಬೆಲೆಗಳನ್ನು ಬೆಳೆದು ನೆಮ್ಮದಿಯಿಂದ ಜೀವನ ನಡೆಸುತ್ತಿದ್ದರು. ಈ ರೀತಿ ಯಾವ ನೆಮ್ಮದಿಯ ಬದುಕು ಬಹಳ ದಿವಸ ಇರಲಿಲ್ಲ. ಏಕೆಂದರೆ, ಅತ್ಯಂತ ಹೊರೆಯಾಗಿದ್ದ ತೆರಿಗೆ ಪದೇ ಪದೇ ಸಂಭವಿಸುತ್ತಿದ್ದ ಬರಗಾಲ-ಕ್ಷಾಮದಿಂದ ತೆರಿಗೆಯನ್ನು ಕಟ್ಟಲಾಗದೆ ಬ್ರಿಟಿಷ್ ಅಧಿಕಾರಿಗಳಿಗೆ ಉದಾಸೀನರಾಗಿದ್ದರು. ಇದರಿಂದ ಕೆಲವು ಕೃಷಿಕರು ಯಂತ್ರದ ಗಿರಣಿಗಳಿಗೆ ಪ್ರವೇಶಿಸಿದರೆ, ಕೆಲವರು ಕೂಲಿಕಾರ್ಮಿಕರಾದರು. ಇನ್ನೂ ಕೆಲವರು ಕೃಷಿಕರಾಗಿಯೇ ಉಳಿದರು. ಕಾರ್ಲ್‌ಮಾರ್ಕ್ಸ್ ತನ್ನ 'ದಿ ಎಕನಾಮಿಕ್ ಅಂಡ್ ಫಿಲಾಸಫಿಕ್ ಮ್ಯಾನುಸ್ಕ್ರೀಪ್ಟ್ ಆಫ್ ೧೮೪೪' ಎಂಬ ಕೃತಿಯಲ್ಲಿ ಕೂಲಿ ದುಡಿಮೆಯ ಪ್ರಕ್ರಿಯೆಯ ಬಗ್ಗೆ ವಿಶ್ಲೇಷಿಸುತ್ತಾ, 'ಯಂತ್ರದ ಆಗಮನ ಮಾನವನನ್ನು ಹಿಂದೆಂದೂ ಕಾಣದ ಪ್ರಮಾಣದಲ್ಲಿ ಕುಬ್ಜಗೊಳಿಸಿತು. ಮಾರ್ಕ್ಸ್‌ನ ಸಾಧನೆಯ ಮಹತ್ತ್ವ ಅಡಗಿರುವುದು ಆಧುನಿಕ ಯಂತ್ರವು ಮಾನವನ ಅವನತಿಯ ಪ್ರಾರಂಭಕ್ಕೆ ನಾಂದಿ ಹಾಡಿದ ಬಗೆಯನ್ನು ತೋರಿರುವ ಆತನ ಸಂವೇದನಾಶೀಲತೆಯಲ್ಲಿ ಈ ಬಗ್ಗೆ ಅಂದಿನಿಂದ ಇಂದಿನವರೆಗೆ ಬಹಳಷ್ಟು ಬರಹಗಳು, ತಿಳಿವಳಿಕೆಗಳು ಹರಿದುಬಂದಿವೆ'.[೧೪]

'೧೯ನೆಯ ಶತಮಾನದ ಉತ್ತರಾರ್ಧದಲ್ಲಿ, ಸಾರ್ವಜನಿಕ ರಂಗವೊಂದು ಅಸ್ತಿತ್ವಕ್ಕೆ ಬಂದಿತು. ರೈಲ್ವೆ ಅತಿದೊಡ್ಡ ಸಾರ್ವಜನಿಕ ಖಾತೆಯಾಗಿತ್ತು'.[೧೫] ಇದರ ಜೊತೆಗೆ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರವರ ಇಲಾಖೆಯ ವತಿಯಿಂದ ರಸ್ತೆ-ಸಾರಿಗೆ ನಿರ್ಮಾಣ ಕಾರ್ಯಗಳು, ಅಣೆಕಟ್ಟು-ಕಾಲುವೆ ನಿರ್ಮಾಣಗಳು, ಸಾರ್ವಜನಿಕ ವಿಶ್ರಾಂತಿ ಧಾಮಗಳು, ರಕ್ಷಣಾ ಕಟ್ಟಡಗಳ ನಿರ್ಮಾಣ ಕಾರ್ಯಗಳು ಹಾಗೂ ಕೈಗಾರಿಕೆಗಳು ಆರಂಭವಾಗಿದ್ದರಿಂದ ಸ್ಥಳೀಯ ಕಾರ್ಮಿಕರ ಜೊತೆಗೆ ತಮಿಳುನಾಡು ಮತ್ತು ಆಂಧ್ರದಿಂದ ಬಂದ ಕೂಲಿ ಕಾರ್ಮಿಕರು ಕಟ್ಟಡಗಳ ನಿರ್ಮಾಣ ಕಾರ್ಯಗಳಲ್ಲಿ ಕಾರ್ಯನಿರ್ವಹಿಸಿ ಬಳ್ಳಾರಿ ಜಿಲ್ಲೆಯಲ್ಲಿಯೇ(ಹೊಸಪೇಟೆ ಯಲ್ಲಿ) ನೆಲೆ ನಿಂತಿದ್ದಾರೆ. 'ಕ್ರಿ.ಶ. ೧೯೦೧ರಲ್ಲಿ ರೈಲ್ವೆ ಇಲಾಖೆಗೆ ೬೦,೦೦೦ ರಿಂದ ೭೯,೦೦೦ ಸಾವಿರಕ್ಕೆ ಕೆಲಸಗಾರರನ್ನು ನೇಮಿಸಲಾಯಿತು'.[೧೬] ಇದರಿಂದ ಶ್ರಮಿಕ ವರ್ಗಕ್ಕೆ ಉದ್ಯೋಗವನ್ನು ನೀಡಿ ಅವರಿಗೆ ಜೀವನದ ಅಭಿವೃದ್ಧಿ ಸಾಧನೆಗೆ ನೆರವಾದವು.

ಬಳ್ಳಾರಿ ಜಿಲ್ಲೆಯ ಎಲ್ಲಾ ತಾಲೂಕು ಪಟ್ಟಣ ಅಥವಾ ನಗರಗಳಿಂದ ಹೊರಗಿರುವ ಯಾರನ್ನೇ ಪ್ರಶ್ನಿಸಿ, ಅವರು ಯಂತ್ರ ತಮ್ಮ ದುಡಿಮೆಯನ್ನು ಕಸಿದುಕೊಂಡ ಕತೆಯನ್ನು ಹೇಳುತ್ತಾರೆ. ಕುಂಬಾರರು, ನೇಕಾರರು, ಕಮ್ಮಾರರು, ಬಡಗಿಗಳು ಇವರೆಲ್ಲರನ್ನು ಯಂತ್ರ ಅವರ ಕೆಲಸದಿಂದ ಉಚ್ಚಾಟಿಸಿ ಅವರ ಸ್ಥಾನದಲ್ಲಿ ತಾನು ಬದಲಿಯಾಗಿ ಕಾರ್ಯನಿರ್ವಹಿಸುತ್ತಿದೆ.

ಮಹಿಳೆಯರ ಕೆಲಸವನ್ನೂ ಎಲ್ಲ ಕಡೆಯಲ್ಲೂ ಯಂತ್ರ ಕಸಿದುಕೊಂಡಿದೆ. ಗ್ರಾಮೀಣ ಪ್ರದೇಶದಲ್ಲಿ ಸುಮ್ಮನಿರುವ ಲಕ್ಷಾಂತರ ಮಂದಿ ಕೆಲಸವನ್ನು ಕಳೆದುಕೊಂಡು ನಿರುದ್ಯೋಗಿಗಳಾಗಿದ್ದಾರೆ.

### ೫.೩. ಕಲಾವಿದರು

ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯ ಕಾಲಾವಧಿಯಲ್ಲಿ ಭಾರತೀಯ ಎನ್ನಬಹುದಾದ ಯಾವ ಕಲೆಗಳಿಗೂ ಮನ್ನಣೆ ಇರಲಿಲ್ಲ ಹಾಗೂ ಅವುಗಳನ್ನು ಅಭ್ಯಾಸ ಮಾಡಲು ಅವಕಾಶವೂ ಇರಲಿಲ್ಲ. ಇದರಿಂದ ಇಲ್ಲಿನ 'ಶ್ರೀಮಂತ ಪರಂಪರೆಯು ಒಂದು ರೀತಿ ಕಳೆದು ಹೋದ ಸಂಸ್ಕೃತಿಯ ಮಾನವಶಾಸತ್ರದ ಪಳೆಯುಳಿಕೆಯಾಗಿತ್ತು'.[೧೭] ಇದೇ ಸಂದರ್ಭದಲ್ಲಿ ಭಾರತಕ್ಕೆ ಬರುತ್ತಿದ್ದ ವಿದೇಶಿ ವ್ಯಾಪಾರಿಗಳು, ಯಾತ್ರಿಕರು, ಸಂಶೋಧಕರು, ಕಲಾವಿದರು, ಆಡಳಿತ ಅಧಿಕಾರಿಗಳು, ಧರ್ಮದ ಪ್ರಚಾರಕರು ಕ್ಷೇತ್ರಕಾರ್ಯ ಅಥವಾ ತಮ್ಮ ಸೇವೆ ನಿರ್ವಹಿಸುತ್ತಿದ್ದಂತ ಸಂದರ್ಭದಲ್ಲಿ ಆಸ್ಮಿಕವಾಗಿ ದೊರೆತ ಅಥವಾ ಶೋಧಿಸಿದ ಪ್ರಾಚೀನ ಮಾನವನ ನೆಲೆ, ಚಿತ್ರಕಲೆ, ಗುಡಿ-ಗೋಪುರಗಳು, ಅವರು ಬಳಸಿರುವ ಸಾಮಗ್ರಿಗಳನ್ನು ಸಂಗ್ರಹಿಸಿ, ದಾಖಲು ಮಾಡಿದರು. ಇಲ್ಲಿನ ಶ್ರೀಮಂತ ಸಂಸ್ಕೃತಿಯನ್ನು ಕಂಡು, ದಿಗಭ್ರಮೆಗೊಂಡ ವಿದೇಶಿ ಕಲಾವಿದರು ಇಲ್ಲಿನ ಕಲೆ ಮತ್ತು ವಾಸ್ತುಶಿಲ್ಪವನ್ನು ನಕಲು ಮಾಡಿ, ಭಾರತೀಯ ಪರಿಕಲ್ಪನೆಗಳಿಗೆ ಪಾಶ್ಚಾತ್ಯ ಕಲಾತಂತ್ರಗಳನ್ನು ಅಳವಡಿಸಿದ್ದಾರೆ.

ಲಿಯೋನಾರ್ಡೋ ಡಾ. ವಿಂಚಿ ಮತ್ತು ಮೈಕಲ್ ಏಂಜಲೋ ಪುನರುಜ್ಜೀವನ ಕಾಲದ ಶ್ರೇಷ್ಠ ಚಿತ್ರಕಾರರು, ಶಿಲ್ಪಿಗಳು, ಎಂಜಿನಿಯರ್‌ಗಳು, ಪ್ರಕೃತಿಯ ಪರಿಶೋಧಕರು ಮತ್ತು ಅನೇಕರಾಗಿದ್ದರು. ಇವರ ಆಕೃತಿಗಳು ಏಸುಕ್ರಿಸ್ತನ ಜೀವನ ಚರಿತ್ರೆ ಅಥವಾ ಆತನ ಅಂತಿಮ ರಾತ್ರಿಯ ಭೋಜನದ ಪ್ರಾರಂಭದ ಗಂಭೀರವಾಗಿ ಪರಸ್ಪರ ಹೆಣದುಕೊಂಡಿರುವ ವಸ್ತುಗಳನ್ನು ಒದಗಿಸುತ್ತವೆ. ಈತನ ಕಲಾಕೃತಿಗಳಿಂದ ಪ್ರಭಾವಿತರಾದ ನಂತರದ ಕಲಾವಿದರು ಕ್ರೈಸ್ತ ದೇವಾಲಯಗಳಲ್ಲಿ ತೈಲವರ್ಣದ ಚಿತ್ರಗಳನ್ನು ಹೆಚ್ಚು ಸೂಕ್ಷ್ಮದ ಕೆಲಸಗಳನ್ನು ಮಾಡತೊಡಗಿದರು. ಭಾರತಕ್ಕೆ ಬಂದ ಕ್ರೈಸ್ತ ಕಲಾವಿದರು ಗೋವಾ, ಕೆಳದಿ, ಮಂಗಳೂರು, ದಕ್ಷಿಣ ಕನ್ನಡ ಇತ್ಯಾದಿ ಸ್ಥಳಗಳಿಗೆ ಬಂದು ನೆಲೆ ನಿಂತರು. 'ಕೆಲದಿ ಅರಸರ ಕಾಲವಾಧಿಯಲ್ಲಿ ಸೊರಬ ಮತ್ತು ಸಾಗರದಲ್ಲಿ ಹಿಂದೂ ಕಲಾವಿದರು ಗಂಧದ ಮರದಿಂದ ತಯಾರಿಸುತ್ತಿದ್ದ ಗುಡಿಗಾರಿಕೆಯ ಕಲಾಕೃತಿಗಳ ತಂತ್ರಜ್ಞಾನವನ್ನು ಅನುಸರಿಸಿದ ಕ್ರೈಸ್ತ ವಲಸಿಗರು ತಮ್ಮ ಧರ್ಮಕ್ಕೆ ಸಂಬಂಧಪಟ್ಟ ಕಲಾಕೃತಿಗಳನ್ನು ತಯಾರಿಸುವುದಕ್ಕಾಗಿ, ಗುಡಿಗಾರಿಕೆಯನ್ನು ಕಲಾವಿದರು ಬಳಸಿದರು'.[೧೮] ಇದರ ಜೊತೆಗೆ ತೈಲವರ್ಣ, ಜಲವರ್ಣ ಚಿತ್ರಗಳನ್ನು ಬಿಡಿಸಲಾರಂಭಿಸಿದರು.

ರಾಜಾ ರವಿವರ್ಮನು ಪಾಶ್ಚಾತ್ಯ ಮಾದರಿ ಚಿತ್ರೀಕರಣ ಕಲೆಯಲ್ಲಿ 'ಯಥಾದರ್ಶನತತ್ವ' ವಿಶೇಷವಾಗಿ ಬಳಸಿಕೊಂಡಿರುವುದರಿಂದ ಚಿತ್ರಕಲೆ, ಚಲನಚಿತ್ರ ಕ್ಷೇತ್ರದಲ್ಲಿ ಕ್ರಾಂತಿಯನ್ನೇ ಮಾಡಿದರು. ಈತನ ಪ್ರಭಾವದಿಂದ ಚಿತ್ರಕಲೆಯಲ್ಲಿ ಹೊಸ ಬಗೆಯ ಸ್ಮರಣಚಿತ್ರ ಕಲ್ಪಾನಾಚಿತ್ರ, ನಿಸರ್ಗ

